# ಶ್ರೀ ಶೇಷಾಚಲ ಗ್ರಂಥಮಾಲೆಯ ಪುಸ್ತಕಗಳು

**ನಮ್ಮಲ್ಲಿಯ ಐತಿಹಾಸಿಕ ಕಾದಂಬರಿ**

೧ ಅಲ್ಲಾಹೋ ಅಕಬರ [೨ನೇ ಆ.] ೧೦ಆ
೨ ಅಡಮುಟ್ಟ ಸಿಪಾಯಿ ೩ಆ
೩ ಅಮಾತ್ಯರಾಕ್ಷಸ ೪ಆ
೪ ಅಮಾತ್ಯ ನಂದಿನಿ ಗ್ಲೇಜ ೧॥ ರೂ.
,, ರಫ್ ೧। ರೂ.
೫ ಆತ್ಮಬಲಿ ಗ್ಲೇಜ ೧ರೂ.
,, ರಫ್ ೧೪ ಆ
೬ ಈಶಸಂಕಲ್ಪ ಗ್ಲೇಜ ೧೪ಆ
,, ರಫ್ ೧೨ಆ
೭ ಊರ್ಮಿಳೆ ೧೨ಆ
೮ ಎಚ್ಚಮ ನಾಯಕ ೮ಆ
೯ ಕಂಕಣಚೋರ [೨ನೇ ಆ.] ೧।ರೂ.
೧೦ ಗಜಪತಿ ಸಪ್ತಾಂಗ ಹರಣ ೧।ರೂ.
,, ರಫ್ ೧ರೂ. ೨ಆ
೧೧ ಗೆಲುವಿನ ಕತ್ತಿ (೨ನೇಆ.) ೧೨ಆ.
೧೨ ಚಾಲುಕ್ಯರ ಅಭ್ಯುದಯ (೨ನೇ ಆ) ೧೨ಆ
೧೩ ಜೋಧ್ಯಪುರದ ಜೋಜಿಗರಾಯ ೨ರೂ
,, ರಫ್ ೧॥।ರೂ.
೧೪ ಚಟುರಿ ಗ್ಲೇಜ ೧।ರೂ.
,, ರಫ್ ೧ರೂ.
೧೫ ಜಕಣಾಚಾರ್ಯ [೨ನೇ ಆ.] ೧೪ಆ
೧೬ ಮಹಾತ್ಮಾ ತುಲಸೀದಾಸ ೧॥ರೂ.
,, ರಫ್ ೧। ರೂ.
೧೭ ತಾಯಿನಾಡು ೧ರೂ.
೧೮ ದೈವಸಂಕಲ್ಪ [೨ನೇ ಆ.] ೧೪ಆ.
,, ರಫ್ ೧೨ಆ
೧೯ ನರವೀರ ಕಾಸೀಮ [೨ನೇ ಆ.] ೧।ರೂ
,, ರಫ್ ೧ರೂ
೨೦ ನೇತಾಜಿ [೪ನೇ ಆ] ೮ ಆ
೨೧ ಪತಿತೋದ್ಧರಣ [೨ನೇ ಆ] ೪ಆ
,, ರಫ್ ೩ಆ
೨೨ ಪ್ರಾರಬ್ಧ ಪ್ರಹಾರ ೪ಆ
೨೩ ಪರಾವರ್ತನ ೮ಆ
೨೪ ಪ್ರಾಣದಾನ ೩ಆ
೨೫ ಪ್ಲಾಸಿಯ ಕದನ ೩ಆ
೨೬ ಪರಮೇಶ್ವರ ೬ಆ
೨೭ ಪರಿಣಾಮ ಗ್ಲೇಜ ೧ ರೂ. ೪ ಆ
,, ರಫ್ ೧ ರೂ. ೨ ಆ
೨೮ ಫಿರಂಗಿಗಳ ಉತ್ಪಾತ ೧ರೂ
೨೯ ಬಲಿದಾನ ಗ್ಲೇಜ ೧ರೂ. ೪ಆ
,, ರಫ್ ೧ರೂ. ೨ಆ
೩೦ ಭಯಂಕರ ಸೇಡು ಗ್ಲೇಜ ೧॥ರೂ.
,, ರಫ್ ೧। ರೂ.
೩೧ ಭಾಗ್ಯೋದಯ ೮ಆ
೩೨ ಮಾತೃಭೂಮಿಗಾಗಿ (೨ನೇ ಆ) ೩ಆ
೩೩ ಮಂದಾಕಿನಿ ೧೨ಆ
೩೪ ರಕ್ತಸಿಂಚನ [೨ನೇ ಆ.] ೨ಆ
೩೫ ರಾಣೀ ಕುರಂಗಿ ೩ಆ
೩೬ ರಾಣೀ ಅರುಣಕುಮಾರಿ ೧ರೂ
೩೭ ವಡಗಾವದ ವಿಜಯ [೨ನೇ ಆ.] ೧।ರೂ
,, ರಫ್ ೧ರೂ.
೩೮ ವಿಮಲಾ [೨ನೇ ಆ.] ಗ್ಲೇಜ ೧೪ಆ
,, ರಫ್ ೧೨ಆ
೩೯ ವೀರಕಾಂತಾ [೨ನೇ ಆ.] ೧೦ಆ
೪೦ ವೀರಕುಮಾರಿ ಕನಕಲತೆ ೩ಆ
೪೧ ಶಕ್ತಿಮಯೀ [೨ನೇ ಆ.] ಗ್ಲೇಜ ೧ರೂ
,, ರಫ್ ೧೪ಆ
೪೨ ಶೌರ್ಯಸಂಜೀವನ ೧೪ಆ
೪೩ ಸತ್ಯಮೇವ ಜಯತೆ ೧೨ಆ
೪೪ ಸೂರ್ಯಾಸ್ತ ೮ಆ
೪೫ ಸೂರ್ಯಗ್ರಹಣ ೧ರೂ
೪೬ ಹಂಸಾ (೨ನೇ ಆವೃತ್ತಿ) ೧। ರೂ.
೪೭ ಹಿಂದೂ-ಮುಸಲ್ಮಾನರೈಕ್ಯ (೨ನೇ ಆ) ೩ಆ

(ಈ ಪುಸ್ತಕದ ಕೊನೆಯ ಪುಟದಲ್ಲಿ ನೋಡಿರಿ)

# ಸಾಧನ-ಕುಟೀರ

(ಆಧುನಿಕ ಭಾರತವರ್ಷಕ್ಕೆ ಸಂಬಂಧಿಸಿದ
ಒಂದು ಸಾಮಾಜಿಕ ಕಾದಂಬರಿ)

ಬರೆಹಗಾರರು:

ಭಾರತೀಸುತ.

("ಅಮಾತ್ಯನಂದಿನಿ" 'ನನ್ನ ಅತ್ತಿಗೆ' ಇವುಗಳ ಕರ್ತೃ)

ಲೋಕಸೇವೆಯು ಮತ್ತೆ ಪರಮೇಶ ಭಕ್ತಿಯದು
ಹೆಸರೆರಡು ಮಾತೊಂದೆ ಅರ್ಥದಲ್ಲಿ!
ಏಕಾಂತ ವನದೊಳಗೆ ಕುಳಿತಂತಾಗುವದೇನು?
ಉಚಿತ ಪೌರುಷ ವೀರಕರ್ಮವೆಲ್ಲಿ?

ವಿಲಸನ ೧೫೫

ಪ್ರಕಾಶಕ:

ಯು. ಗು. ಕುಲಕರಣಿ,

ಸಂಪಾದಕ ಸ. ಚ.

ಆನಂದವನ-ಅಗಡಿ

೧೯೪೦

ಬೆಲೆ ೧-೪-೦

# ಬರೆಹಗಾರನ ಬಿನ್ನಹಗಳು.

ಕನ್ನಡದಮ್ಮನ ಚರಣದಾವರೆಗಳಲ್ಲಿ ಈ ನನ್ನ ಕಿರಿಯ ಸೇವೆಯನ್ನು ಸಮರ್ಪಿಸಿದ್ದೇನೆ ಸಹೃದಯರಾದ ವಾಚಕಮಂಡಲಿಯ ಮುಂದೆ ಈ ನನ್ನ ಕೃತಿಯನ್ನು ನಿವೇದಿಸಲು ನನಗೆ ಸಂತೋಷವಿದೆ. ಕುಂದು-ಕೊರತೆಗಳು ಈ ಪಾಮರನ ಕೃತಿಯಲ್ಲಿರಬಹುದು; ಆದರೆ ವಾಚಕರು ಅವುಗಳನ್ನು ಕ್ಷಮಿಸಬೇಕಾಗಿ ನನ್ನ ಪ್ರಾರ್ಥನೆ.

ಕಳೆದ ಸಾವಿರಾರು ವರ್ಷಗಳಿಂದ ಗಂಭೀರವಾಗಿ ಗಂಗಾಪ್ರವಾಹದಂತೆ ಹರಿದುಬಿದ್ದಿರುವ ಕನ್ನಡದ ಸಾಹಿತ್ಯವಾಹಿನಿಯಲ್ಲಿ ಈ ನನ್ನ ಕಿರಿಯ ತೊಟ್ಟನ್ನು ಸೇರಿಸಿದ್ದೇನೆ ಈ ಕೃತಿಯು ನನ್ನದೆಂಬ ದುರಭಿಮಾನವೇಕೆ? ಕನ್ನಡತಾಯಿಯದಾಗಿದೆ ಇದು ಆ ಜನನಿಯು ಈ ಲೇಖಕನಿಗೆ ಕೃತಿಯನ್ನು ರಚಿಸುವ ಶಕ್ತಿಯನ್ನು ನೀಡದಿದ್ದರೆ, ಪಾಮರನಾದ ನನಗೆ ಅದೆಲ್ಲಿ ಸಾಧ್ಯವು?

ಈ ಕಾದಂಬರಿಯ ಕಥಾವಸ್ತುವು ಒಂದು ಸಾಮಾಜಿಕ ವಿಷಯವಾಗಿದೆ; ಸಾಧ್ಯವಾದ ಮಟ್ಟಿಗೆ ನಾಡಸೇವೆಯ ರೂಪವನ್ನು ನಾನಿಲ್ಲಿ ಚಿತ್ರಿಸಲು ಉದ್ಯಮಿಸಿದ್ದೇನೆ. ಇಂದಿನ ಭಾರತವರ್ಷದ ರೂಪವನ್ನು ಬರೆಯಲು ಯತ್ನಿಸಿದ್ದೇನೆ. ಈ ನನ್ನ ಪ್ರಯತ್ನಗಳು ಎಷ್ಟರ ಮಟ್ಟಿಗೆ ಸಫಲವಾದುವು ಎಂಬುದನ್ನು ನಿರ್ಧರಿಸುವ ಭಾರವು ವಾಚಕರದು.

ಕನ್ನಡ ಸಾಹಿತ್ಯದಲ್ಲಿ ರಾಷ್ಟ್ರೀಯವಾದ ಪುಸ್ತಕಗಳೇ ವಿರಳ; ತಾಯ್ನಾಡಿನ ಸದ್ಯದ ಪರಿಸ್ಥಿತಿಯನ್ನು ಕುರಿತುಳ್ಳ ಪುಸ್ತಕಗಳನ್ನು ನಾವಿಂದು ರಚಿಸಬೇಕಾಗಿವೆ. ಭಾರತವರ್ಷವು ತನ್ನ ಬಿಡುಗಡೆಗಾಗಿ ಹೂಡಿದ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತು ಎಷ್ಟು ಪುಸ್ತಕಗಳು ಹುಟ್ಟಿದರೂ ಸಾಲದು; ಆದರೂ ಕನ್ನಡ ಸಾಹಿತ್ಯದಲ್ಲಿ ರಾಷ್ಟ್ರಭಾವನೆಯ ಕಿರಣಗಳು ಪ್ರವೇಶಿಸವೆ ಇಲ್ಲ. ನವೀನ ಕನ್ನಡ ಸಾಹಿತ್ಯದ ರಸ ಋಷಿಗಳಾದ 'ಬಿ. ಎಂ. ಶ್ರೀ' ಯವರು ನಿದ್ದೆಯಲ್ಲಿ ಬಿದ್ದಿರುವ ತಾಯ್ನಾಡನ್ನು ಕುರಿತು, "ಭರತ ಮಾತೆಯೆ ಭರತ ಮಾತೆಯೆ ಎಂದು ನೀ ತಲೆಯೆತ್ತುವೆ?" ಎಂದು ಹಾಡಿ ಎಚ್ಚರಿಸಿರುತ್ತಾರೆ. ಶ್ರೀ 'ಬೇಂದ್ರೆ'ಯವರು "ಮೂವತ್ತು ಮೂರು ಕೋಟಿಯು"ಲ್ಲಿ ತಾಯ್ನಾಡಿನ ಇಂದಿನ ವೈನೀಯ ಚಿತ್ರವನ್ನು ಬರೆದಿದ್ದಾರೆ. ಆ ಹಿರಿಯರು ಹಾಕಿಕೊಟ್ಟ ದಾರಿಯನ್ನು ಅವಲಂಬಿಸಿ, ನಮ್ಮ ನಾಡಜೀವನಕ್ಕೆ ಸಂಬಂಧಿಸಿದ ಈ ಕಾದಂಬರಿಯನ್ನು ಬರೆಯಲು ನಾನು ಉದ್ಯುಕ್ತನಾದೆನು.

ಇದೇನು! ಈ ಕಾದಂಬರಿಯಲ್ಲಿ ಆಧ್ಯಾತ್ಮಿಕ ವಿಚಾರಗಳನ್ನು ತುಂಬಿರುವೆ? ಎಂಬುದಾಗಿ ಹಲವರು ನನ್ನನ್ನು ಪ್ರಶ್ನಿಸಬಹುದು; ನಾನು ಹೇಳುವದಿಷ್ಟೆ; ಪಾಶ್ಚಾತ್ಯ ಸಂಸ್ಕೃತಿ[illegible] ಭಾರತೀಯ ಸಂಸ್ಕೃತಿಯು ವಿಭಿನ್ನವಾದುದಾಗಿದೆ. ನಮಗೆ ಭೌತಿಕವಾದಕ್ಕಿಂತ ಪಾರಮಾರ್ಥಿಕವಾದವು ಪ್ರಿಯವಾದುದಾಗಿದೆ ನಮ್ಮ ನಾಡಿನ ಇತಿ

ಹಾಸವನ್ನು ಒಮ್ಮೆ ವಿಹಂಗಮ ದೃಷ್ಟಿಯಲ್ಲಿ ಅವಲೋಕಿಸಿದರೆ, ನಮ್ಮ ನಾಡಿನಲ್ಲಿ ಕಳೆದ ಅನೇಕ ಸಹಸ್ರ ಸಂವತ್ಸರಗಳಿಂದಲೂ ಬೆಳಗಿ ಬಾಳಿದ್ದ ಸಾಮ್ರಾಜ್ಯಗಳ ತಳಹದಿಯು ಧರ್ಮವಾಗಿದೆ ಎಂಬುದು ವ್ಯಕ್ತವಾಗುವುದು. ಆ ಸಾಮ್ರಾಜ್ಯಗಳನ್ನು ಆಳುವ ಅರಸರು ಧರ್ಮಕ್ಕೆ ಚ್ಯುತಿ ತರಲು, ಅವು ನಶಿಸಿದುವು. ಕನ್ನಡ ನಾಡಿನಲ್ಲಿ ಬೆಳಗಿದ ವಿಜಯನಗರ ಸಾಮ್ರಾಜ್ಯದ ಹಾಗು ಮಹಾರಾಷ್ಟ್ರ ಶಕ್ತಿಯ ತಳಹದಿಯು ಸಹ ಧರ್ಮವೇ ಆಗಿದ್ದಿತು. ಈ ಉದಾಹರಣೆಗಳಿಂದ ಭಾರತವರ್ಷವು ಪುನರುತ್ಥಾನವನ್ನು ಹೊಂದಬೇಕಾದರೆ ಧರ್ಮವು ಅತ್ಯಾವಶ್ಯಕವಾಗಿದೆ. ಕೇವಲ ಭೌತಿಕವಾದವನ್ನು ಅವಲಂಬಿಸುವದು ವಿನಾಶದ ದಾರಿಯಾಗಿದೆ. ಭೌತಿಕವಾದ ತಳಹದಿಯ ಮೇಲೆ ನಿಂತಿರುವ ಪಾಶ್ಚಾತ್ಯ ಜನಾಂಗಗಳು ಅಶಾಂತತೆಯ ಜ್ವಾಲಾಮುಖಿಯ ಮೇಲೆ ನಿಂತಿರುವ ಚಿತ್ರಗಳನ್ನು ನಾವಿಂದು ಕಾಣುತ್ತಿರುವೆವು.

ನಮ್ಮ ಅಭ್ಯುದಯವಾಗಬೇಕಾದರೆ ಪಾರಮಾರ್ಥಿಕವಾದವೂ ಭೌತಿಕವಾದವೂ ಮಿಲನವನ್ನು ಹೊಂದಬೇಕು; ಹಾಗಾದರೆ ಮಾತ್ರ ಜಗತ್ತನ್ನು ವಿಶಾಲವಾದ ಒಂದು ದೃಷ್ಟಿಕೋನದಲ್ಲಿ ನೋಡಲು ಸಾಧ್ಯವಿದೆ. ಭೌತಿಕವಾದವು ಅಭ್ಯುದಯದ ದಾರಿಯನ್ನು ತೋರಿಸುತ್ತಲಿದ್ದರೆ, ಪಾರಮಾರ್ಥಿಕವಾದವು ನಮ್ಮನ್ನು ತ್ಯಾಗಕ್ಕೆ ಪ್ರೇರೇಪಿಸುತ್ತಲಿರುವುದು. ಆದುದರಿಂದಲೇ ಮಹಾತ್ಮಾಜೀಯವರು ತಮ್ಮ ಕರ್ಮಪದ್ಧತಿಯಲ್ಲಿ ಸತ್ಯಕ್ಕೂ ಅಹಿಂಸೆಗೂ ಅಷ್ಟು ಪ್ರಧಾನವಾದ ಸ್ಥಾನ ಕೊಟ್ಟಿದ್ದಾರೆ.

ಇರಲಿ. ಈ ನನ್ನ ಅಲ್ಪ ಕೃತಿಯನ್ನು ಕನ್ನಡಿಗರು ಸ್ವೀಕರಿಸಿ, ಇನ್ನೂ ಹೆಚ್ಚಿನ ಪ್ರಯತ್ನಗಳಿಗೆ ದಾರಿಯನ್ನು ತೋರಿಸಿ ಕೊಡಬೇಕೆಂದು ಬೇಡಿಕೊಳ್ಳುತ್ತೇನೆ. ಆದರಂತೆಯೇ ಈ ಪುಸ್ತಕದಲ್ಲಿರುವ ಕುಂದು-ಕೊರತೆಗಳನ್ನು ಕ್ಷಮಿಸಬೇಕಾಗಿ ಬಿನ್ನಹ.

ಈ ಕೃತಿಯನ್ನು ಸದ್ಬೋಧ ಚಂದ್ರಿಕೆಯ ಸಂಪಾದಕರಾದ ಶ್ರೀ। ಯ. ಗು. ಕುಲಕರ್ಣಿಯವರು ತಮ್ಮ ಘನವಾದ ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸಲೊಪ್ಪಿದ್ದಕ್ಕೆ ಅವರಿಗೆ ನನ್ನ ಅನಂತ ವಂದನೆಗಳು.

ಪ್ರತಿಪ್ಪಾರ (ಸ್ವೈನಾಡು)
೨೫-೯-೧೯೩೮

ಕನ್ನಡಿಗರ ವಿನೀತ ದಾಸ,
**ಭಾರತೀಸುತ.**

# ಪರಿವಿಡಿ.



# ಸಾಧನ-ಕುಟೀರ.



## ೧ ಬಿರುಗಾಳಿ

ಮಧ್ಯಾಹ್ನ ಸಮಯ, ವೈಶಾಖಮಾಸದ ಕಾಲವು. ನಭೋಮಂಡಲಯದಲ್ಲಿ ರಾಜಿಸುತ್ತಲಿರುವ ಭಗವಾನ ಸೂರ್ಯನಾರಾಯಣನು, --ಈ ಜಗತ್ತು ಪಾಪಮಯ ವೆಂಬ ವಿಚಾರದಿಂದಾಗಿರಬಹುದು,—ತನ್ನ ಪ್ರಚಂಡಕಿರಣಗಳನ್ನು ಹೊರಸೂಸಿ, ವಿಶ್ವದ ಜೀವರಾಶಿಗಳನ್ನು ಹಿಂಸಿಸುವುದರಲ್ಲಿ ಉದ್ಯುಕ್ತನಾಗಿದ್ದನು. ಜನರು ಬಿಸಿಲಿನ ತಾಪವನ್ನು ಸಹಿಸಲಾರದೆ ತಮ್ಮ ನಿಲಯಗಳ ನೆರಳನ್ನು ಆಶ್ರಯಿಸಿದ್ದರು. ಪಶುಗಳಾದರೋ ತಮ್ಮ ಉದರವನ್ನು ಪೋಷಿಸುವ ಕೃತ್ಯವನ್ನು ಪರಿತ್ಯಜಿಸಿ ಮರಗಳ ನೆರಳಿನಲ್ಲಿ ಮಲಗಿ, ಮೆಲುಕು ಹಾಕಲು ಪ್ರಾರಂಭಿಸಿದ್ದುವು. ದಾರಿಗಳ ಬದಿಯಲ್ಲಿ ನಿಂತಿರುವ ದ್ರುಮಗಳು ಈ ಪ್ರಚಂಡ ಬಿಸಿಲಿನಿಂದ ಜೀವರಾಶಿಗಳು ಬಳಲುತ್ತಿರುವ ದೃಶ್ಯವನ್ನು ನೋಡಲಾಗದೆ, ಮರುಕದಿಂದ ತಂಗಾಳಿಯ ಚಾಮರವನ್ನು ಬೀಸುತ್ತಲಿದ್ದುವು.

ರಾಮನಗರದಲ್ಲಿ ಅದೊಂದು ಮನೆ. ಅದನ್ನು ನೋಡಲು ಬಹು ಚಲುವಾಗಿದ್ದಿತು. ಆ ಕಟ್ಟಡದಲ್ಲಿ ಒಬ್ಬ ಶಿಲ್ಪಿಕಲಾಕೋವಿದನ ಕೈವಾಡವು ಒಡೆದು ಕಾಣುತ್ತಲಿದ್ದಿತು. ಮನೆಯ ಮುಂದುಗಡೆ ಚಿಕ್ಕದಾದ ಒಂದು ಹೂದೋಟ. ವಿವಿಧ ಜಾತಿಯ ಹೂಗಿಡಗಳು ವಿಕಸಿತ ಸುಮಗಳೊಡನೆ ಮಂದಸ್ಮಿತವನ್ನು ಚೆಲ್ಲುತ್ತಾ ನಿಂತಿದ್ದುವು. ಹೂಗಳಲ್ಲಿ ಬೆಳಗುತ್ತಿರುವ ವಿವಿಧ ಬಣ್ಣಗಳು ತಮ್ಮ ವರ್ಣ ವೈಚಿತ್ರ್ಯವನ್ನು ಬೀರುತ್ತಾ ಸೃಷ್ಟಿಯ ಸೊಬಗನ್ನು ಹೊರಚೆಲ್ಲುತ್ತಲಿದ್ದುವು. ತೋಟದ ಮಧ್ಯದಲ್ಲಿ ಒಂದು ಕಾರಂಜಿ; ಆದರಿಂದ ಹೊರಚೆಲ್ಲುತ್ತಿರುವ ತುಷಾರಗಳ ಮೇಲೆ ದಿವಾಕರನ ರಶ್ಮಿಯು ಪತಿಸಿದುದರಿಂದ, ಕಾರಂಜಿಯು ಅತ್ಯಂತ ಮನೋಹರ ಬಣ್ಣವನ್ನು ಹೊಂದಿರುವುದು.

ಈ ಹೂದೋಟದಿಂದಲೂ, ಮನೆಯ ಆಕಾರದಿಂದಲೂ ಇದು ಒಬ್ಬ ಸಿರಿವಂತನ ನಿವಾಸಸ್ಥಾನವೆಂಬುದನ್ನು ಊಹಿಸಿಕೊಳ್ಳಬಹುದು. ನಾವು ಆ ಮನೆಯಲ್ಲಿ ಏನು ನಡೆಯುತ್ತಿದೆ? ಎಂಬುದನ್ನು ನೋಡೋಣ. ಮನೆಯ ಮಧ್ಯದಲ್ಲಿ ಒಂದು ಹಜಾರ. ಹಜಾರದ ಎರಡು ಬಳಿಗೂ ಕೊರಡಿಗಳಿರುತ್ತವೆ. ಒಂದು ಭಾಗದಲ್ಲಿರುವ ಒಂದು ಕೋಣೆಯನ್ನು ನೋಡಿದೊಡನೆಯೇ ಅದು ಒಂದು ಕಾರ್ಯಾಲೋಚನೆಯ ಕೋಣೆಯಾಗಿರುತ್ತದೆ ಎಂಬುದನ್ನು ತಿಳಿದುಕೊಳ್ಳಬಹುದು. ಕೋಣೆಯ ಗೋಡೆಯ ಮೇಲೆ ಹಲವು ಚಿತ್ರಗಳು ನಿಂತಿರುತ್ತವೆ; ಆದರೆ ಅವು ಈಗ ಸಾಧಾರಣವಾಗಿ ಜನರ ಮನೆಗಳಲ್ಲಿ ಕಂಡು ಬರುವ ಗಾಂಧೀಜಿ, ತಿಲಕ, ಲಜಪತರಾಯ ಚಿತ್ತರಂಜನದಾಸ ಇತ್ಯಾದಿ ಆಧುನಿಕ ಭಾರತದ ರಾಷ್ಟ್ರವೀರರ ಚಿತ್ರಗಳಾಗಿರಲಿಲ್ಲ. ಆದರೂ ಅವು

ಗಳನ್ನು ನೋಡಿದರೆ ಅವು ಯಾರದೆಂಬುದನ್ನು ನಾವು ತಿಳಿದುಕೊಳ್ಳಬಹುದು ದಪ್ಪದ ಮುಂಡಾಸನ್ನು ತಲೆಗಿಟ್ಟುಕೊಂಡು, ಓರೆ ಮೋರೆ ಮಾಡಿ ನಿಂತಿರುವ ಆ ಪುರುಷನ ರೂಪವನ್ನು ನೋಡಿದೊಡನೆಯೇ ಅದು ರಾಜಾರಾಮ ಮೋಹನರಾಯರ ದಾಗಿದೆ ಎಂಬುದು ವ್ಯಕ್ತವಾಗುತ್ತದೆ. ನೆರೆತ ತಲೆಗೂದಲಿನ, ಆದರೆ ಪ್ರಶಾಂತವಾದ ಮುಖಭಾವವುಳ್ಳ, ಒಂದು ದೋತರವನ್ನುಟ್ಟು ಶಾಲೊಂದನ್ನು ಹೆಗಲಮೇಲೆ ಹಾಕಿಕೊಂಡು ಎರಡು ಕೈಗಳನ್ನು ಜೋಡಿಸಿ ಕುಳಿತುಕೊಂಡ ಮುದುಕನನ್ನು ನೋಡಿದೊಡನೆಯೇ ಆಧುನಿಕ ಭಾರತದ ದಿವ್ಯ ಜ್ಯೋತಿ ಶ್ರೀರಾಮಕೃಷ್ಣ ಪರಮಹಂಸರೆಂಬುದನ್ನು ನಾವು ತಿಳಿದುಕೊಳ್ಳಬಹುದು. ಇವಲ್ಲದೆ ಗೋಡೆಯ ಮೇಲೆ ಹಳದೀ ಬಣ್ಣದ ಜುಬ್ಬವನ್ನು ಧರಿಸಿ, ತನ್ನ ಕೈಗಳೆರಡನ್ನೂ ಎದೆಯ ಮೇಲೆ ಜೋಡಿಸಿ ನಿಂತಿರುವ ಗಂಭೀರ ವದನ ಮಂಡಲದ ತೇಜಸ್ವೀ ಮೂರ್ತಿಯ ಚಿತ್ರವನ್ನು ನೋಡಿದೊಡನೆಯೆ, ಅದು ವಿಶ್ವದ ಸರ್ವ ಮೂಲೆಗಳಲ್ಲಿ ಭಾರತೀಯ ವೇದಾಂತದ ವಿಜಯ ದುಂದುಭಿಯಯ್ನು ಮೊಳಗಿಸಿದ ವಿವೇಕಾನಂದ ಸ್ವಾಮಿಗಳದಾಗಿದೆ ಎಂಬುದು ಹೊಳೆಯುವುದು. ಆ ಚಿತ್ರದ ಕೆಳಗೆ "Arise, awake, stop not till the god is reached" ಎಂಬುದಾಗಿ ಆಂಗ್ಲಭಾಷೆಯಲ್ಲಿ ಗೀತೆಯಿಂದ ಉದ್ಧೃತವಾದ ಒಂದು ಪಂಕ್ತಿಯು ಗೋಚರಿಸುತ್ತಿರುವುದು.

ಈ ಚಿತ್ರಗಳಲ್ಲದೆ ವೀಣಾಪಾಣಿನಿಯಾದ ವಾಗ್ದೇವಿಯ ಚಿತ್ರವೂ, ಎಳೆನಗೆಯಿಂದ ವಿಕಸಿತವಾದ ಮುಖಮಲ್ಲಿಗೆಯೊಡನೆ ಕೊಳಲನ್ನೂದುವುದರಲ್ಲಿ ನಿರತನಾದ ಮುರಲೀಧರನ ಚಿತ್ರವೂ ಕಂಗೊಳಿಸುತ್ತಿರುವುವು.

ಕೋಣೆಯ ಮಧ್ಯದಲ್ಲಿ ಒಂದು ಮೇಜು; ಅದರ ಎರಡು ಬದಿಗಳಲ್ಲಿಯೂ ನಾಲ್ಕಾರು ಕುರ್ಚಿಗಳಿರುತ್ತವೆ. ಮೇಜಿನ ಮೇಲೆ 'ಹಿಂದೂ' 'ಅಮೃತ ಬಝಾರ ಪತ್ರಿಕೆ' ಎಂಬಿತ್ಯಾದಿ ಒಂದೆರಡು ದೈನಂದಿನ ಪತ್ರಿಕೆಗಳು ಬಿದ್ದಿದ್ದುವು. ಇನ್ನೊಂದು ಕಡೆಯಲ್ಲಿ ಶ್ರೀ ಅರವಿಂದಘೋಷರ "ವಂದೇ ಮಾತರಂ" ಪತ್ರಿಕೆಯು ಕಂಗೊಳಿಸುತ್ತಲಿದ್ದಿತು. ಅರವಿಂದರು ಆ ದಿನಗಳಲ್ಲಿ ಯೋಗಾಭ್ಯಾಸವನ್ನು ಪ್ರಾರಂಭಿಸಿರಲಿಲ್ಲ. ಇನ್ನೊಂದು ಕಡೆ ಹಲವು ಪುಸ್ತಕಗಳು ಬಿದ್ದಿದ್ದುವು. ಅವುಗಳು ಯಾವುದೆಂಬುದನ್ನು ನಾವು ನೋಡೋಣ. ಅವುಗಳಲ್ಲಿ ಬಂಕಿಂಚಂದ್ರ ಚಟರ್ಜಿಯವರ ಸುಪ್ರಸಿದ್ಧ ಕಾದಂಬರಿಯಾದ "ಆನಂದಮಠವು" ಒಂದಾಗಿತ್ತು. ಎರಡನೆಯದು ವಿನಾಯಕ ಸಾವರಕರರ "ಮೇಝಿನಿಯವರ ಜೀವಣಿಗೆಗಳು" ಎಂಬುದಾಗಿದೆ. ಮೂರನೆಯದು ವೃದ್ಧ ಪಿತಾಮಹರಾದ ದಾಧಾಭಾಯಿ ನವರೋಜಿಯವರ 'Un British rule in India' ಎಂಬುದಾಗಿದೆ.

ಈ ಕೋಣೆಯಲ್ಲಿ ೨೪-೨೫ ವರ್ಷ ಪ್ರಾಯದ ತರುಣನೋರ್ವನು ನೋವಾದ ಗೂಳಿಯಂತೆ ಕೋಣೆಯ ಒಂದು ತುದಿಯಿಂದ ಇನ್ನೊಂದು ತುದಿಗೆ ಓಡುತ್ತಿದ್ದನು. ಅವನ ಮುಖಮಂಡಲವು ಸುಂದರವಾಗಿದ್ದಿತೆಂದು ಹೇಳಬಹುದು. ವಿಶಾಲವಾದ

ಅವನ ಲಲಾಟದಿಂದ ಅವನೊಬ್ಬ ದೃಢ ಮನಸ್ಕನಾದ ಮನುಷ್ಯನೆಂದು ನಿರ್ಧರಿಸ ಬಹುದು. ತೇಜಯುಕ್ತವಾದ ನೇತ್ರಗಳು ಇನ್ನೊಬ್ಬರ ಹೃದಯವನ್ನು ಭೇದಿಸು ವಷ್ಟು ತೀಕ್ಷ್ಣವಾಗಿದ್ದುವು ಅವನ ದೇಹವು ಅಷ್ಟು ಬಲಿಷ್ಠವಾದದು ಏನೂ ಆಗಿರ ಲಿಲ್ಲ. ಕೃಶವಾದ ಅವನ ದೇಹವು ಶ್ರಮವಹವಾದ ಕೆಲಸಗಳಿಗೆ ಯೋಗ್ಯವಾದ್ದು ದೆಂಬುದಾಗಿ ಊಹಿಸಬಹುದು; ಆದರೆ ಅವನ ದೇಹವನ್ನು ಒಂದು ಬಾರಿ ನೋಡಿ ದೊಡನೆಯೇ, ಅವನಲ್ಲಿ ಅಸಾಧಾರಣವಾದ ಒಂದು ಚೈತನ್ಯವು ಉರಿಯುತ್ತಿದೆ ಎಂಬುದನ್ನು ನಾವು ತಿಳಿದುಕೊಳ್ಳಬಹುದು.

ಅವನ ವದನ ಮಂಡಲವು ಅವನೊಬ್ಬ ಶಾಂತಚಿತ್ತವೃತ್ತಿಯ ಪುರುಷ ನೆಂದು ನುಡಿಯುತ್ತಲಿದ್ದರೂ, ಈಗಲಿನ ಭೇದ ಭಾವವು ಅವನ ಮನಸ್ಸು ಉದ್ವೇಗ ಪರವಶವಾಗಿದೆ ಎಂಬುದನ್ನು ನುಡಿಯುತ್ತಿದ್ದಿತು. ಅವನು ಹುಚ್ಚನಂತೆ ಕೋಣೆ ಯಲ್ಲಿ ಓಡಾಡುತ್ತಾ ಬಲಗೈಯನ್ನು ಮುಷ್ಠಿ ಹಿಡಿದು ಎಡಗೈ ಮೇಲೆ ಆಗಾಗ ಹೊಡೆಯುತ್ತಲಿದ್ದನು. ಹಲವು ಸಾರಿ ಅಸ್ಪಷ್ಟವಾದ ಹಲವು ಶಬ್ದಗಳನ್ನು ಉಚ್ಚರಿ ಸುತ್ತಿದ್ದನು; ಆದರೆ ಅವನು ನುಡಿಯುತ್ತಿರುವುದೇನೆಂಬುದು ವ್ಯಕ್ತವಾಗಿ ಕೇಳಿಬರು ತ್ತಿರಲಿಲ್ಲ; ಆದರೆ ಅವನ ಹೃದಯದಂತರಾಳದಲ್ಲಿ ತುಂಬಿರುವ ಚಿಂತಾಗ್ನಿಯು ಈ ಅಸ್ಪಷ್ಟ ಪದಗಳ ಮೂಲಕ ಹೊರಸೂಸುತ್ತಿದೆ ಎಂಬುದು ನಿರ್ವಿವಾದವು. ಅವನ ಮುಖವು ಕೆಂಪಾಗಿ ಹೋಗಿತ್ತು. ಅವನ ಮುಖದಲ್ಲಿ ಕೋಪ, ದೈನ್ಯ, ಲಜ್ಜೆ, ನಿರಾಶೆ, ವ್ಯಸನ ಎಂಬಿತ್ಯಾದಿ ವಿವಿಧ ವಿಕಾರಗಳು ಏಕಕಾಲದಲ್ಲಿ ತೋರುತ್ತಲಿದ್ದುವು. ಈ ಎಲ್ಲಾ ಸಂಗತಿಗಳಿಂದ ಆ ತರುಣನು ಯಾವುದೋ ಒಂದು ಮಹತ್ತಾದ ಚಿಂತೆಗೆ ಪಾತ್ರೀಭವಿಸಿದ್ದನು ಎಂಬುದನ್ನು ಊಹಿಸಿಕೊಳ್ಳಬಹುದು.

ಹತ್ತು ಹನ್ನೆರಡು ನಿಮಿಷಗಳ ವರೆಗೆ ತರುಣನು ಈ ರೀತಿ ವಿಚಾರಮಗ್ನನಾಗಿ ದ್ದನು. ಅನಂತರ ಅವನ ಮನಸ್ಸು ಯಾವುದೋ ಒಂದು ನಿರ್ಧಾರಕ್ಕೆ ಬಂದು ತಲು ಪಿತು ಅವನಲ್ಲಿ ತುಂಬಿದ್ದ ದೈನ್ಯತೆ, ಕೋಪ, ಲಜ್ಜೆ ಎಂಬ ವಿಕಾರಗಳು ಲಯವನ್ನು ಹೊಂದಿ ಮುಖದ ಮೇಲೆ ವ್ಯಸನ ಮತ್ತು ನಿರಾಶೆ ಈ ಎರಡು ಭಾಗಗಳು ಎದ್ದು ಕಾಣತೊಡಗಿದುವು. ಅವನು ಒಂದು ಆಸನದ ಮೇಲೆ ತನ್ನ ಶರೀರಭಾರವನ್ನಿಟ್ಟು 'ಉಸ್ಸೆ'ಂದು ಒಂದು ಬಿಸಿಯುಸಿರನ್ನು ಹೊರಚಲ್ಲಿದನು. ಆದರೆ ಆ ಕೃತ್ಯದಿಂದ ಅವನ ಎದೆಯಮೇಲಿನ ಭಾರವು ಕಡಿಮೆಯಾದ ಹಾಗೆ ತೋರಲಿಲ್ಲವು. ಅವನು ತನ್ನ ಕರ ಗಳೆರಡನ್ನೂ ತೊಡೆಗಳ ಮೇಲೆ ಮಡಗಿ ಕಣ್ಣುಗಳನ್ನು ಅರ್ಧ ಮುಚ್ಚಿ ಆಲೋಚಿ ಸಿದನು. ತದನಂತರ ಅವನು ಒಂದು ಕಾಗದದ ತುಂಡನ್ನು ತೆಗೆದುಕೊಂಡು ಏನನ್ನೋ ಬರೆಯತೊಡಗಿದನು. ಆ ಪತ್ರವನ್ನು ಬರೆಯುವಾಗ ಅವನ ಬೆರಳುಗಳು ಕಂಪಿಸುತ್ತಲಿದ್ದುವು. ಎರಡು ಗೆರೆಗಳನ್ನು ಅವನು ಬರೆದನು; ಆದರೆ ಆ ಮೇಲೆ ಬರೆಯಲು ಸಾಧ್ಯವಾಗಲಿಲ್ಲ. ಅವನು ಲೇಖನಿಯನ್ನು ಮೇಜಿನಮೇಲಿಟ್ಟು ಪುನಃ ಕೋಣೆಯಲ್ಲಿ ಅತ್ತಲಿಂದಿತ್ತ ಸಂಚರಿಸತೊಡಗಿದನು. ಈ ರೀತಿ ಕೆಲವು ನಿಮಿಷಗಳು

ಗತಿಸಿದುವು. ಪುನಃ ತನ್ನ ಆಸನದಲ್ಲಿ ಕುಳಿತು ತಾನು ಬರೆಯಲು ಪ್ರಾರಂಭಿಸಿದ ಪತ್ರವನ್ನು ಪೂರ್ತಿಗೊಳಿಸಲು ಯತ್ನಿಸಿದನು. ಈ ಸಾರಿ ಅವನು ತನ್ನ ಉದ್ಯಮದಲ್ಲಿ ಜಯಶೀಲನಾದನು. ಅವನು ಕಾಗದವನ್ನು ಬರೆದು ಪೂರೈಸಿದನು. ಅದನ್ನು ಒಂದು ಲಕ್ಕೋಟೆಯೊಳಗೆ ಸೇರಿಸಿ, ಲಕ್ಕೋಟೆಯ ಮೇಲೆ "ಸೌ| ಪದ್ಮಳಿಗೆ" ಎಂದು ವಿಳಾಸವನ್ನು ಬರೆದನು. ಅವನು ಆ ಲಕ್ಕೋಟೆಯ ಕಡೆಗೆ ಒಂದು ತಿರಸ್ಕಾರ ದೃಷ್ಟಿಯನ್ನು ಬೀರಿ ಮೇಜದ ಮೇಲೆ ಎಸೆದನು.

ಅವನು ತನ್ನ ಆಸನದಿಂದ ಎದ್ದು ಹತ್ತಿರದ ಗೂಟಕ್ಕೆ ತೂಗು ಹಾಕಿದ ಕೋಟನ್ನು ತೆಗೆದು ಧರಿಸಿಕೊಂಡನು. ಆಗ ಒಳಗಿನಿಂದ ಒಬ್ಬ ಭೃತ್ಯನು ಬಂದು 'ಒಡೆಯರೇ! ಅಮ್ಮಾವ್ರು ಊಟಕ್ಕಾಗಿದೆ ಅಂದ್ರು" ಎಂದನು

"ಹೂಂ. ನಾನು ಈಗಲೇ ಬರುವೆನೆಂದು ಹೇಳು."

ಭೃತ್ಯನು ಮರುಮಾತಾಡದೆ ಮನೆಯೊಳಗೆ ಹೊರಟುಹೋದನು; ತರುಣನು ಹಜಾರದ ಎಡಬದಿಗೆ ಇರುವ ಶಯನಗೃಹದಲ್ಲಿ ಪ್ರವೇಶಿಸಿದನು. ಶಯನಗೃಹವಾದರೂ ಅಚ್ಚುಕಟ್ಟಾಗಿದ್ದಿತು. ಒಂದು ತೊಟ್ಟಿಲಿನಲ್ಲಿ ಒಂದು ವರ್ಷಪ್ರಾಯದ ಗಂಡು ಮಗುವು ನಿದ್ರಿಸುತ್ತಿರುವುದು. ಮಗುವಿನ ಮುಖಮಂಡಲವಾದರೂ ಚೆಲುವಾದುದೇ ಆಗಿರುತ್ತದೆ. ನಿಷ್ಕಲಂಕವಾದ ಆ ವದನಮಂಡಲದಲ್ಲಿ ಪರಿಶುದ್ಧತೆಯು ಮೂರ್ತಿಮತ್ತಾಗಿ ನಿಂತಿರುವುದು. ತರುಣನು ತನ್ನ ಕಣ್ಣುಗಳನ್ನು ಮುಚ್ಚದೆ ಶಿಶುವಿನ ಮುಖವನ್ನೇ ನೋಡಿದನು. ಅವನ ದರ್ಶನೇಂದ್ರಿಯಗಳಲ್ಲಿ ಅಶ್ರುಕಣಗಳು ತುಂಬಿದುವು. ಎದೆಯಲ್ಲಿ ಅಡಗಿರುವ ಪ್ರೇಮವು ಹೊರಗೆ ಬಂದಿತು; ಆದರೆ ಇನ್ನೊಂದು ನಿಮಿಷದಲ್ಲಿಯೇ ದೃಢನಿಶ್ಚಯದ ಕಾರ್ಮುಗಿಲು ಆ ವದನಮಂಡಲವನ್ನು ವ್ಯಾಪಿಸಿತು. ಅವನು ಮಿದುವಾಗಿ ಬಾಲಕನ ಹಣೆಯನ್ನು ಚುಂಬಿಸಿದನು.

'ಮಗೂ, ರಾಮೂ! ನಾನು ತೆರಳುವೆನು; ನಾನಿಲ್ಲದೆ ಹೋದರೂ ನಿನ್ನ ಸುಖ-ಸೌಕರ್ಯಗಳಿಗೆ ಯಾವ ಲೋಪವೂ ಇರುವುದಿಲ್ಲ; ಆದರೆ ನಿನ್ನ ತಂದೆಯು ಭಿಕಾರಿಯೇ! ಆದುದರಿಂದ ನಾನು ತೆರಳುತ್ತೇನೆ." ಎಂದು ಮಾತ್ರ ನುಡಿದನು. ಪುನಃ ಒಂದು ಚುಂಬನ ಮುದ್ರೆಯು ಆ ಮುಖಮಂಡಲದಲ್ಲಿ ಮೂಡಿತು.

ಯುವಕನು ಬೀದಿಗೆ ಎರಗಿದನು, ಹತ್ತಿರದಲ್ಲಿಯೇ ಒಂದು ಜಟ್ಕಾಗಾಡಿಯು ನಿಂತಿದ್ದಿತು. ಅವನು ಅದರಲ್ಲಿ ಕುಳಿತುಕೊಂಡನು.

"ಎಲ್ಲಿಗೆ ಸ್ವಾಮೀ?" ಎಂದು ಜಟ್ಕಾವಾಲನು ಪ್ರಶ್ನಿಸಿದನು.

"ರೈಲ್ವೆ ಸ್ಟೇಷನ್ನಿಗೆ" ಎಂದನು ತರುಣನು.

ತಾಸು ಒಂದಾಗುತ್ತಾ ಬಂದಿತು; ಮಧ್ಯಾಹ್ನ ಭೋಜನದ ವೇಳೆಯು ಅತಿಕ್ರಮಿಸಿತು. ಆದರೆ "ಈಗ ಬರುತ್ತೇನೆ." ಎಂದು ನುಡಿದ ಯಜಮಾನನ ಸುಳಿವಿಲ್ಲ. ಕಾದು ಯಜಮಾನಿಯು ಬೇಸತ್ತಳು.

"ಎಲೋ ರಂಗಾ, ಸ್ವಾಮಿಯವ್ರು ಏನು ಮಾಡುತ್ತಾರೆ, ಎಂಬುದನ್ನು ಹೋಗಿ

ನೋಡು. ಆಗಲೇ ಒಂದು ತಾಸು ಸಮಯವಾಯಿತು. ಬೇಗ ಬರಹೇಳು.'' ಎಂದು ನುಡಿದಳು ಗೃಹಿಣಿ.

''ಹಾಗೆಯೇ ಆಗಲಿ ತಾಯಿ!'' ಎಂದು ನುಡಿದು ಅಡಿಗೆಯವನು ಪಾಕಶಾಲೆಯನ್ನು ತ್ಯಜಿಸಿ ಹಜಾರಕ್ಕೆ ಬಂದನು.

ಗೃಹಿಣಿಗೆ ೧೯-೨೦ ವರ್ಷ ಪ್ರಾಯವಿರಬಹುದು; ಪರಿಪೂರ್ಣವಾದ ಯೌವನ ಆ ಕೋಮಲಾಂಗಿಯಲ್ಲಿ ಹರಿದಾಡುತ್ತಲಿದೆ. ಸೌಂದರ್ಯರಶ್ಮಿಗಳು ಆ ವದನಮಂಡಲದಲ್ಲಿ ಹೊಳೆಯುತ್ತಿರುವುವು. ಅವಳ ದೇಹವನ್ನು ಒಂದು ನಿಮಿಷದವರೆಗೆ ನೋಡಿದರೆ, ಅವಳ ಪ್ರತಿಯೊಂದು ಅಂಗದಲ್ಲಿಯೂ ಚೆಲುವು ಗೋಚರವಾಗುತ್ತಿರುವುದು.

ಹಜಾರಕ್ಕೆ ತೆರಳಿದ್ದ ಅಡಿಗೆಯವನು ಹಿಂದಿರುಗಿ ಬಂದನು.

"ಸ್ವಾಮಿಯನ್ನು ಬರಹೇಳಿದೆಯಾ?''

''ಸ್ವಾಮಿಯವರು ಹಜಾರದಲ್ಲಾಗಲೀ, ಕಾರ್ಯಾಲೋಚನೆಯ ಕೊಠಡಿಯಲ್ಲಾಗಲೀ ಇಲ್ಲ.''

''ಹಾಗಾದರೆ ಅವರು ಎತ್ತ ತೆರಳಿದರು?''

''ಆಫೀಸಿನಲ್ಲಿ ಅವರ ಕೋಟಿಲ್ಲಿರೋದ್ರಿಂದ ಅವರು ಹೊರಗೆ ತೆರಳಿರಲಿಕ್ಕೆ ಸಾಕು.''

''ಈ ಉರಿ ಮಧ್ಯಾಹ್ನದಲ್ಲಿ ಅವರು ಎಲ್ಲಿಗೆ ಹೋಗಿದ್ದಾರೆಯೊ!''

ಗೃಹಿಣಿಯು ತನ್ನ ಪತಿಯು ಎತ್ತ ತೆರಳಿದನೆಂಬುದನ್ನು ವಿಚಾರಿಸುತ್ತಾ ಕುಳಿತಳು. ಮನಸ್ಸಿನಲ್ಲಿ ಹಲವು ಸಂದೇಹಗಳೂ ಭೀತಿಯೂ ಉದಯಿಸಿದುವು. ಅವಳು ಹರ್ಷಚಿತ್ತಳಾಗಲು ಪ್ರಯತ್ನಿಸಿದಳು; ಆದರೆ ಅದು ಸಾಧ್ಯವಾಗಲಿಲ್ಲ. ಅವಳ ಅಂತರಾತ್ಮವು ಯಾವುದೋ ಒಂದು ವಿಪತ್ತು ನಡೆದಿದೆ, ಎಂದು ನುಡಿಯುತ್ತಲಿದ್ದಿತು. ಅವಳು ಅಲ್ಲಿಂದ ಎದ್ದು ''ಏನೋ ಕಾರ್ಯಾಂತರದಿಂದ ಹೊರಗೆ ತೆರಳಿರಬಹುದು. ಅದಕ್ಕಾಗಿ ನಾನೇಕೆ ಇಷ್ಟು ಅಧೀರಳಾಗಬೇಕು?'' ಎಂದು ನುಡಿಯುತ್ತಾ ಎದ್ದು ವಾಚನಾಲಯಕ್ಕೆ ಗಮಿಸಿದಳು. ಕೈಗೆ ಸಿಕ್ಕದ ಯಾವುದೋ ಒಂದು ಪುಸ್ತಕವನ್ನು ತೆಗೆದುಕೊಂಡು ಓದಲು ಅವಳು ಯತ್ನಿಸಿದಳು, ಆದರೆ ಅವಳ ಮನಸ್ಸು ಪುಸ್ತಕದಲ್ಲಿ ನಿಲ್ಲಲಿಲ್ಲ; ಅದು ಅವಳ ಹಿಡಿತದಿಂದ ತಪ್ಪಿಸಿಕೊಂಡು ಎಲ್ಲಿಯೋ ಸಂಚರಿಸುತ್ತಲಿದ್ದಿತು. ಅವಳ ಮನೋದರ್ಪಣದಲ್ಲ ಹಲವು ಚಿತ್ರಗಳು ಬಂದು ನಿಂತವು. ತನ್ನ ಬಾಲ್ಯ, ತನ್ನ ಸ್ವಾಮಿಯ ಪರಿಚಯವನ್ನು ಸಂಪಾದಿಸಿದುದು, ಅವನಲ್ಲಿ ತಾನು ಅನುರಕ್ತಳಾದುದು, ತಮ್ಮ ವಿವಾಹ, ತಮ್ಮ ಪ್ರೇಮಬಂಧವನ್ನು ದೃಢಪಡಿಸುವುದಕ್ಕಾಗಿ ರಾಮಚಂದ್ರನು ಜನಿಸಿದುದು, ಎಂಬಿತ್ಯಾದಿ ಹಲವು ಹಳೆಯ ಚಿತ್ರಗಳು ಗತಕಾಲದ ಕಡಲಿನಿಂದ ಎದ್ದು ಬಂದು ಅವಳ ಮನೋವಲಯದಲ್ಲಿ ಕಾಣಿಸಿಕೊಂಡವು.

ಅವಳ ಮನಸ್ಸು ಅಸ್ವಸ್ಥ್ಯವನ್ನು ಹೊಂದಿದ್ದಿತು. ಏಕೆಂಬುದು ಅವಳಿಗೆ ತಿಳಿಯದು. ಅವಳ ಅಂತರಾತ್ಮವು ಇದುವರೆಗೆ ಸಂತೋಷಭರಿತವಾಗಿದ್ದ ಆ ಸಂಸಾರ

ಕಡಲಿನಲ್ಲಿ ಬಿರುಗಾಳಿಯೊಂದು ಆವಿರ್ಭವಿಸುತ್ತಲಿದೆ ಎಂದು ನುಡಿಯುತ್ತಲಿದ್ದಿತು. ಅವಳು ತನ್ನ ಈ ಅಧೀರತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದಳು.

ಯಾರೋ ಮನೆಯೊಳಗೆ ಪ್ರವೇಶಿಸಿದ ಕಾಲಸಪ್ಪಳವು ಬಂದು ಆ ಸುಂದರಿಯ ಶ್ರವಣೇಂದ್ರಿಯಗಳಲ್ಲಿ ಪತಿಸಿತು. 'ಬಹುಶಃ ಅವರೇ ಆಗಿರಬಹುದು.' ಎಂದೆನ್ನುತ್ತಾ ಅವಳು ಬಂದುದು ಯಾರೆಂಬುದನ್ನು ತಿಳಿಯುವುದಕ್ಕಾಗಿ ಹಜಾರಕ್ಕೆ ಗಮಿಸಿದಳು; ಆದರೆ ಅದು ಅವಳು ನೆನದ ಹಾಗೆ ಅವಳ ಪತಿದೇವನಾಗಿರಲಿಲ್ಲ; ಮನೆಯೊಳಗೆ ಪ್ರವೇಸಿದುದು ಅವಳ ದೊಡ್ಡ ತಂದೆಯ ಮಗನಾದ ವೆಂಕಟರಾಮನಾಗಿದ್ದನು. ಅವನು ಸುಂದರಿಯನ್ನು ಕಾಣುತ್ತಲೆ ಬಂದು ಮಂದಸ್ಮಿತವನ್ನು ಬೀರಿದನು.

"ಬಾ, ವೆಂಕಟ, ಊಟವಾಯಿತೇ?"

"ಇಲ್ಲ, ಪದ್ದೂ, ಭಾವ ಎಲ್ಲಿಗೆ ಹೋಗಿದ್ದಾರೆ?" ಎಂದು ಪ್ರಶ್ನಿಸಿದನು ವೆಂಕಟ ರಾಮನು

"ಈಗ ಸ್ವಲ್ಪ ಮುಂಚೆಯೇ ಅವರು ಹೊರಗೆ ಹೋದರು; ಊಟ ಸಹಾ ಮಾಡ ಲಿಲ್ಲ. ಈಗಲೇ ಹಿಂದಿರುಗಿ ಬರಬಹುದು."

"ಪದ್ದೂ, ಅವರು ರೈಲ್ವೇ ಸ್ಟೇಷನ್ನಿನಲ್ಲಿ ಪೂನಾಕ್ಕೆ ಇರುವ ಗಾಡಿಯನ್ನು ಹತ್ತು ತ್ತಿರುವುದನ್ನು ಕಂಡೆನು"

"ಪೂನಾಕ್ಕೆ ಇರುವ ಗಾಡಿಯೇ?"

"ಹೌದು, ಪದ್ದೂ, ಏಕೆ ಇಷ್ಟು ದಿಗಿಲಿನಿಂದ ಪ್ರಶ್ನಿಸುತ್ತಿರುವೆ?"

"ಉಗಿಬಂಡಿ ಯಾತ್ರೆಗಾಗಿ ತೆರಳುವುದಾದರೆ, ಅವರು ಏಕೆ ನನ್ನೊಡನೆ ಹೇಳ ಲಿಲ್ಲ? ಹತ್ತಿರವೆಲ್ಲಿಯೋ ಹೋಗಿರಬಹುದೆಂದು ನಾನು ವಿಚಾರಿಸಿದ್ದೆ. ಅವರು ಈಗ ಬರಬಹುದೆಂದು ನೆನೆದು ಊಟಕ್ಕಾಗಿ ಕಾದು ಕುಳಿತಿದ್ದೇನೆ"

"ಅಯ್ಯೋ ಹುಚ್ಚೀ, ಈ ನಿನ್ನ ಬುದ್ಧಿಗೆ ಏನೆಂದು ಹೇಳಬೇಕು? ಅಗತ್ಯವಾದ ಕೆಲಸಗಳಿಗಾಗಿ ಹೊರಗೆ ತೆರಳುತ್ತಿದ್ದರೆ, ನುಡಿದು ತೆರಳಲು ಸಾಧ್ಯವೇ? ನಡೆ, ಹೊಟ್ಟೆ ಹಸಿಯುತ್ತಿರುವುದು." ಎಂದು ತನ್ನ ಸ್ವಾಭಾವಿಕವಾದ ಹಾಸ್ಯರಸದಲ್ಲಿಯೇ ವೆಂಕಟ ರಾಮನು ಹೇಳಿದನು.

ಅವರಿಬ್ಬರೂ ಪಾಕಶಾಲೆಗೆ ತೆರಳಿದರು; ವಾಚಕರು ಈ ತರುಣನೂ, ಆ ಹೆಂಗಸೂ ಯಾರೆಂಬುದನ್ನು ತಿಳಿಯಲು ಉತ್ಸುಕರಾಗಿರಬಹುದು, ಸದ್ಯಕ್ಕೆ ಆ ಯುವಕನ ಹೆಸರು ವೆಂಕಟರಾಮನೆಂದೂ ತರುಣಿಯ ಹೆಸರು ಪದ್ಮಾ ಎಂದು ತಿಳಿದುಕೊಂಡರೆ ಸಾಕು. ಮುಂದಿನ ಪರಿಚ್ಛೇದಗಳಲ್ಲಿ ಅವರು ಯಾರೆಂಬುದು ತಿಳಿದು ಬರುವುದು.

ಪದ್ಮಳು ಊಟ ಮಾಡಿದಳು; ಆದರೆ ಅದು ಅವಳ ಮನಸ್ಸಿಗೆ ಸೊಗಸೆನಿಸ ಲಿಲ್ಲ. ತನ್ನ ಪತಿಯು ತನ್ನೊಡನೆ ನುಡಿಯದೇ ಏಕೆ ಉಗಿಬಂಡೀ ಪ್ರಯಾಣಕ್ಕೆ ಉದ್ಯುಕ್ತನಾದನು? ಎಂಬ ವಿಚಾರವು ಅವಳ ಮೆದುಳನ್ನು ತಿನ್ನುತ್ತಲಿದ್ದಿತು. ವೆಂಕಟ

ರಾಮನು ಹರ್ಷಜೀವಿಯಾದುದರಿಂದ ಭೋಜನವು ಅವನಿಗೆ ಬಹಳ ರುಚಿಕರವಾಗಿ ತೋರಿತು. ಹಲವು ವಿಧ ಪಲ್ಲೆಗಳನ್ನೂ, ಅನ್ನವನ್ನೂ ಅವನು ಉದರ ದೇವತೆಗೆ ನಿವೇದಿಸಿದನು.

ಊಟವಾದ ಅನಂತರ ವೆಂಕಟರಾಮನು ಕರಪ್ರಕ್ಷಾಲನವನ್ನು ಮಾಡಿಕೊಂಡು ಹಜಾರಕ್ಕೆ ಬಂದನು. ತನ್ನ ಜೇಬಿನಿಂದ ಒಂದು ಪೇಕ್ ಸಿಗರೇಟನ್ನು ತೆಗೆದು ಒಂದು ಸಿಗರೇಟನ್ನು ಹೊತ್ತಿಸಿ ಧೂಮಪಾನವನ್ನು ಮಾಡತೊಡಗಿದನು. ಅವನ ಬಾಯಿಯಿಂದ ಹೊರಬಿದ್ದ ಹೊಗೆಯು ವಕ್ರಾಕಾರವನ್ನು ಹೊಂದಿ ಮೇಲಕ್ಕೇರುತ್ತಾ ವಾಯುವಿನಲ್ಲಿ ಮಿಲನವನ್ನು ಹೊಂದಿತು. ವೆಂಕಟರಾಮನು ಸಿಗರೇಟು ಸೇದು ವುದರಿಂದ ಶರೀರಕ್ಕೆ ಉಂಟಾಗಬಹುದಾದ ಕೆಡಕುಗಳನ್ನು ಅರಿತಿರಲಿಲ್ಲ; ಆದರೆ ಅವನ ವಿಚಾರವು ಹೊಗೆ ಸೇದುವುದು ನಾಗರಿಕತೆಯ ಹಾಗು ಪಾಶ್ಚಾತ್ಯ ಸಂಸ್ಕೃತಿಯ ಲಾಂಛನವೆಂದಾಗಿದ್ದಿತು. ಆದುದರಿಂದ ಆಂಗ್ಲವಿದ್ಯಾಧರನಾದ ತನ್ನ ಗೌರವಕ್ಕೆ ಧೂಮಪಾನವು ಅತ್ಯಾವಶ್ಯಕವೆಂದು ಅವನು ಬಗೆದಿದ್ದನು. ಇದನ್ನು ಓದಿ ವಾಚಕರು ಆಶ್ಚರ್ಯಪಡಬೇಕಾಗಿಲ್ಲ; ಇಂದಿನ ಆ ಪಾಶ್ಚಾತ್ಯ ರೀತಿಯ ವಿದ್ಯಾಭ್ಯಾಸವನ್ನು ಹೊಂದಿರುವವರಲ್ಲಿ ಮಿಕ್ಕವರು ಈ ವಿಚಾರದಿಂದಲೇ ಹೊಗೆಪಾನ ಮಾಡುತ್ತಾರೆ

ವೆಂಕಟರಾಮನು ಹೊಗೆಯನ್ನು ಒಳಗೆ ಎಳೆದುಕೊಳ್ಳುತ್ತಾ ಕಾರ್ಯಾಲೋಚನೆಯ ಕೊಠಡಿಯೊಳಗೆ ಪ್ರವೇಶಿಸಿದನು; ಅವನು ಅಲ್ಲಿರುವ ಒಂದು ಸುಖಾಸನದ ಮೇಲೆ ತನ್ನ ಶರೀರಭಾರವನ್ನು ಕೆಡಹಿದನು ಸ್ವಾಭಾವಿಕವಾಗಿಯೆ ಅವನ ದೃಷ್ಟಿಯು ಮೇಜದ ಮೇಲಿರುವ ಒಂದು ಲಕ್ಕೋಟೆಯ ಮೇಲೆ ಬಿದ್ದಿತು. ಅವನು ಅದನ್ನು ತೆಗೆದುಕೊಂಡು ನೋಡಿದನು. ಅದರ ಮೇಲಿರುವ ವಿಳಾಸವನ್ನು ನೋಡಿದೊಡನೆಯೇ ಅದು ಯಾರ ಹಸ್ತಾಕ್ಷರವೆಂಬುದು ವೆಂಕಟರಾಮನಿಗೆ ವ್ಯಕ್ತವಾಯಿತು. ಅದನ್ನು ಕೈಯಲ್ಲಿ ಹಿಡಿದುಕೊಂಡು ಅವನು:—"ಪದ್ದೂ, ಪದ್ದೂ!" ಎಂಬುದಾಗಿ ಕೂಗಿದನು.

ಒಳಗಿನಿಂದ ತರುಣಿಯು ಓಡಿಬಂದು:—"ಏನಯ್ಯಾ, ವೆಂಕಣ್ಣಾ!" ಎಂದು ನುಡಿದಳು.

"ಇಗೋ, ನೋಡು; ಭಾವಾ ಒಂದು ಕಾಗ್ದಾನ ಬರೆದಿಟ್ಟು ಹೋಗಿದ್ದಾನೆ."

ಪದ್ಮಳು ಆತುರದಿಂದ ಅವನು ತನ್ನ ಕರದಲ್ಲಿ ಹಿಡಿದುಕೊಂಡಿದ್ದ ಪತ್ರವನ್ನು ತೆಗೆದುಕೊಂಡಳು. ಅದರ ಮೇಲಿರುವ ವಿಳಾಸವನ್ನು ನೊಡಿದೊಡನೆಯೇ, ಅದು ಅವಳ ಜೀವಿತೇಶ್ವರನದೆಂಬುದನ್ನು ಆ ವನಿತೆಯು ತಿಳಿದಳು. ತಾನು ತೆರಳುವಾಗ ಆವ ಸಂದೇಶವನ್ನು ತನ್ನ ನಲ್ಲನು ಆ ಕಾಗದದಲ್ಲಿ ಬರೆದಿರುವನೆಂಬುದನ್ನು ತಿಳಿಯಲು ಕುತೂಹಲಳಾಗಿದ್ದಳು; ಆದರೆ ಅದೊಂದು ಪ್ರೇಮಸಂದೇಶವಾಗಿರಲಿಲ್ಲ; ಸಂಸಾರ ಕಡಲನ್ನು ಅಲ್ಲೋಲ-ಕಲ್ಲೋಲ ಮಾಡಲು ಉದ್ಭೂತವಾಗುತ್ತಲಿರುವ

ಒಂದು ಬಿರುಗಾಳಿಯ ಸೂಚನೆಯಾಗಿತ್ತು ಆ ಓಲೆಯು! ಯುವತಿಯು ಪತ್ರವನ್ನು ಒಡೆದು ನೋಡಿದಳು; ಅದರಲ್ಲಿ ಲಿಖಿತವಾದ ಕೆಲವು ಗೆರೆಗಳನ್ನು ನೋಡಿದೊಡನೆಯೇ, ಅವಳ ದೇಹವು ಕಂಪಿಸಿತು; ಕಣ್ಣುಗಳಲ್ಲಿ ಅಶ್ರುಬಿಂದುಗಳು ತುಳುಕಾಡಿದವು; ಕಂಠವು ಬಿಗಿದು ಬಂದಿತು. ಅವಳು ಹತ್ತಿರದ ಆಸನದ ಮೇಲೆ ಬಿದ್ದಳು!

ಕಾಗದದಲ್ಲಿದ್ದ ಸಂಗತಿಗಳನ್ನು ವಾಚಕರ ಅವಗಾಹನೆಗಾಗಿ ಕೊಡುತ್ತೇವೆ.

"ಪ್ರೀತಿಯ ಪದ್ದು!

ನಿನ್ನನ್ನು ಆ ರೀತಿ ಸಂಬೋಧಿಸಲು ನನಗೆ ಸ್ವಾತಂತ್ರ್ಯವಿದೆಯೆಂದು ಭಾವಿಸುತ್ತೇನೆ; ನನ್ನ ಹೃದಯವನ್ನು-ನನ್ನ ಪ್ರೇಮವನ್ನು-ನಿನ್ನ ಚರಣಗಳಲ್ಲಿ ಅರ್ಪಿಸಿರುತ್ತೇನೆಂಬುದನ್ನು ನೀನು ಬಲ್ಲೆ! ನನ್ನ ಭಾಗ್ಯಾಕಾಶದಲ್ಲಿ ರಾಜಿಸುತ್ತಿರುವ ತಾರೆಯೆಂದು ನಿನ್ನನ್ನು ನಾನು ಭಾವಿಸಿದ್ದೆ. ನಿನ್ನೊಡನೆ ಮಿಲನಹೊಂದಿ ಜೀವನದ ಪರಿಪೂರ್ಣತೆಯನ್ನು ಹೊಂದಲು ಸಾಧ್ಯವಿದೆ, ಎಂದು ನಾನು ಬಗೆದಿದ್ದೆನು; ಆದರೆ ನನ್ನ ವಿಚಾರಗಳೆಲ್ಲವೂ ಗಾಳಿಯ ಗೋಪುರಗಳಾದುವು!

ಪದ್ದೂ! ನಾನು ದರಿದ್ರ-ಭಿಕಾರಿ! ನಿನ್ನಲ್ಲಿ ಅನುರಕ್ತವಾದುದು ಒಂದು ತಪ್ಪೆಂಬುದು ಈಗ ಹೊಳೆಯುತ್ತಿದೆ! ನಿನ್ನ ಜೀವನದಲ್ಲಿ ಆನಂದವನ್ನು ಪ್ರದಾನ ಮಾಡಲು ನಾನು ಅಪಾತ್ರನು!

ಹೌದು; ನಾನು ತಪ್ಪು ಮಾಡಿವೆ; ನಿನ್ನನ್ನು ಈ ವಿವಾಹಬಂಧನದಲ್ಲಿ ಸಿಲುಕುವಂತೆ ಮಾಡದಿದ್ದರೆ ಈ ಸಂಕಟವು ಸಂಭವಿಸುತ್ತಿರಲಿಲ್ಲ. ತಿಳಿದೂ-ತಿಳಿದು ಈ ಸಂಕಟ ಕಡಲಿನಲ್ಲಿ ನಾನು ನಿನ್ನನ್ನು ದೂಡಿದೆ. ಈಗ ನಿನ್ನ ಸುಖದ ದಾರಿಯಲ್ಲಿರುವ ಒಂದು ಮುಳ್ಳಾಗಿ ನಿಲ್ಲಲು ನಾನು ಬಯಸುವದಿಲ್ಲ!

ನಿನ್ನ ಸೌಖ್ಯವೇ ನನಗೆ ಬೇಕಾದುದು; ಆದುದರಿಂದಲೇ ಗೃಹವನ್ನು ಎಂದೆಂದಿಗೂ ನಾನು ತ್ಯಜಿಸಿರುತ್ತೇನೆ. ನಿನಗೆ ಸುಸೂಕ್ತವಾದ ದಾರಿಯಲ್ಲಿ ನೀನು ಸುಖವನ್ನು ಹುಡುಕುವುದು ನನಗೆ ಆನಂದದಾಯಕವೇ ಸರಿ. ನಿನಗೆ ಆಸಕ್ತಿಯಿರುವವರನ್ನು ಸೇರಿ ಆನಂದಿಸು!

ರಾಮಚಂದ್ರನು ನನ್ನವನು; ಅವನನ್ನು ನೀನು ಪೋಷಿಸುವಿಯೆಂದು ಭಾವಿಸುತ್ತೇನೆ; ನಿನಗೆ ಸುಖವನ್ನು ನೀಡಲೆಂದು ಭಕ್ತಿಪೂರ್ವಕವಾಗಿ ಭಗವಂತನನ್ನು ನಾನು ಪ್ರಾರ್ಥಿಸುತ್ತೇನೆ.

ನಿನ್ನ,

ರಂಗ."

ಈ ಕಾಗದವು ಅವಳ ಎದೆಯನ್ನು ಸುಟ್ಟಿತೆಂದು ಹೇಳಬೇಕಾಗಿಲ್ಲ; ಅವಳ ಎದೆಯು ಆ ಕಾಗದದಲ್ಲಿ ಎದ್ದು ಕಾಣುತ್ತಿರುವ ಕಠೋರ ಮನೋಭಾವನೆಯನ್ನು ವೀಕ್ಷಿಸಿ, ದಂಗಾಗಿ ಹೋಯಿತು. ಅವಳ ಭಾಗ್ಯಪ್ರದೀಪಕ-ಅವಳ ಆರಾಧನಾಮೂರ್ತಿ-ಅವಳ ನಚ್ಚಿನ ನಲ್ಲನು ಅವಳನ್ನು ಭಯಂಕರವಾದ ಕಡಲಿನಲ್ಲಿ ಕೆಡಹಿ ಹೊರಟು ಹೋದನು!

---

## ೨ ರಂಗನಾಥನ ಜನನ

ಸುಮಾರು ಅರ್ಧಶತಮಾನ ಕಾಲದ ಹಿಂದಿನ ವೃತ್ತಾಂತವಿದು. ರಾಮನಗರ ಜಿಲ್ಲೆಯಲ್ಲಿ ಹೊಸೂರು ಎಂಬುದೊಂದು ಗ್ರಾಮ; ಹೊಸೂರು ಭಾರತ ಭೂಮಿಯಲ್ಲಿ ರುವ ಏಳು ಲಕ್ಷ ಹಳ್ಳಿಗಳಲ್ಲಿ ಒಂದಾಗಿದೆ ಎಂಬುವಂತೆ ಅದಕ್ಕಿಂತ ಹೆಚ್ಚಿನ ಪ್ರಾಧಾನ್ಯ ತೆಯು ಅದಕ್ಕಿರಲಿಲ್ಲ; ಆದರೆ ಅನಂತರ ಈ ಗ್ರಾಮಕ್ಕೆ ಒಬ್ಬ ತ್ಯಾಗಿಯ ಜನ್ಮಭೂಮಿ ಯೆಂಬ ಕೀರ್ತಿಯು ಲಭಿಸಿತು.

ಹೊಸೂರು ಅಗ್ರಹಾರದಲ್ಲಿ ಶ್ಯಾಮಾಶಾಸ್ತ್ರಿಗಳೆಂಬುವರು ಸುತ್ತುಮುತ್ತಲಿನ ಗ್ರಾಮಗಳಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದ ವ್ಯಕ್ತಿಗಳಾಗಿದ್ದರು. ಅವರ ಕಾಲ ದಲ್ಲಿ ಈಗಿನಂತೆ ಆಂಗ್ಲವಿದ್ಯಾಅಭ್ಯಾಸವು ಅಷ್ಟು ಪ್ರಚಾರವನ್ನು ಹೊಂದಿರಲಿಲ್ಲ. ನಗರಗಳನ್ನು ಪಾಶ್ಚಾತ್ಯ ನಾಗರೀಕತೆಯು ಆ ಕಾಲದಲ್ಲಿ ಸ್ಪರ್ಶಿಸಿದ್ದರೂ, ಆ ಪಶ್ಚಿ ಮದ ಗಾಳಿಯು ಇನ್ನೂ ಗ್ರಾಮ ಗ್ರಾಮಾಂತರಗಳಿಗೆ ವ್ಯಾಪಿಸಿರಲಿಲ್ಲ. ಆದುದ ರಿಂದಲೇ ಆ ಕಾಲದಲ್ಲಿ ಹಳೇ ಸಂಪ್ರದಾಯದಂತೆ ಹಳ್ಳಿಗಳಲ್ಲಿ ಸಂಸ್ಕೃತ ಮತ್ತು ಕಾವ್ಯಾಭ್ಯಾಸವು ನೆಲೆ ನಿಂತಿದ್ದಿತು. ಜನರು ತಮ್ಮ ಹಳ್ಳಿಯ ಶಾಸ್ತ್ರಿಗಳಲ್ಲಿ ಅಕ್ಷ ರಾಭ್ಯಾಸವನ್ನೂ ಸಂಸ್ಕೃತ ಕಾವ್ಯಗಳನ್ನೂ ಕಲಿತು, ಅನಂತರ ವ್ಯವಹಾರಜ್ಞಾನ ವನ್ನು ಸಂಪಾದಿಸುತ್ತಲಿದ್ದರು.

ಹೊಸೂರಿನಲ್ಲಿ ಶ್ಯಾಮಾಶಾಸ್ತ್ರಿಗಳು ಸಂಸ್ಕೃತ ಭಾಷಾಪಂಡಿತರೆಂದು ವಿಖ್ಯಾತ ರಾದ ಮನುಷ್ಯರಾಗಿದ್ದರು. ಆ ಕಾಲದಲ್ಲಿ ಅನೇಕ ಮಂದಿ ಶಿಷ್ಯರು ಅವರಲ್ಲಿ ಕಾವ್ಯ ಗಳನ್ನೂ ಶಾಸ್ತ್ರಗಳನ್ನೂ ಓದಿ ಜ್ಞಾನವನ್ನು ಸಂಪಾದಿಸಿದರು ಒಂದು ಮಾತಿನಲ್ಲಿ ಹೇಳುವುದಾದರೆ, ಮಧ್ಯಕಾಲೀನದ ಅಸ್ತಂಗತ ತಾರೆಯಾಗಿದ್ದರೂ, ಶಾಸ್ತ್ರಿಗಳೂ ಅವರ ಪಾಂಡಿತ್ಯವೂ ರಾಮನಗರ ಜಿಲ್ಲೆಯಲ್ಲಿಯೇ ಕೀರ್ತಿಯನ್ನು ಸಂಪಾದಿಸಿದ್ದಿತು.

ಶಾಸ್ತ್ರಿಗಳು ಉತ್ಕೃಷ್ಟ ಸಂಸ್ಕೃತ ಪಂಡಿತರೆಂದು ಮಾತ್ರವಲ್ಲ; ಜ್ಯೋತಿ ಶ್ಯಾಸ್ತ್ರವನ್ನು ಸಂಬಂಧಿಸಿದ ಸಂಗತಿಗಳಲ್ಲಿ ಶಾಸ್ತ್ರಿಗಳ ತೀರ್ಪೇ ಅಂತಿಮದ್ದೆಂದು ಹೇಳುವಾಗ, ಆ ಶಾಸ್ತ್ರವನ್ನು ಕುರಿತು ಅವರು ಎಷ್ಟರಮಟ್ಟಿಗೆ ಜ್ಞಾನವನ್ನು ಸಂಪಾ ದಿಸಿದ್ದರೆಂಬುದನ್ನು ವಾಚಕರೇ ಊಹಿಸಿ ತಿಳಿಯುವುದು ಮೇಲು. ಶಾಸ್ತ್ರಿಗಳು ಈ ಕಲೆಯನ್ನು ಅಭ್ಯಾಸ ಮಾಡಿದುದು ಧನದಾಸೆಯಿಂದಲಾಗಿರಲಿಲ್ಲ. ಅವರು ಜ್ಯೋ ತಿಷಶಾಸ್ತ್ರವನ್ನು ಕಲಿತುದು ಆ ಕಲೆಯನ್ನು ಕುರಿತು ಪರಿಪೂರ್ಣ ಜ್ಞಾನವನ್ನು ಸಂಪಾದಿಸಲಿಕ್ಕು, ಆ ಶಾಸ್ತ್ರವನ್ನು ಪ್ರಯೋಗರೂಪದಲ್ಲಿ ಕೊಂಡುಬರುವದಕ್ಕೂ ಆಗಿದ್ದಿತು. ವಿಚಾರಿಸಿದ್ದರೆ ಅವರು ಈ ಶಾಸ್ತ್ರದ ಮೂಲಕ ಅಪಾರ ದ್ರವ್ಯವನ್ನು ಸಂಪಾದಿಸಬಹುದಿತ್ತು; ಆದರೆ ಹಣದಾಸೆಯಿಂದ ಅವರು ತಮ್ಮ ಜ್ಞಾನವನ್ನು ಮಾರಲಿಲ್ಲ

ಈ ಕಾಲದಲ್ಲಿ ಶಾಸ್ತ್ರಿಗಳ ಪ್ರಾಯವು ಅರವತ್ತಕ್ಕಿಂತಲೂ ಹೆಚ್ಚಾಗಿದ್ದಿತು. ಆದರೂ ವಾರ್ಧಕ್ಯ ಕಾಲದ ಬಲಹೀನತೆಯು ಅವರ ಶರೀರವನ್ನು ಸ್ಪರ್ಶಿಸಿರಲಿಲ್ಲ

ಅವರ ದೇಹವು ಸಶಕ್ತನಾಗಿದ್ದಿತು. ಒಂದು ದಿವಸದಲ್ಲಿ ನಾಲ್ಕಾರು ಹರದಾರಿಗಳಷ್ಟು ದೂರ ನಡೆಯಲಿರುವ ತ್ರಾಣವು ಅವರ ಶರೀರದಲ್ಲಿದ್ದಿತು. ಜರೆಯ ಸ್ಪರ್ಶದಿಂದ ಅವರ ಕೂದಲುಗಳು ಕೃಷ್ಣ ವರ್ಣವನ್ನು ಉಪೇಕ್ಷಿಸಿ ಬಿಳಿಯ ಬಣ್ಣವನ್ನು ತಾಳ ತೊಡಗಿದ್ದವು. ವಿಶಾಲವಾದ ಲಲಾಟದಲ್ಲಿ ವಾರ್ಧಕ್ಯವನ್ನು ಸೂಚಿಸುವ ಹಲವು ಗೆರೆಗಳು ಗೋಚರವಾಗತೊಡಗಿದ್ದುವು. ಹೊಳೆಯುತ್ತಿರುವ ಅವರ ಕಣ್ಣಾಲಿಗಳಲ್ಲಿ ಸೌಮ್ಯತೆಯು ತಾಂಡವವಾಡುತ್ತಿತ್ತು. ದೃಢವಾದ ಅವರ ಅಂಗೋಪಾಂಗಗಳು ಪರಿಶುದ್ಧ ಜೀವನವನ್ನು ಸೂಚಿಸುತ್ತಲಿದ್ದುವು. ಆ ವದನಮಂಡಲದಲ್ಲಿ ಪಾಪದ ಸುಳಿವಿಲ್ಲ.

ಶಾಸ್ತ್ರಿಗಳ ಪ್ರಾಯವು ಅರವತ್ತಕ್ಕೆ ತಲುಪಿದ್ದಿತು; ಜನರು ಅವರು ಇನ್ನೊಂದು ಕಾಲು ಶತಮಾನದ ಕಾಲದ ವರೆಗೆ ಜೀವಿಸಬಹುದೆಂದು ನುಡಿಯುತ್ತಿದ್ದರು. ಅವರು ಕುಟುಂಬಿಗಳು; ಅವರು ಮೂರು ಮಂದಿ ಪುತ್ರರನ್ನು ಪಡೆದಿದ್ದರು; ಆದರೆ ಅವರು ಈ ಮೂರು ಮಂದಿ ಪುತ್ರರತ್ನರೊಡನೆ ಜೀವಿಸುವುದನ್ನು ವೀಕ್ಷಿಸಿ ವಿಧಿಯು ಅಸೂಯೆಯನ್ನು ಹೊಂದಿತು. ಅದು ಮಾರಿಬೇನೆಯ ರೂಪದಲ್ಲಿ ಬಂದು ಎರಡು ಮಂದಿ ಪುತ್ರರನ್ನು ಸೆಳೆದುಕೊಂಡು ತೆರಳಿತು. ಅವರ ಕೊನೆಯ ಪುತ್ರನಾದ ಶ್ರೀನಿವಾಸನು ಮಾತ್ರ ಅವರ ಮುಪ್ಪಿನ ಕಾಲದಲ್ಲಿ ಉಳಿದನು. ವಾರ್ಧಕ್ಯಕಾಲದಲ್ಲಿ ಅವರನ್ನು ಸಲಹುವ ಭಾಗ್ಯವವನಿಗೆ ಲಭಿಸಿತು.

ಶಾಸ್ತ್ರಿಗಳ ಉಪಜೀವನ ಮಾರ್ಗವು ಬೇಸಾಯವಾಗಿದ್ದಿತು. ಪಿತ್ರಾರ್ಜಿತವಾದ ಸ್ವಲ್ಪ ಭೂಮಿಯು ಅವರಿಗಿತ್ತು. ಅದರಿಂದ ಬರುವ ಉತ್ಪನ್ನದಿಂದ ಅವರ ಕುಟುಂಬದ ಉಪಜೀವನವು ಸಾಗುತ್ತಿತ್ತು. ಇದಲ್ಲದೆ ಶಾಸ್ತ್ರಿಗಳಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿದ ಶಿಷ್ಯರಿಂದ ಗುರುದಕ್ಷಿಣೆಯಲ್ಲಿ ಬರುತ್ತಿರುವ ದ್ರವ್ಯವೂ ಶಾಸ್ತ್ರಿಗಳ ಚೀಲವನ್ನು ಸೇರುತ್ತಿತ್ತು.

ಶ್ರೀನಿವಾಸನು ಪ್ರಾಯಸ್ಥನಾಗಲು, ಶಾಸ್ತ್ರಿಗಳು ಅನುರೂಪಿಣಿಯಾದ ಓರ್ವ ಕನ್ಯೆಯನ್ನು ಲಗ್ನ ಮಾಡಿಸಿ, ಗೃಹಸ್ಥಾಶ್ರಮವನ್ನು ಸ್ವೀಕರಿಸುವಂತೆ ಮಾಡಿದರು. ಶ್ರೀನಿವಾಸನಾದರೂ ತಂದೆಯಂತೆ ಸಚ್ಛೀಲನಾದ ಒಬ್ಬ ಮಗನಾಗಿದ್ದನು. ಈಗಿನವರಂತೆ ಆಂಗ್ಲವಿದ್ಯಾಭ್ಯಾಸವನ್ನು ಮಾಡದಿದ್ದರೂ ತನ್ನ ತಂದೆಯಿಂದ ಸಂಸ್ಕೃತ ಕಾವ್ಯ ಜ್ಯೋತಿಷ ಎಂಬೀ ವಿದ್ಯೆಗಳನ್ನು ಕಲಿತಿದ್ದನು. ತಮ್ಮ ಕುಟುಂಬ ಭಾರವನ್ನು ಮಗನಿಗೆ ವಹಿಸಿ, ಶಾಸ್ತ್ರಿಗಳು ಈಶ್ವರ ಚಿಂತನೆಯಲ್ಲಿ ದಿನಗಳನ್ನು ವ್ಯಯಗೊಳಿಸಿದರು.

ಮಗನಿಗೆ ಗೃಹಕೃತ್ಯ ಭಾರವನ್ನು ವಹಿಸಿದ ಅನಂತರ ಶಾಸ್ತ್ರಿಗಳ ಜೀವನವು ಅದೊಂದು ರೀತಿಯ ವಾನಪ್ರಸ್ಥಾಶ್ರಮವಾಯಿತೆಂದು ಹೇಳಬಹುದು. ಅವರು ಈ ಮೊದಲಿನ ಹಾಗೆ ಜ್ಯೋತಿಷಶಾಸ್ತ್ರದ ಪ್ರಯೋಗಿಕತೆಯನ್ನು ವ್ಯಯಗೊಳಿಸದೆ, ಆ ಕಾಲವನ್ನು ಭಗವದ್ಗೀತೆ, ಉಪನಿಷತ್ತುಗಳು, ಭಾಗವತ ಎಂಬಿತ್ಯಾದಿ ಆಧ್ಯಾತ್ಮಿಕ ಗ್ರಂಥಗಳನ್ನು ಕಲಿಯುವುದರಲ್ಲಿ ವಿನಿಯೋಗಿಸಲಾರಂಭಿಸಿದರು. ಅಧ್ಯಯನ ಮಾತ್ರ

ವಲ್ಲ; ಸಾಧನೆಯೂ ಸಹಾ ಅವರ ಜೀವನದ ಒಂದು ಭಾಗವಾಗಿ ಪರಿಣಮಿಸಿತು. ಸಂಸ್ಕೃತದಲ್ಲಿ ಶಾಸ್ತ್ರಿಗಳಿಗೆ ಅದ್ವಿತೀಯವಾದ ಪಾಂಡಿತ್ಯವಿದ್ದುದರಿಂದ, ವೇದ-ಉಪನಿಷತ್ತುಗಳು ಇವುಗಳನ್ನು ವಾಚಿಸಿ, ಅವುಗಳ ಸಾರವನ್ನು ಗ್ರಹಿಸುವುದು ಸುಲಭವಾಗಿ ತೋರಿತು. ಜ್ಞಾನ ಕರ್ಮ ಯೋಗ ಭಕ್ತಿ ಎಂಬ ನಾಲ್ಕು ದಾರಿಗಳನ್ನು ಕುರಿತು ಶಾಸ್ತ್ರಿಗಳು ಜ್ಞಾನವನ್ನು ಸಂಪಾದಿಸಿದರು.

ಈ ನಾಲ್ಕು ದಾರಿಗಳಲ್ಲಿ ಭಕ್ತಿಯಾಗಿದ್ದಿತು ಶಾಸ್ತ್ರಿಗಳಿಗೆ ಅತ್ಯಂತ ಹೃದ್ಯವಾಗಿ ತೋರಿದ್ದುದು. 'ಲೋಕವೇ ಮಿಥ್ಯ' ಎಂದು ಸರ್ವಸ್ವವನ್ನೂ ತ್ಯಜಿಸಿ ಸರ್ವಸಂಗ ಪರಿತ್ಯಾಗಿಯಾದ ಜ್ಞಾನಿಯ ದಾರಿಯಾಗಲೀ, ಈ ಪ್ರಪಂಚದಲ್ಲಿ ಸಿಲುಕಿ ಯಾವ ಆಗ್ರಹವಿಲ್ಲದಿದ್ದರೂ, ಕರ್ಮನಿರತನಾಗಿ ಊರ್ಧ್ವಶ್ವಾಸವನ್ನು ಬಿಡುತ್ತಿರುವ ಕರ್ಮಯೋಗಿಯ ದಾರಿಯಾಗಲೀ, ಪ್ರಾಣಾಯಾಮ, ಯೋಗಾಭ್ಯಾಸ ಎಂಬಿತ್ಯಾದಿ ಸಾಧನಗಳಿಂದ ದೇಹವನ್ನು ದಂಡಿಸುತ್ತಿರುವ ಪಥವಾಗಲೀ ಶಾಸ್ತ್ರಿಗಳಿಗೆ ರುಚಿಸಲಿಲ್ಲ. ಭಕ್ತಿಯಾಗಿದ್ದಿತು ಅವರ ಜೀವನದ ದಾರಿ; ಅತ್ಯಂತ ಮೃದುವೂ ಸರಳವೂ ಆದ ಭಕ್ತಿಯು ಅವರ ಹೃದಯವನ್ನು ಸ್ಪರ್ಶಿಸಿತು. ಭಾಗವತದಲ್ಲಿ "ನೀನೇ ನಮ್ಮ ನಾಯಕನು" ಎಂದು ಮುರಲೀಧರನೊಡನೆ ಭಕ್ತಿತನ್ಮಯರಾಗಿ ವೃಂದಾವನದ ಗೋಪಕನ್ಯೆಯರು ನುಡಿದ ಮಾತುಗಳನ್ನು ಓದಲು ಶಾಸ್ತ್ರಿಗಳ ಹೃದಯವು ಕರಗಿ ಹೋಯಿತು. ಆ ಸಂದರ್ಭದಲ್ಲಿ ರಾಸಕ್ರೀಡೆಯ ಚಿತ್ರವು ಅವರ ಕಣ್ಣುಗಳ ಮುಂದೆ ತಾಂಡವವಾಡತೊಡಗಿತು. ಮುಗ್ಧೆಯರು,-ಆಧ್ಯಾತ್ಮಿಕ ಜ್ಞಾನದ ಪರಿಚಯವಿಲ್ಲ,-ಯೋಗಪಥದ ತಿಳುವಿಲ್ಲ,- ಆದರೂ ಭಕ್ತಿರಸತನ್ಮಯರಾಗಿ ತಮ್ಮ ಜೀವನದ ನಾಯಕನು ಯಾರೆಂಬುದನ್ನು ಅರಿತು, ಲೋಕದ ನಿಂದೆ, ಪರಿಹಾಸ ಇವುಗಳನ್ನು ಲೆಕ್ಕಿಸದೆ ಆ ಭಗವಂತನ ಚರಣದಾವರೆಗಳಲ್ಲಿ ಸರ್ವಸ್ವವನ್ನೂ ಅರ್ಪಿಸಿದ ಆ ಗೋಪಕನ್ನೆಯರ ಆ ಉದ್ಯಮವು ಎಷ್ಟು ಮಹತ್ತಾದುದು? ಎಂಬುದನ್ನು ಕುರಿತು ಶಾಸ್ತ್ರಿಗಳು ತಾಸು ತಾಸುಗಳ ಪರ್ಯಂತ ಚಿಂತಿಸುತ್ತಲಿದ್ದರು. ಹಲವು ಸಾರಿ ಹರ್ಷಪುಲಕಿತರಾಗಿ ಅವರು ಆನಂದ ಬಾಷ್ಪವನ್ನು ಸುರಿಸುತ್ತಿದ್ದರು. ಅವರ ಹೃದಯಗಂತರಾಳದಿಂದ 'ಭಗವಂತಾ! ನಿನ್ನೆಡೆಗೆ ಬಂದಿದ್ದೇನೆ; ಕಲ್ಮುಳ್ಳುಗಳ ದಾರಿಯನ್ನು ತುಳಿದಿದ್ದೇನೆ ನನ್ನನ್ನು ಹಿಡಿದೆತ್ತು!" ಎಂಬ ಪ್ರಾರ್ಥನೆಯು ಹೊರಸೂಸುತ್ತಲಿದ್ದಿತು.

ಶಾಸ್ತ್ರಿಗಳ ಹೃದಯದಲ್ಲಿ ಭಕ್ತಿರಸವು ಸಂಜಾತವಾಗಲು, ಅವರಿಗೆ ಜ್ಯೋತಿಷ ಶಾಸ್ತ್ರದಲ್ಲಿಯೂ ಕಾವ್ಯಗಳಲ್ಲಿಯೂ ಇರುವ ಅಭಿರುಚಿಯು ಗೌಣವಾಯಿತು. ಸಕ್ಕರೆಯಲ್ಲಿ ಅತ್ಯಾಸಕ್ತನಾದವನಿಗೆ ಜೇನನ್ನು ಆಸ್ವಾದಿಸಲು ಸಿಕ್ಕಿದರೆ, ಆ ಮನುಷ್ಯನಿಗೆ ಸಕ್ಕರೆಯಲ್ಲಿರುವ ಅತ್ಯಾಸಕ್ತಿಯು ಹೇಗೆ ದೂರವಾಗುವದೋ, ಅದರಂತೆಯೇ ಶಾಸ್ತ್ರಿಗಳಿಗೆ ಭಕ್ತಿಪೀಯೂಷವು ಲಭಿಸಲು, ಇತರ ರಸಗಳೆಲ್ಲವೂ ತಾವಾಗಿಯೇ ಅವರಿಂದ ದೂರವಾಗುವವು. ಅವರಲ್ಲಿ ಭಕ್ತಿಯು ಹೆಚ್ಚಿದಂತೆಯೇ ಸಂಕುಚಿತ ಬುದ್ಧಿಯೂ ದೂರವಾಯಿತು. ಅವರ ಮಡದಿ-ಮಕ್ಕಳು, ಅವರ ಬಂಧು-ಬಳಗದವರು ಮಾತ್ರ

ವಾಗಿರದೆ, ಲೋಕವೇ ತವ್ಮ ಕುಟುಂಬವೆಂಬ ಭಾವನೆಯು ಅವರ ಹೃದಯದಲ್ಲಿ ಸಮುತ್ಪನ್ನವಾಯಿತು. ಪ್ರೇಮಲತೆಯು ಅವರ ಹೃದಯದಲ್ಲಿ ಬೆಳೆಯಲಾರಂಭಿಸಿತು.

ಈ ಮೊದಲು ಅವರು ತಮ್ಮಲ್ಲಿ ಜ್ಞಾನಾರ್ಜನೆಯನ್ನು ಮಾಡಲು ಬಂದಿದ್ದ ವಿದ್ಯಾರ್ಥಿಗಳೊಡನೆ ತಾವು ಅವರಿಗಿಂತಲೂ ಮೇಲೆಂಬ ತಿಳುವಳಿಕೆಯಿಂದ-ಗೌರವದಿಂದ ವರ್ತಿಸುತ್ತಲಿದ್ದರು; ಆದರೆ ಶಾಸ್ತ್ರಿಗಳ ಜೀವನದಲ್ಲಿ ಆಧ್ಯಾತ್ಮಿಕ ಚಿಂತನೆಗಳು ಸಮಾವೇಶವಾಗಲು, ಅವರ ಈ ವರ್ತನದಲ್ಲಿ ಒಂದು ಮಾರ್ಪು ಸಂಭವಿಸಿತು ಅವರು ತಾವು ಗುರುಗಳು, ಅವರು ಶಿಷ್ಯರು ಎಂಬ ಭಾವನೆಯನ್ನು ತ್ಯಜಿಸಿ, ಗೆಳೆತನದಿಂದ ವರ್ತಿಸಲಾರಂಭಿಸಿದರು ಅವರು 'ಗೌರವ'ವೆಂಬ ಮೆಟ್ಟಿಲಿನಿಂದಿಳಿದು ಪ್ರೇಮಪೀಠವನ್ನು ಹತ್ತಿದರು ಶಿಷ್ಯರಿಗೆ ಪಾಠಗಳನ್ನು ಹೇಳಿಕೊಡುತ್ತಿರುವಾಗ ಹಲವು ಸಾರಿ ಅವರು ತಮ್ಮ ವ್ಯಕ್ತಿತ್ವವನ್ನೇ ಮರೆತುಬಿಡುತ್ತಿದ್ದರು. ತಮ್ಮ ಪ್ರಾಯವನ್ನು ಮರೆತು, ಎಳೆಯ ವಯಸ್ಸಿನ ಬಾಲಕರೊಡನೆ ಆಡುವುದರಲ್ಲಿಯೂ ವಿನೋದದ ಮಾತು-ಕತೆಗಳಲ್ಲಿಯೂ ಶಾಸ್ತ್ರಿಗಳು ನಿರತರಾಗುತ್ತಿದ್ದರು. ಗುರುಗಳ ಈ ಪ್ರೇಮಪರಿಪೂರ್ಣವಾದ ವರ್ತನೆಯು ಶಿಷ್ಯವರ್ಗದಲ್ಲಿದ್ದ ಅಲಸತೆಯನ್ನು ಹೋಗಲಾಡಿಸಿ, ಅವರಲ್ಲಿ ಉನ್ಮೇಷ ಉಂಟಾಗುವಂತೆ ಮಾಡಿತು.

ಶಾಸ್ತ್ರಿಗಳಿಗೆ ಈಗ ತಮ್ಮ ಶಿಷ್ಯರಿಗೆ ಭಕ್ತಿರಸಪ್ರಧಾನವಾದ ಕತೆಗಳನ್ನು ನುಡಿಯುವುದೆಂದರೆ ಒಂದು ಬಗೆಯ ಉತ್ಸಾಹ! ತಮ್ಮ ಮನೆಯ ಜಗುಲಿಯಲ್ಲಿ ಕುಳಿತು ತಮ್ಮಲ್ಲಿ ವಿದ್ಯಾರ್ಜನೆಗಾಗಿ ಬಂದ ಗ್ರಾಮೀಣ ವಿದ್ಯಾರ್ಥಿಗಳಿಗೆ ಅವರು ಆಗಾಗ ಕತೆಗಳನ್ನು ಹೇಳುವುದುಂಟು. ಅವರು ಒಂದು ದಿನ ದೇವರನ್ನು ಕಾಣುವುದಕ್ಕಾಗಿ ಮಲತಾಯಿಯಿಂದ ತಿರಸ್ಕೃತನಾದ ಧ್ರುವಕುಮಾರನು ವಿಪಿನಕ್ಕೆ ತೆರಳುತ್ತಿರುವ ಭಾಗವನ್ನು ನುಡಿಯುತ್ತಿದ್ದಾಗ, ಶಾಸ್ತ್ರಿಗಳು ಕಂಬನಿಗಳನ್ನು ಸುರಿಸಿದರು.

"ಏಕೆ ಗುರುಗಳೇ, ತಾವು ಕಣ್ಣೀರನ್ನು ಹರಿಸುತ್ತೀರಿ?" ಎಂದು ಒಬ್ಬ ಶಿಷ್ಯನು ಪ್ರಶ್ನಿಸಿದನು.

"ಮಗು ನೀನೇನು ಬಲ್ಲೆ? ಧ್ರುವಬಾಲನು ಮಲತಾಯಿಯ ನುಡಿಗಳಿಗೆ ನೊಂದುಕೊಂಡು, ತನ್ನ ಸಂಕಟಪರಿಹಾರ ಮಾರ್ಗವು ಪರಂಜ್ಯೋತಿಯ ಸಾಕ್ಷಾತ್ಕಾರವೆಂದು ತಿಳಿದು, ಸರ್ವಸಂಗವನ್ನು ಪರಿತ್ಯಜಿಸಿ ಅಡವಿಗೆ ತೆರಳಿದನು; ಆದರೆ ಇಂದು ನಾವು ಅದಕ್ಕಿಂತ ಹೆಚ್ಚು ದುಃಖಕರ-ಸಹನಾತೀತವಾದ ಸಂಕಟಸಂದೋಹವನ್ನು ಭುಂಜಿಸುತ್ತಲಿದ್ದರೂ, ದೂರದಲ್ಲಿ ಪ್ರಜ್ವಲಿಸುತ್ತಿರುವ ಆ ದಿವ್ಯಜ್ಯೋತಿಯ ಪ್ರಕಾಶವನ್ನು ಕಾಣದೆ, ಊರ್ಧ್ವಶ್ವಾಸವನ್ನು ಬಿಡುತ್ತಿರುವ ಚಿತ್ರವನ್ನು ನೆನೆಯುವಾಗ ಈ ಕಣ್ಣುಗಳಲ್ಲಿ ನೀರುಬರುತ್ತಿರುವದು."

ಶಾಸ್ತ್ರಿಗಳ ಈ ಮಾತುಗಳು, ಅವರ ವಿಚಾರಗಳು ಎಷ್ಟು ಆಳವಾಗಿರುವವು? ಎಂಬುದನ್ನು ಸೂಚಿಸುತ್ತಲಿದ್ದುವು. ಒಂದುವೇಳೆ ಆ ಶಿಷ್ಯನು ಗುರುಗಳ ಆ ಮಾತುಗಳ ಸಾರವನ್ನು ಗ್ರಹಿಸಿರಲಿಕ್ಕಿಲ್ಲ; ಆದರೆ ಶಾಸ್ತ್ರಿಗಳ ತೀಕ್ಷ್ಣವಾದ ಬುದ್ಧಿಯ ಆಳ

ವಾದ ಚಿಂತನೆಗಳ ಫಲವಾಗಿ ಈ ಮಾತುಗಳು ಹೊರಬಿದ್ದಿದ್ದುವು. ಮಾನುಷ ಜೀವನದಲ್ಲಿ ಕಾಣುತ್ತಿರುವ ಬಲಹೀನತೆಯು ಜೀವಿತೋದ್ದೇಶ ಸಾಧನೆಯ ಮಾರ್ಗ ದಲ್ಲಿರುವ ಒಂದು ದೊಡ್ಡ ಪ್ರತಿಬಂಧವಾಗಿದೆ ಎಂಬುದನ್ನು ಅವರು ಅರಿತಿದ್ದರು.

ಅದೊಂದು ಬೇಸಿಗೆಯ ಕಾಲವು; ಶ್ರೀನಿವಾಸನ ಇನಿಯಳು ತುಂಬಿದ ಗರ್ಭಿ ಣಿಯು. ಶಾಮಾಶಾಸ್ತ್ರಿಗಳ ಕುಟುಂಬದವರೆಲ್ಲರೂ ಶಿಶುಜನನವನ್ನು ನಿರೀಕ್ಷಿಸುತ್ತ ಲಿದ್ದರು. ಒಂದು ದಿನ ಶಾಸ್ತ್ರಿಗಳು ತಮ್ಮ ಶಿಷ್ಯರಿಗೆ ಪಾಠಗಳನ್ನು ಹೇಳಿಕೊಡುತ್ತಾ ಎಂದಿನಂತೆ ಜಗುಲಿಯ ಮೇಲೆ ಕುಳಿತಿದ್ದರು. ಅವರ ಮಧುರವಾದ ಕಂಠವಾಣಿಯು ಬಹುದೂರದ ವರೆಗೆ ಕೇಳಬರುತ್ತಿದ್ದಿತು. ಇಂದು ವಿದ್ಯಾದಾನ ಮಾಡುವುದರಲ್ಲಿ ಶಾಸ್ತ್ರಿಗಳಿಗೆ ಎಂದಿಗಿಂತ ಹೆಚ್ಚು ಉತ್ಸಾಹವಿದ್ದಿತು. ಶಿಷ್ಯರೆಲ್ಲರೂ ಮೌನದಲ್ಲಿ ಶಾಸ್ತ್ರಿ ಗಳ ಮುಖದಿಂದ ಹೊರಡುತ್ತಿರುವ ನುಡಿಗಳನ್ನು ಆಶ್ರಾವಿಸುತ್ತಲಿದ್ದರು.

ಈ ಸಮಯದಲ್ಲಿ ಶಾಸ್ತ್ರಿಗಳ ಮಡದಿಯು ಹರ್ಷಭರಿತಳಾಗಿ ಜಗುಲಿಗೆ ಬಂದಳು; ಶಾಸ್ತ್ರಿಗಳು ತಮ್ಮ ಮೂಗಿನ ಮೇಲಿರುವ ಸುಲೋಚನವನ್ನು ತೆಗೆದು ಕರದಲ್ಲಿ ಹಿಡಿದುಕೊಂಡು, ಹೆಂಡತಿಯ ಕಡೆಗೆ ಮುಖವನ್ನು ತಿರುಗಿಸಿ, 'ಏನೇ ಅದು?'

"ಪುತ್ರೋತ್ಸವವಾಗಿದೆ!"

"ರತ್ನಳು ಪ್ರಸವಸಿದಳೇ?" "ಹೌದು"

"ಹಾಗಾದರೆ ಆ ಪಂಚಾಂಗವನ್ನೂ ಕವಡೀ ಚೀಲವನ್ನೂ ತಕ್ಕೊಂಡು ಬಾ."

ಮೊಮ್ಮಗನ ಜನನವಾರ್ತೆಯನ್ನು ತಿಳಿದೊಡನೆಯೇ, ವೃದ್ಧನ ಮುಖವು ಹರ್ಷದಿಂದ ಉಬ್ಬಿತು. ಪೌತ್ರನ ಭಾವೀ ಬದುಕು ಯಾವ ರೀತಿಯದೆಂಬುದನ್ನು ತಿಳಿಯಲು ಅವರು ಉತ್ಸುಕರಾದರು ಮಾಯವಾಗಿದ್ದ ಜ್ಯೋತಿಷ ಶಾಸ್ತ್ರದ ಹುಚ್ಚು ಅವರ ಮೆದುಳಿನಲ್ಲಿ ಪುನಃ ತಲೆದೋರಿತು. ಮುದುಕಿಯು ಕವಡೀ ಚೀಲವನ್ನೂ ಪಂಚಾಂಗವನ್ನೂ ತೆಗೆದುಕೊಂಡು ಬಂದು ಶಾಸ್ತ್ರಿಗಳಿಗೆ ಕೊಟ್ಟಳು. ಅವರು ಪಂಚಾಂಗವನ್ನು ಬಿಡಿಸಿ ನೆಲದ ಮೇಲೆ ಗೃಹಕುಂಡಲಿಯನ್ನು ಬರೆದು, ಶಿಶುವಿನ ಜನನಕಾಲದಲ್ಲಿರುವ ಗ್ರಹಗಳ ಪರಿಸ್ಥಿತಿಯನ್ನು ಕಂಡು ಹಿಡಿಯಲು ಪ್ರಯತ್ನಿಸಿದರು. ಕೆಲವು ಸಂಸ್ಕೃತ ಶ್ಲೋಕಗಳನ್ನು ಉಚ್ಚರಿಸುತ್ತ ಶಾಸ್ತ್ರಿಗಳು ಚೀಲದಿಂದ ಕವಡಿ ಗಳನ್ನು ತೆಗೆದು ಗಣಿಸಲಾರಂಭಿಸಿದರು.

ಗ್ರಹಗಳ ಗತಿಯನ್ನು ಕಂಡು ಹಿಡಿದ ಅನಂತರ ಶಾಸ್ತ್ರಿಗಳು ನುಡಿಯಲಾರಂಭಿ ಸಿದರು. "ವಿದ್ಯೆಯಲ್ಲಿಯೂ ಜ್ಞಾನದಲ್ಲಿಯೂ ಇವನಷ್ಟು ಪಂಡಿತರು ಅವನ ಕಾಲ ದಲ್ಲಿ ಕಾಣಸಿಗುವುದು ದುರ್ಲಭವು; ಸ್ವಂತ ಹಿತಕ್ಕಿಂತಲೂ ಹೆಚ್ಚಾಗಿ ಪರರ ಹಿತ ವನ್ನು ಚಿಂತಿಸಿ ಪ್ರಯತ್ನಿಸುತ್ತಾನೆ. ನಿರಂತರ ಪ್ರಯತ್ನಶೀಲನು; ಆದರೆ ಪ್ರತಿಫಲ ದಲ್ಲಿ ಅವನಿಗೆ ಆಗ್ರಹವಿರುವುದಿಲ್ಲ ಸೌಮ್ಯ ಸ್ವಭಾವಿಯಾಗಿದ್ದರೂ ಹಲವು ಸಂದ ರ್ಭಗಳಲ್ಲಿ ಅವನು ಯುಕ್ತಾಯುಕ್ತ ವಿವೇಚನೆಯಿಲ್ಲದೆ ನಡೆಯುತ್ತಾನೆ. ಜನನ ದಿಂದಲೇ ದುಃಖಪರಂಪರೆಗಳನ್ನು ಅವನು ಅನುಭವಿಸುತ್ತಾನೆ."

"ಹಾಗಾದರೆ ಈ ಶಿಶುವಿನ ಜೀವನವು ಕ್ಲೇಶಪೂರ್ಣವೇ?" ಎಂದು ಮುದುಕಿಯು ಜನನ ಕಾಲದ ಗ್ರಹಗಳ ಸ್ಥಿತಿಯಿಂದ, ಆಗ ತಾನೇ ಉದಯವನ್ನು ಹೊಂದಿದ ಬಾಲಕನ ಭಾವೀಜೀವನವನ್ನು ಕುರಿತು ಚಿಂತಿಸುವುದರಲ್ಲಿ ನಿರತರಾದ ಶಾಸ್ತ್ರಿಗಳ ಹೊಳೆಯುತ್ತಿರುವ ಕಣ್ಣುಗಳನ್ನು ನೋಡುತ್ತ ಪ್ರಶ್ನಿಸಿದಳು.

"ಹೌದು. ಎಂಟು ವರ್ಷ ಪ್ರಾಯವಾಗುವುದರೊಳಗಾಗಿ ಬಾಲಕನು ಅನಾಥನಾಗಿ ಹೋಗುವನು. ಅವನ ಮಾತಾ-ಪಿತೃಗಳಿಗೆ ಹಾನಿಯಿದೆ, ಎಂಬುದು ನಿರ್ವಿವಾದವು. ಅತ್ಯಂತ ದಾರುಣವಾದ ಕ್ಲೇಶಗಳನ್ನು ಅನುಭವಿಸುತ್ತಾನೆ; ಆದರೆ ವಿದ್ಯಾಸಂಪನ್ನನಾಗುತ್ತಾನೆ. ಕುಬೇರನ ಸಂಪತ್ತು ಸಿಕ್ಕಿದರೂ ಅದನ್ನು ತ್ಯಜಿಸುತ್ತಾನೆ. ಹನ್ನೆರಡು ವರ್ಷಗಳ ವರೆಗೆ ಪತ್ನೀವಿಯೋಗ ದುಃಖವನ್ನು ಅನುಭವಿಸಬೇಕಾಗಿ ಬರುತ್ತದೆ. ಈ ಹನ್ನೆರಡು ವರ್ಷಗಳ ಅಜ್ಞಾತವಾಸವನ್ನು ಅನುಭವಿಸುತ್ತಾನೆ; ಆದರೆ ಅವನು ಅಂತ್ಯದ ವರೆಗೆ ಸತ್ಯ, ಧರ್ಮ ಇಷ್ಟಗಳಿಗಾಗಿ ಕಾದುತ್ತಾನೆ!"

"ಸಾಕು! ಈ ಭಯಂಕರ ವಾಣಿಯನ್ನು ನಾನು ಕೇಳಲಾರೆನು" ಎಂದು, ಶಾಸ್ತ್ರಿಗಳ ಭವಿಷ್ಯವನ್ನು ಕೇಳಿ ನೊಂದ ಅವರ ಮಡದಿಯು ಒಳಮನೆಗೆ ಹೊರಟು ಹೋದಳು.

ಹನ್ನೆರಡನೆಯ ದಿನ ಶಾಸ್ತ್ರಿಗಳ ಇಷ್ಟದಂತೆ ರಂಗನಾಥನೆಂಬ ಹೆಸರನ್ನು ಆ ಬಾಲಕನಿಗೆ ಇಡಲಾಯಿತು.

---

## ೨ ಹಳ್ಳಿಯಿಂದ ಪಟ್ಟಣವು

ಶಾಸ್ತ್ರಿಗಳ ಕುಟುಂಬದಲ್ಲಿ ಹೊಸದೊಂದು ತಾರೆಯು ಉದಯವನ್ನು ಹೊಂದಲು, ಆ ಕುಟುಂಬದ ಚರಿತ್ರೆಯಲ್ಲಿ ಒಂದು ಹೊಸ ಅಧ್ಯಾಯವು ಪ್ರಾರಂಭವಾಯಿತೆಂದೇ ಹೇಳಬಹುದು. ಇದುವರೆಗೆ ಶಾಂತತೆಯಿಂದ ತುಂಬಿದ್ದ ಆ ಗೃಹವು ಹಸುಕಂದನ ಕ್ರಂದನಾಲಾಪಗಳಿಂದ ನವಜೀವನದಿಂದ ಪರಿಪೂರ್ಣವಾಯಿತು. ನಮ್ಮ ಹಿರಿಯರು "ಮನೆಗೆ ಮಕ್ಕಳು ಚಂದ" ಎನ್ನುತ್ತಿರುವುದು ಅಕ್ಷರಶಃ ನಿಜವಾದ ಮಾತಾಗಿದೆ. ನಿಕೇತನದಲ್ಲಿ ಮಕ್ಕಳಿಲ್ಲದೆ ಹೋದರೆ, ಅದು ಕೇವಲ ಸ್ಮಶಾನದಂತೆಯೋ ಅಥವಾ ಮರುಭೂಮಿಯಂತೆಯೋ ತೋರುವುದು. ಅಲ್ಲಿ ಜೀವನದ ಕಳೆಯಿಲ್ಲ; ಉತ್ಸಾಹದ ನದಿಯು ಹರಿಯುತ್ತಿರುವುದಿಲ್ಲ. ಅಲ್ಲಿನ ಜೀವನವು ಒಂದು ಯಂತ್ರದ ಚಲನೆಯಂತೆ ನಿರುತ್ಸಾಹಭರಿತವಾಗಿರುತ್ತದೆ. ಪ್ರೇಮವು ನದಿಯಾಗಿ ಹರಿಯುತ್ತಿರುವ ಚಿತ್ರವನ್ನು ನಾವಲ್ಲಿ ಕಾಣಲಾರೆವು; ಕಂದನ ತೊದಲ್ನುಡಿಗಳ ಮಾಧುರ್ಯವನ್ನು ಅಲ್ಲಿ ಸವಿಯಲಾರೆವು

ಬಾಲ್ಯವನ್ನು ಕುರಿತು ನೀನೇಕೆ ಇಷ್ಟು ಉತ್ಸಾಹದಿಂದ ನುಡಿಯುತ್ತಿರುವೆ? ಎಂಬುದಾಗಿ ವಾಚಕರು ಒಂದು ವೇಳೆ ಪ್ರಶ್ನಿಸಬಹುದು. ಅದಕ್ಕೆ ನಾನು ಹೇಳುವ ಜವಾಬು ಇದಾಗಿದೆ ಮನುಷ್ಯ ಜೀವನದ ತಳಹದಿಯು ಬಾಲ್ಯವಾಗಿದೆ ನಿರ್ವಿ

ಕಾರಭರಿತವಾದ ಪರಿಶುದ್ಧ ಪ್ರೇಮವನ್ನು ಬಾಲಕನಲ್ಲಿ ಹೊರತು ಇನ್ನೆಲ್ಲಿಯೂ ನಾವು ಕಾಣಲಾರೆವು. ಶಿಶುವಿನಲ್ಲಿ ನಾವು ವಿಶ್ವವ್ಯಾಪಿಯ ಪ್ರತಿಬಿಂಬವನ್ನು ನೋಡಬಹುದು. ಬಾಲಕನ ಹೃದಯದಲ್ಲಿ ಅನ್ಯರಿಗೆ ಕೇಡುಕನ್ನು ಬಗೆಯುವ ದುರ್ಗುಣವಿಲ್ಲ; ಆ ಕೋಮಲ ಮನಸ್ಸು ತನಗೆ ಅಪಕಾರವನ್ನು ಮಾಡಿದವರಿಗೆ ಪ್ರತೀಕಾರವನ್ನು ಮಾಡಲು ಬಯಸುವದಿಲ್ಲ. ಬಾಲಕನ ಹೃದಯವನ್ನು ಕಾಪಟ್ಯವು ಸ್ಪರ್ಶಿಸಲಾರದು. ಅಹಂಕಾರ, ವಿಕಾರ, ವ್ಯಾಮೋಹ ಎಂಬ ಮುಗಿಲುಗಳು ಅದನ್ನು ಆವರಿಸಲಾರವು ಆದುದರಿಂದ ಬಾಲ್ಯವು ಅತ್ಯಂತ ಪರಿಶುದ್ಧವಾದುದಾಗಿದೆ. ಇರಲಿ.

ರಂಗನಾಥನ ಮೇಲೆ ಶಾಸ್ತ್ರಿಗಳಿಗೆ ಅನಿರ್ವಾಜವಾದ ವಾತ್ಸಲ್ಯ; ತೊಟ್ಟಿಲಲ್ಲಿ ಮಲಗಿದ ಕಂದನನ್ನು ಅವರು ಪ್ರೇಮಭರಿತರಾಗಿ ನೋಡುವರು. ಕಂದನ ಎಳೆ ಮೊಗದಲ್ಲಿ ಉಕ್ಕುತ್ತಿರುವ ನಗುವು ಶಾಸ್ತ್ರಿಗಳ ಹೃದಯವನ್ನು ಅರಳಿಸುವುದು. ಅದು ಅವರಿಗೆ ತಮ್ಮ ಬಾಲ್ಯವನ್ನು ಕುರಿತು ನೆನಪನ್ನು ಮಾಡಿಕೊಡುವುದು. ಹಾಗೆಯೇ ಅವರು ತೊಟ್ಟಿಲಿನಿಂದ ಶಿಶುವನ್ನು ಎತ್ತಿಕೊಂಡು ಅದರ ಹಣೆಯ ಮೇಲೆ ವಾತ್ಸಲ್ಯಪೂರ್ಣರಾಗಿ ಚುಂಬಿಸಿದರು. ಮಗುವು ದೊಡ್ಡದಾದ ಒಂದು ನಗುವನ್ನು ಹೊರಸೂಸಿತು. ಶಾಸ್ತ್ರಿಗಳು, "ಕಳ್ಳ, ಏಕೆ ನಗುತ್ತಿರುವೆ?" ಎಂದು ಹಾಸ್ಯಸ್ವರದಲ್ಲಿ ಪ್ರಶ್ನಿಸಿದರು. ಶಾಸ್ತ್ರಿಗಳ ಪ್ರಶ್ನೆಗೆ ರಂಗನು ತನ್ನ ಹಲ್ಲಿಲ್ಲದ ಬಾಯಿಯನ್ನು ಅಗಲವಾಗಿ ತೆರೆದು, ದೊಡ್ಡದಾದ ಇನ್ನೊಂದು ನಗೆಯನ್ನು ಹೊರಚೆಲ್ಲಿದನು. ಶಾಸ್ತ್ರಿಗಳು ಮಗುವನ್ನು ಎದೆಗಪ್ಪಿಕೊಂಡು, ಅದರ ಶಿರಸ್ಸನ್ನು ಚುಂಬಿಸಿದರು.

ರಂಗನು ಹರಿದಾಡಲು ಪ್ರಾರಂಭಿಸಿದನು; ಮಗುವು ಅಂಬೆಗಾಲಿಡಲು ಕಲಿತಿತೆಂದರೆ ಸ್ವಲ್ಪಕಾಲದವರೆಗೆ ಮನೆಯವರಿಗೆಲ್ಲಾ ತೊಂದರೆಯೆಂಬುದು ಅನುಭವಸಿದ್ಧವಾದ ಒಂದು ಮಾತು. ತುಂಟತನವಾವರೂ ಈ ಕಾಲದಲ್ಲಿಯೇ ಪ್ರಾರಂಭವಾಗುವುದು. ಮನೆಯಲ್ಲಿ ಕೈಗೆ ಸಿಕ್ಕಿದ ಸಾಮಾನುಗಳನ್ನೆಲ್ಲಾ ಉರುಳಿಸಿ, ಮಡಿಕೆಗಳನ್ನೊಡೆದು, ಚಿಕ್ಕದಾದ ಒಂದು ಕ್ರಾಂತಿಯನ್ನುಂಟು ಮಾಡುವುದು ಮಗುವಿನ ದೈನಂದಿನ ಕೃತ್ಯಗಳಲ್ಲಿ ಒಂದಾಗಿದೆ ಎಂದಂದರೆ ತಪ್ಪಾಗಲಾರದು. ತಿಪ್ಪೆಯ ಹೊಂಡದ ನೀರಿನಲ್ಲಿ ಸ್ನಾನವನ್ನು ಮಾಡುವುದು, ಯಾವುದಾದರೂ ಒಂದು ವಸ್ತುವು ಸಿಕ್ಕಿದರೆ ಅದನ್ನು ಬಾಯಿಗೆ ಹಾಕಿಕೊಂಡು ಜಗಿಯುವುದು, ಕೆಸರನ್ನು ಬಹು ರಮ್ಯವಾಗಿ ಮೈಗೆಲ್ಲಾ ಲೇಪಿಸಿಕೊಳ್ಳುವುದು ಇವೆಲ್ಲಾ ಮಕ್ಕಳು ಸಾಮಾನ್ಯವಾಗಿ ನಡೆಯಿಸುತ್ತಿರುವ ಸಾಹಸ ಕೃತ್ಯಗಳಾಗಿರುತ್ತಿವೆ.

ರಂಗನು ಬಾಲಕನಾದುದರಿಂದ ಬಾಲಕರಲ್ಲಿ ತಲೆದೋರುವ ಈ ಚಟಗಳಲ್ಲಿ ಕೆಲವಾದರೂ ಅವನಲ್ಲಿ ಪ್ರಕಾಶಿಸಿದುವು, ಎಂದು ಹೇಳಹುದು. ಅವನು ನಡೆಯಲಿಕ್ಕೆ ಕಲಿತೊಡನೆ ಅವನ ಸಾಹಸ ಕೃತ್ಯಗಳಿಗೆ ಕಳೆಯೇರಿತು. ಮೊದಲನೆಯದು ಒಲೆಯ ಮೇಲಿನ ಹಾಲಿನ ಮಡಿಕೆಯನ್ನು ಮಗನಿಗಾಗಿ ಅವನ ಅಜ್ಜಿಯು ಹೊರಗೆ ತೆರ

ಳಿದ್ದಾಗ, ಒಲೆಯ ಮೇಲೆ ಹಾಲಿನ ಮಡಿಕೆಯನ್ನು ಏರಿಸುವದನ್ನು ಹೊಂಚು ಹಾಕುತ್ತಿದ್ದ ರಂಗನು ಬಂದು ಒಲೆಯ ಮೇಲಿನಿಂದ ಮಡಿಕೆಯನ್ನೆತ್ತಿ ಉಗುರು ಬಿಸಿಯಾದ ಹಾಲನ್ನು ತನ್ನ ಮಸ್ತಕದ ಮೇಲೆ ಅಭಿಷೇಕ ಮಾಡಿಕೊಂಡದ್ದಾಗಿದೆ. ಎರಡನೆಯದು ಯಾರಿಗೂ ತಿಳಿಯದಂತೆ ಸಾರಿನಲ್ಲಿ ಸೀಮೆ ಎಣ್ಣೆಯನ್ನು ಬೆರಸಿ, ಆ ದಿನ ಮಧ್ಯಾಹ್ನ ಎಲ್ಲರೂ ಏಕಾದಶೀವ್ರತವನ್ನು ಅನುಷ್ಠಿಸುವಂತೆ ಮಾಡಿದುದಾಗಿದೆ. ಹೀಗೆ ಅವನ ಬಾಲ್ಯದ ಸಾಹಸಗಳನ್ನು ಎಷ್ಟು ಬೇಕಾದರೂ ನಾನು ವಿವರಿಸಬಲ್ಲೆನು.

ಆದರೆ ಶಾಸ್ತ್ರಿಗಳಿಗೂ, ರಂಗನಿಗೂ ಮಧ್ಯೆ ಇರುವ ಗೆಳತನಕ್ಕೆ ಅವನ ಈ ತುಂಟತನವು ವಿಘ್ನವನ್ನುಂಟು ಮಾಡಲಿಲ್ಲ; ಎಂದು ಮಾತ್ರವಲ್ಲ, ರಂಗನು ಅನು ದಿನವೂ ನಡೆಯಿಸುತ್ತಿರುವ ಬಂಡಾಯಗಳಿಗೆ ಶಾಸ್ತ್ರಿಗಳು ಸಹಾಯವನ್ನು ನೀಡು ತ್ತಿದ್ದರು. ಅವನು ಒಂದು ದಿನ ಒಂದು ಕಂಚಿನ ಪಾತ್ರೆಯನ್ನು ಒಂದು ಕಲ್ಲಿನ ಮೇಲೆ ಅಪ್ಪಳಿಸಿ, ಅದು ನೂರು ಚೂರಾಗಿ ಹೋಗುವಂತೆ ಮಾಡಿದನು. ಈ ಕೃತ್ಯ ವನ್ನು ಕಂಡು ಅವನ ತಾಯಿಗೆ ರೇಗಿಹೋಯಿತು ಒಂದು ಕೋಲನ್ನು ಕೈಯಲ್ಲಿ ಹಿಡಿದುಕೊಂಡು ಅವನನ್ನು ಪ್ರಹರಿಸುವದಕ್ಕಾಗಿ ಅವಳು ಓಡಿ ಬಂದಳು; ಆದರೆ ರಂಗನು ಅವಳ ಕೈಗೆ ಸಿಕ್ಕಲಿಲ್ಲ; ಅವನು ಏಳುತ್ತಾ ಬೀಳುತ್ತಾ ಓಡಿಬಂದು ಜಗುಲಿ ಯಲ್ಲಿ ಹುಡುಗರಿಗ ಪಾಠವನ್ನು ಹೇಳಿಕೊಡುತ್ತಲಿದ್ದ ಶಾಸ್ತ್ರಿಗಳ ತೊಡೆಯ ಮೇಲೆ ಕುಳಿತುಕೊಂಡನು. ತನ್ನ ತಾಯಿಯ ಲಾಠೀಪ್ರಯೋಗದಿಂದ ಮೋಚನೆಯನ್ನು ಹೊಂದಬೇಕಾದರೆ ಅಜ್ಜನ ತೊಡೆಯೇ ಅಭಯವೆಂದು ಅವನು ತಿಳಿದಿದ್ದನು.

"ಅಜ್ಜಾ! ಅಜ್ಜಾ! ಅಮ್ಮಾ ಹೊಡೆಯೋಕೆ ಬತ್ತಾಳೆ!" ಎಂದು ರಂಗನು ಶಾಸ್ತ್ರಿಗಳ ಬಿಳೀ ವರ್ಣದ ಗಡ್ಡವನ್ನು ಹಿಡಿದುಕೊಂಡು ತನ್ನ ತೊದಲ್ನುಡಿಗಳಲ್ಲಿ ತನ್ನ ಅಜ್ಜನ ಮುಂದೆ ತನ್ನ ಸಂಕಟ ಅರ್ಜಿಯನ್ನು ನಿವೇದಿಸಿದನು.

"ಅದೇಕಪ್ಪಾ, ರಂಗಾ!"

"ನಾನು ಕಂಚ್ನಿ ಪಾತ್ರೇನ ಕಲ್ಮೇಲೆ ಎಚದೆ! ಅದು ಒಡದ್ದು ಹೋಯಿತು!"

"ಅದೇಕೋ, ಆ ಪೋಲಿ ಕೆಲ್ಸ ಮಾಡಿದೆ?"

ಇಷ್ಟರಲ್ಲಿಯೇ ಜನನಿಯು ಕೋಲಿನೊಡನೆ ಜಗುಲಿಗೆ ಬಂದು ತಲುಪಿದಳು; ಆಗ ರಂಗನು ಗೌರವಭಾವವನ್ನು ಅವಲಂಬಿಸಿ ಅಜ್ಜನ ತೊಡೆಯ ಮೇಲೆ ಅಭಯ ವನ್ನು ಹೊಂದಿದ್ದನು ಅವಳನ್ನು ನೋಡಿ ಶಾಸ್ತ್ರಿಗಳು "ರತ್ನಾ, ಏನಮ್ಮ?" ಎಂದರು.

ರಂಗನ ಜನನಿಯ ಹೆಸರು ರತ್ನ ಎಂದಾಗಿದೆ! ಅವಳು ಹೇಳಿದಳು "ಅಲ್ಲಿ, ನೋಡೀಂದ್ರೇ? ಈ ಹುಡುಗನ ತುಂಟತನವನ್ನು! ಆ ದೊಡ್ಡ ಕಂಚಿನ ಪಾತ್ರೆಯನ್ನು ಕಲ್ಲಿನ ಮೇಲೆ ಎತ್ತಿ ಹಾಕಿ ಒಡೆದುಬಿಟ್ಟ. ಇವನ ತುಂಟತನಕ್ಕೆ ಯಾವ ಮಿತಿಯೂ ಇಲ್ಲ."

"ಹೋಗಲಿ ಬಿಡು; ಮಗೂಗೆ ಬುದ್ಧಿಯಿದೆಯೇ? ಕಂಚುಪಾತ್ರೆಯನ್ನು ಒಡೆದು ಹಾಕಬಾರದು, ಎಂಬ ಜ್ಞಾನ ಹುಡುಗನಿಗಿಲ್ಲ. ನಾವು ಇಷ್ಟು ದೊಡ್ಡವರಾದ

ವರೇ ಎಷ್ಟೋ ಅವಾಂತರಗಳನ್ನು ಅವಿವೇಕದಲ್ಲಿ ನಡಿಸುತ್ತಲಿದ್ದೇವೆ. ಪಾತ್ರೆಯು ಹುಡುಗನ ಕೈಗೆ ಸಿಕ್ಕದಂತೆ ಎತ್ತರದಲ್ಲಿ ಇಡಬೇಕಿತ್ತು. ಹುಡುಗನನ್ನು ದಂಡಿಸುವುದರಿಂದ ಒಡೆದು ಹೋದ ಪಾತ್ರೆಯು ಇಡಿಯಾಗುವಂತಿಲ್ಲ.''

ರತ್ನಳು ಹಿಂದಿರುಗಿ ಹೋದಳು; ಶಾಸ್ತ್ರಿಗಳು ಮಗುವನ್ನು ಮುದ್ದಾಡಿ, "ರಂಗೂ, ಈ ತರದ ತುಂಟತನಕ್ಕೆ ಹೋಗಬಾರದಪ್ಪ, ನೀನು ಒಳ್ಳೆಯವನಾಗಿರಬೇಕು''

"ಅಜ್ಜಾ! ಒಳ್ಳೆಯವ್ನಾಗಿರ್ಬೇಕಾದ್ರೆ ಎನ್ಮಾಡ್ಬೇಕು?"

"ಕೆಟ್ಟ ಕೆಲಸ ಮಾಡಬಾರದು; ಯಾವಾಗಲೂ ಒಳ್ಳೆಯ ಮಾತುಗಳನ್ನೇ ಆಡಬೇಕು. ಹಾಗಾದರೆ ದೇವರು ಮೆಚ್ಚುತ್ತಾನೆ''

"ದೇವರು ಮೆಚ್ಚುತ್ತಾನೆ" ಎಂಬ ನುಡಿಯು ಬಾಲಕನಿಗೆ ತಿಳಿಯಲಿಲ್ಲ. ಸಾಧಾರಣವಾಗಿ ಹುಡುಗ ಬುದ್ಧಿಗೆ ದೇವರು ಎಂಬುವೇನೆಂದೂ, ಮನುಷ್ಯನಿಗೂ ದೇವರಿಗೂ ಇರುವ ಸಂಬಂಧವೂ ತಿಳಿಯದು. ಆದುದರಿಂದ ಅವನು ಶಾಸ್ತ್ರಿಗಳನ್ನು ಪ್ರಶ್ನಿಸಿಯೇಬಿಟ್ಟನು "ದೇವ್ರು ಯಾರು"

"ನಮ್ಮೆಲ್ಲರಿಗಿಂತಲೂ ದೊಡ್ಡವನು."

"ನನ್ನ ಅಪ್ಪನಿಗಿಂತಲೂ!"

ಮಗುವಿನ ಈ ಪ್ರಶ್ನೆಗೆ ಶಾಸ್ತ್ರಿಗಳು ಏನೆಂದು ಉತ್ತರ ಹೇಳಬಲ್ಲರು! ಪ್ರಾಯಕ್ಕೆ ತಲುಪಿದವರಿಗೇ ದೇವರನ್ನು ಕುರಿತು ಚಿಂತಿಸುವುದು ಅಶಕ್ಯವಾಗಿರುವಾಗ ಈ ಮಗುವು ದೇವರನ್ನು ಕುರಿತು ಏನದನ್ನು ತಿಳಿಯಬಲ್ಲುದು?

ರಂಗನಾಥನು ಬೆಳೆದು ದೊಡ್ಡವನಾಗುತ್ತ ಬಂದನು; ಅವನಿಗೆ ಐದು ವರ್ಷ ಪ್ರಾಯವಾಗಲು, ಶಾಸ್ತ್ರಿಗಳು ತಮ್ಮ ಮೊಮ್ಮಗನಿಗೆ ಅಕ್ಷರಾಭ್ಯಾಸವನ್ನು ಮಾಡಿಸಿದರು. ಅಕ್ಕರೆಯಿಂದ ಅವರು ಮರಳಿನಲ್ಲಿ ಅವನಿಗೆ ಕಲಿಯುವುದಕ್ಕಾಗಿ ವರ್ಣಮಾಲೆಯನ್ನು ಹಾಕಿಕೊಟ್ಟರು. ಹುಡುಗನು ಅಕ್ಷರಗಳನ್ನು ಕಲಿಯಲಾರಂಭಿಸಿದನು. ಅವನ ಬುದ್ಧಿಯು ಚುರುಕಾದುದರಿಂದ ವರ್ಣಮಾಲೆಯನ್ನು ಸುಲಭವಲ್ಲಿ ಕಲಿತನು. ಅದರೊಡನೆಯೇ ಪ್ರಥಮ ಬೋಧೆಯ ಅಭ್ಯಾಸವೂ ಪ್ರಾರಂಭವಾಯಿತು.

ರಂಗನೆಂದರೆ ಶಾಸ್ತ್ರಿಗಳಿಗೆ ಬಹು ಅಕ್ಕರೆಯು; ಯಾವಾಗಲೂ ತಾವೇ ಬಾಲಕನಿಗೆ ಸ್ನಾನವನ್ನು ಮಾಡಿಸುತ್ತಿದ್ದರು. ಅವರು ಅವನನ್ನು ಭೋಜನ ಸಮಯದಲ್ಲಿ ತಮ್ಮ ಪಕ್ಕದಲ್ಲಿಯೇ ಕುಳ್ಳಿರಿಸಿಕೊಳ್ಳುತ್ತಿದ್ದರು. ಸಾಯಂಕಾಲ ಕೆಲವು ಕತೆಗಳನ್ನು ಹೇಳಿ ಹುಡುಗನನ್ನು ಸಂತೋಷಪಡಿಸುತ್ತಿದ್ದರು. ಕತೆ ಕೇಳುವದೆಂದರೆ, ರಂಗನಿಗೆ ಬಹು ಇಷ್ಟವು; ಪ್ರತಿದಿನವೂ ಅವನು ಅಜ್ಜನನ್ನು ತನಗೆ ಒಂದು ಕತೆಯನ್ನು ಹೇಳಿಕೊಡಬೇಕೆಂಬುದಾಗಿ ಪೀಡಿಸುತ್ತಲಿದ್ದನು. ಶಾಸ್ತ್ರಿಗಳು ಪುರಾಣೇತಿಹಾಸಗಳಲ್ಲಿರುವ ಕತೆಗಳನ್ನು ಹೇಳಿಕೊಡುತ್ತಿದ್ದರು ಧ್ರುವಕುಮಾರ, ಪ್ರಹ್ಲಾದ, ಅಭಿಮನ್ಯು ಇತ್ಯಾದಿ ಪೌರಾಣಿಕ ವ್ಯಕ್ತಿಗಳು ಬಾಲ್ಯದಲ್ಲಿ ರಂಗನ ನಾಯಕರಾಗಿದ್ದರು.

ಈ ಕತೆಗಳ ಪೂರ್ಣರಹಸ್ಯಗಳನ್ನು ತಿಳಿದುಕೊಳ್ಳುವುದು ಅವನ ಹುಡುಗ ಬುದ್ಧಿಗೆ ಅಶಕ್ಯವಾಗಿದ್ದರೂ ಆ ಕತೆಗಳು ಅವನ ಮನಸ್ಸನ್ನು ಸೂರೆಗೊಂಡವು. ಅನಂತರ ಅವನ ಜೀವನದ ರೂಪ ನಿರ್ಮಾಣದಲ್ಲಿ ಈ ಕತೆಗಳು ಪ್ರಧಾನವಾದ ಒಂದು ಭಾಗ ವನ್ನು ವಹಿಸಿದುವು ಎಂದು ಹೇಳಬಹುದು. ಸಂಕುಚಿತ ಚಿತ್ತವೃತ್ತಿಯು ರಂಗನಿಂದ ದೂರವಾಗಲಿರುವ ಕಾರಣಗಳು ಅವನ ಅಜ್ಜನು ಬಾಲ್ಯದಲ್ಲಿ ಹೇಳಿಕೊಡುತ್ತಲಿದ್ದ ಕತೆಗಳೂ, ಉಪದೇಶಗಳೂ ಆಗಿದ್ದುವು ಎಂದರೆ ತಪ್ಪಾಗಲಾರದು.

ಆನಂದ ಮತ್ತು ಉನ್ಮೇಷಗಳಿಂದ ನಲಿದಾಡುತ್ತಲಿರುವ ಆ ಪುಟ್ಟ ಕುಟುಂಬದ ಬಾಳನ್ನು ವೀಕ್ಷಿಸಿ ವಿಧಿಯು ಅಸೂಯಾಕುಲವಾಯಿತು. ವಿಧಿಯ ಒಂದು ಭಯಂಕರ ಪ್ರಹಾರವು ಪಿಡುಗುಬೇನೆಯ ರೂಪದಲ್ಲಿ ಹೊಸೂರ ಗ್ರಾಮವನ್ನು ಸಂದರ್ಶಿಸಿತು. ಪಿಡುಗುಬೇನೆಯು ಅತ್ಯಂತ ಭಯಂಕರವಾದ ಕಾಹಿಲೆಗಳಲ್ಲಿ ಒಂದಾಗಿದೆ ಎಂದರೆ ತಪ್ಪಾಗಲಾರದು. ವೈದ್ಯಶಾಸ್ತ್ರವು ಅತ್ಯಂತ ಸುಧಾರಣೆಯನ್ನು ಹೊಂದಿದ ಈ ಕಾಲದಲ್ಲಿಯೇ ರೋಗಿಯು ಪಿಡುಗು ಬೇನೆಯಿಂದ ವಿಮುಕ್ತನಾಗುವದು ಅತ್ಯಂತ ಪ್ರಯಾಸವಾಗಿರುವಾಗ, ಅರ್ಧ ಶತಮಾನ ಹಿಂದಿನ ಕಾಲದ ಪರಿಸ್ಥಿತಿಯು ಏನೆಂಬುದನ್ನು ವಾಚಕರೇ ಊಹಿಸಿಕೊಳ್ಳುವುದು ಮೇಲು. ಆ ಕಾಲದಲ್ಲಿ ಪಿಡುಗು ಬೇನೆಯು ಒಂದು ಊರನ್ನು ಸಂದರ್ಶಿಸಿತೆಂದರೆ, ಅದು ಮೃತ್ಯುವಿನ ತಾಂಡವಭೂಮಿಯಾಗಿ ಪರಿಣಮಿಸುತ್ತಿತ್ತು. ವೈದ್ಯ ಶುಶ್ರೂಷೆಯಿಲ್ಲ; ಅದೊಂದು ಅಂಟು ಜಾಡ್ಯವೆಂದು ಹೆದರಿ ಜನರು ರೋಗಿಯನ್ನು ಸ್ಪರ್ಶಿಸುತ್ತಿರಲಿಲ್ಲ. ಸರ್ಕಸ್ಸಿನಲ್ಲಿರುವ ಹುಲಿ, ಸಿಂಹ ಮೊದಲಾದ ಭಯಂಕರ ಪ್ರಾಣಿಗಳಿಗೆ ಅಲ್ಲಿನ ಪಹರೆಯವನು ದೂರ ನಿಂತು ಆಹಾರವನ್ನು ಕೊಡುತ್ತಿರುವಂತೆ, ರೋಗಿಯ ಬಂಧು ಬಾಂಧವರು ಅವನ ಸಮೀಪಕ್ಕೆ ತೆರಳದೆ, ದೂರದಲ್ಲಿ ಒಂದು ಪಾತ್ರೆಯಲ್ಲಿ ಅನ್ನ-ನೀರುಗಳನ್ನಿಟ್ಟು ಓಡುತ್ತಿದ್ದರು.

ಆನಂದಕಳೆಯಿಂದ ತುಂಬಿ ತುಳುಕುತ್ತಲಿದ್ದ ಹೊಸೂರು ಗ್ರಾಮದಲ್ಲಿ ಹರ್ಷದ ಮಾತು ಹೊರಕ್ಕೆ ಬರುವಂತಿಲ್ಲ. ಎಲ್ಲರ ಮೊಗಗಳೂ ಜೀವಕಳೆಯಿಲ್ಲದೆ ಕಾಂತಿಶೂನ್ಯವಾಗಿದ್ದುವು ಎಲ್ಲರ ಹೃದಯಗಳಲ್ಲಿಯೂ ಭೀತಿಯ ಕತ್ತಲೆ! ಮೃತ್ಯುದೇವತೆಯ ಕೋಲಾಹಲ ಗರ್ಜನೆಯು ಸರ್ವತ್ರ ವ್ಯಾಪಿಸಿದೆ! ತನ್ನ ಹಸಿವನ್ನು ಅಡಗಿಸಿಕೊಳ್ಳಲು ಪಿಡುಗೇ ಬೇನೆಯ ರೂಪವನ್ನು ಧರಿಸಿಕೊಂಡು ಸಂಹಾರರುದ್ರನೇ ಹೊಸೂರು ಅಗ್ರಹಾರವನ್ನು ಸಂದರ್ಶಿಸಿದನೇ ಎಂಬ ಸಂದೇಹವು ಹೊಸೂರಿಗೆ ತೆರಳಿದ ಪ್ರೇಕ್ಷಕನಿಗ ತೋರಿ ಹೋಗುತ್ತಿತ್ತು. ಎಲ್ಲಿ ಹಸುಗೂಸುಗಳ ಮಧುರಾಲಾಪಗಳು ಪ್ರತಿಧ್ವನಿಸುತ್ತಲಿದ್ದುವೋ, ಆ ಪ್ರದೇಶದಲ್ಲಿ ಕಪ್ಪು ಬಣ್ಣದ ಮುಸುಕನ್ನು ಹಾಕಿಕೊಂಡು ಮೃತ್ಯುದೇವತೆಯು ವಾಸಮಾಡುತ್ತಲಿದ್ದಳು. ಯಾವ ಬೀದಿಗಳಲ್ಲಿ ಊರಿನ ವನಿತೆಯರು ಸರಸ ಸಲ್ಲಾಪಗಳನ್ನು ಮಾಡುತ್ತಾ, ಊರಿನ ಕೆರೆಯಿಂದ ತಮ್ಮ ಕೊಡಗಳಲ್ಲಿ ನೀರನ್ನು ತುಂಬಿಕೊಂಡು ಬರುತ್ತಿದ್ದರೋ, ಆ ಬೀದಿಗಳಲ್ಲಿ

ಜನರು ರುದ್ರಭೂಮಿಗೆ ಹೆಣಗಳನ್ನು ಹೊತ್ತುಕೊಂಡು ಹೋಗುತ್ತಿರುವ ಚಿತ್ರಗಳು ಕಂಗೊಳಿಸುತ್ತಿದ್ದುವು.

ಪಿಡುಗು ಬೇನೆಯು ಶಾಸ್ತ್ರಿಗಳ ಕುಟುಂಬವನ್ನು ಬಾಧಿಸವೆ ಇರಲಿಲ್ಲ; ಒಂದು ದಿನ ಹೊಲಕ್ಕೆ ತೆರಳಿದ ಶ್ರೀನಿವಾಸನು ಮಧ್ಯಾಹ್ನವೇಳೆಯಲ್ಲಿ ಜ್ವರಪೀಡಿತನಾಗಿ ನಡುಗುತ್ತಾ ಮನೆಗೆ ಹಿಂದಿರುಗಿ ಬಂದನು. ಅವನ ಕಣ್ಣುಗಳು ಕೆಂಪಾಗಿ ಹೋಗಿದ್ದುವು. ಶರೀರದ ಸಂದುಗಳು ನೋವಿನಿಂದ ಕೂಡಿದ್ದುವು. ಅವನು ಬಂದು ತನ್ನ ಮಂಚದ ಮೇಲೆ ಬಿದ್ದುಬಿಟ್ಟನು. ಆನಂತರ ಅವನ ಶರೀರವಲ್ಲಿ ಯಾವ ಪ್ರಜ್ಞೆಯೂ ಉಳಿಯಲಿಲ್ಲ. ಅವನು ಬೋಧಹೀನನಾದನು.

ಮಗನಿಗೆ ಬೇನೆಯು ಬಂದುದನ್ನು ತಿಳಿದೊಡನೆಯೇ ಶಾಸ್ತ್ರಿಗಳಿಗೆ ಬಹಳ ಗಾಬರಿಯಾಯಿತು; ಅವರು ಮಗನ ಕೋಣೆಗೆ ಓಡಿ ಬಂದು, ಅವನ ಹಣೆಯನ್ನು ಸ್ಪರ್ಶಿಸಿದರು. ಶ್ರೀನಿವಾಸನ ಲಲಾಟವು ಬೆಂಕಿಯಂತೆ ಸುಡುತ್ತಿತ್ತು. ನಾಶಿಕರಂಧ್ರದಿಂದ ಬಿಸಿಯುಸಿರು ಹೊರಸೂಸುತ್ತಲಿದ್ದಿತು. ಅವನ ಶರೀರದ ಗಂಟುಗಳು ಬಾತುಕೊಳ್ಳಲಾರಂಭಿಸಿದುವು. ಭಯಂಕರವಾದ ಪಿಡುಗು ಬೇನೆಯ ಲಕ್ಷಣಗಳು ಆ ಶರೀರವಲ್ಲಿ ಗೋಚರವಾಗಲಾರಂಭಿಸಿದುವು. ನಿರಾಶೆ ಮತ್ತು ಶೋಕಗಳಿಂದ ಕಂಬನಿಗಳನ್ನು ಹರಿಸಿದರು.

ಒಂದು ಮಾತಿನಲ್ಲಿ ಹೇಳುವುದಾದರೆ ಹರ್ಷದ ಕೇಳೀ ಭೂಮಿಯಾಗಿದ್ದ ಆ ಮನೆಯು ಶೋಕದ ರಂಗಭೂಮಿಯಾಗಿ ಪರಿವರ್ತನೆಯನ್ನು ಹೊಂದಿತು. ಮನುಷ್ಯನು ಸುಖಭೋಗಗಳನ್ನು ಆಶಿಸಿ ನಿರಂತರ ಪ್ರಯತ್ನಿಸುತ್ತಾನೆ; ಆದರೆ ಮಾನುಷ ಶಕ್ತಿಗೆ ಅತೀತವಾದ ಒಂದು ಚೈತನ್ಯವು ಆಗಾಗ ಒಂದೊಂದು ಶೋಕದ ಹೊರೆಯನ್ನು ಅವನ ಶಿರಸ್ಸಿನ ಮೇಲೆ ಎಸೆದು, ಅವನ ಪ್ರಯತ್ನಗಳೂ ಬಯಕೆಗಳೂ ನೀರಿನ ಮೇಲಿರುವ ಗುಳ್ಳೆಯೆಂಬುದನ್ನು ಕಾಣಿಸಿಕೊಡುತ್ತವೆ. ಹೌದು, ಮನುಷ್ಯನ ಪ್ರಯತ್ನವು 'ವಿಧಿಯ ಲೀಲಾಸಾಗರದಿ

ಒಂದು ಗುಳ್ಳೆಯು ನಲಿದು ಒಡೆದು ಹೋಗುತಿದೆ ಅರಕ್ಷಣದಿ'

ಎಂಬಂತಾಗುತ್ತದೆ.

ಒಂದುದಿನ ಮಧ್ಯರಾತ್ರಿಯ ಸಮಯ; ಶ್ರೀನಿವಾಸನು ತನ್ನ ಹಾಸಿಗೆಯ ಮೇಲೆ ಮಲಗಿ ತನ್ನ ಜೀವನದ ಅಂತಿಮ ವೇಳೆಯನ್ನು ನಿರೀಕ್ಷಿಸುತ್ತಲಿದ್ದಾನೆ. ಅವನ ತಾಯಿ, ತಂದೆ, ಮಡದಿ ಎಂಬೀ ಬಂಧುಗಳು ಅವನ ಕಾಹಿಲೆಯನ್ನು ನೆನೆದು ಕಂಬನಿ ಪ್ರವಾಹದನ್ನು ಹರಿಸುತ್ತಾ ಅವನ ಸುತ್ತಲೂ ಕುಳಿತಿದ್ದಾರೆ ಬಾಲಕ ರಂಗನು ಕುಟುಂಬಕ್ಕೆ ಸಂಪ್ರಾಪ್ತವಾದ ದುಃಖವನ್ನು ತಿಳಿಯದೆ, ತಾಯಿಯ ತೊಡೆಯ ಮೇಲೆ ನಿದ್ರಿಸುತ್ತಿದ್ದಾನೆ. ಆ ಕುಟುಂಬವನ್ನು ಬಾಧಿಸಿದ ಶೋಕದ ಶೃಂಖಲೆಗೆ ನಿಷ್ಕಲಂಕವಾದ ಬಾಲಕನ ಹೃದಯವನ್ನು ಬಂಧಿಸಲು ಚೈತನ್ಯವೆಲ್ಲಿಯದು? ರೋಗಿಯು ಆಗಾಗ ತನ್ನ ಕಣ್ಣುಗಳನ್ನು ತೆರೆದು, ತನ್ನ ಬಂಧು ಬಾಂಧವರನ್ನು ನೋಡುತ್ತಿದ್ದನು;

ಆದರೆ ಅವರು ಯಾರೆಂಬುದನ್ನು ತಿಳಿಯಲು ಅವನಿಗೆ ಸಾಧ್ಯವಾಗಲಿಲ್ಲ. ತಾನು ಎಲ್ಲಿರುವೆನೆಂಬುದೂ ಹೊಳೆಯಲಿಲ್ಲ. ತನ್ನ ಜೀವನವು ಒಂದು ಹಳೆಯ ಕನಸಾಗಿ ಅವನಿಗೆ ತೋರಿತು. ಅವನ ಜೀವವು ಮೃತ್ಯುವಿನೊಡನೆ ಕಾದಾಡುತ್ತಲಿದ್ದಿತೆಂಬುದನ್ನು ಅವನ ಮೋರೆಯು ನುಡಿಯುತ್ತಿದ್ದಿತು ಅವನ ಆತ್ಮವು ತನ್ನ ವಾಸಕ್ಕೆ ಅಯೋಗ್ಯವಾದ ಆ ನರದೇಹವನ್ನು ಪರಿತ್ಯಜಿಸಿ, ಅನಂತಕ್ಕೆ ತೆರಳಲು ಪ್ರಯತ್ನಿಸುತ್ತಲಿದ್ದಿತು. ಈ ಜೀವನದ ವಾಸನೆಯು ಆ ಪ್ರಾಣಪಕ್ಷಿಯನ್ನು ಈ ದೇಹದಲ್ಲಿ ಬಂಧಿಸಲು ಯತ್ನಿಸುತ್ತಿದ್ದಿತು.

ಹೌದು. ಸಾವು ಎಂದರೆ ಒಂದು ಕಾದಾಟವು; ಆತ್ಮವು ಬಿಡುಗಡೆಯನ್ನು ಹೊಂದಲು, ಜೀವನದ ಕ್ಲೇಶ-ಪಾಶಗಳಿಂದ ವಿಮುಕ್ತವಾಗಲು ಪ್ರಯತ್ನಿಸುತ್ತಲಿರುವುದು; ಆದರೆ ಲೌಕಿಕ ಆಗ್ರಹಗಳು, ಕುಟುಂಬ ಬಂಧವು ಸರ್ವಸ್ವತಂತ್ರವಾಗಲು ಬಯಸುತ್ತಿರುವ ಅನಶ್ವರವಾದ ಆ ಚೈತನ್ಯವನ್ನು ಬಂಧಿಸಲು ಪ್ರಯತ್ನಿಸುತ್ತಲಿರುವವು. ಈ ಎರಡು ಶಕ್ತಿಗಳ ಕಾದಾಟವನ್ನು ನಾವು ಮರಣದಲ್ಲಿ ಮೂರ್ತಿಮತ್ತಾಗಿ ನೋಡಬಹುದು.

ಸಾವು ಎಂದರೆ ಸಾಧಾರಣವಾಗಿ ಮನುಷ್ಯ ಹೃದಯದಲ್ಲಿ ಭಯವನ್ನು ಹುಟ್ಟುವಂತೆ ಮಾಡುತ್ತದೆ. ತನ್ನ ಅಂತ್ಯವು ಸಾವಿನಿಂದ ಬಂದೊದಗುತ್ತದೆ, ಎಂದು ಮಾನವನು ಭಾವಿಸುತ್ತಾನೆ; ಆದರೆ ಸಾವು ಭಯಂಕರವಲ್ಲ, ಕ್ಲೇಶದಾಯಕವಲ್ಲ. ಅತೀತಕ್ಕೆ ತನ್ನ ಪ್ರವಾಸವನ್ನು ಮಾಡುತ್ತಿರುವ ಆತ್ಮನ ಚರಿತ್ರೆಯಲ್ಲಿ ಹೊಸದೊಂದು ಅಧ್ಯಾಯದ ಪ್ರಾರಂಭವಾಗಿದೆ ಸಾವು!

ಇರಲಿ. ಶ್ರೀನಿವಾಸನ ನಾಡಿಗಳ ಗತಿಯು ಮಂದವಾಯಿತು; ಹೃದಯ ಸ್ಪಂದನವು ಮೆಲ್ಲಗಾಗತೊಡಗಿತು; ಕೈಕಾಲುಗಳು ಶೀತಲವಾಗುತ್ತ ಬಂದುವು. ನಾಸಿಕದಿಂದ ಹೊರಸೂಸುತ್ತಿರುವ ಶ್ವಾಸ, ಕಣ್ಣುಗಳಲ್ಲಿ ಬೆಳಗುತ್ತಿರುವ ಕಾಂತಿ ಇವುಗಳು ಆ ದೇಹದಲ್ಲಿ ಇನ್ನೂ ಪ್ರಾಣವಿದೆಯೆಂಬುದನ್ನು ಸೂಚಿಸುತ್ತಲಿದ್ದುವು. ಕುಟುಂಬದವರೆಲ್ಲರೂ ಒಂದು ಪಾತ್ರೆಯಲ್ಲಿ ತುಲಸೀಜಲವನ್ನು ಇಟ್ಟುಕೊಂಡು ರೋಗಿಯ ದೇಹವಿಯೋಗವನ್ನು ನಿರೀಕ್ಷಿಸುತ್ತ ಬಾಷ್ಪಪೂರ್ಣರಾಗಿ ಕುಳಿತಿದ್ದರು. ರೋಗಿಯ ಜೀವವು ತನ್ನ ಆಲಯವನ್ನು ತ್ಯಜಿಸುತ್ತಿರುವದನ್ನು ನೋಡಿ ಶಾಸ್ತ್ರಿಗಳು ಮೌನವಾಗಿ ತುಲಸೀಜಲವನ್ನು ಶ್ರೀನಿವಾಸನ ಬಾಯಲ್ಲಿ ಎರೆದರು. ಆ ನೀರನ್ನು ಕುಡಿದೊಡನೆಯೇ ಮೃತ್ಯುವಿನ ಕ್ರೌರ್ಯವು ಶಾಂತವಾಯಿತು. ಆತ್ಮವು ತನ್ನ ಮನೆಯನ್ನು ತ್ಯಜಿಸಿ ಹೊಸದೊಂದು ಆಲಯವನ್ನು ಹುಡುಕುವದಕ್ಕಾಗಿ ತೆರಳಿತು!

ಶ್ರೀನಿವಾಸನನ್ನು ಬಲಿಯಾಗಿ ತೆಗೆದುಕೊಂಡ ಮೃತ್ಯುದೇವತೆಯು ತೃಪ್ತಳಾಗಲಿಲ್ಲ. ಶಾಸ್ತ್ರಿಗಳ ಕುಟುಂಬವು ಆ ಭೈರವನ ಕ್ಷುಧ್ಬಾಧೆಯನ್ನು ಅಡಗಿಸಲು ಇನ್ನೆರಡು ಬಲಿಗಳನ್ನು ಸಹ ನೀಡಬೇಕಾಗಿ ಬಂದಿತು. ಶಾಸ್ತ್ರಿಗಳು ಮಗನ ಅಂತ್ಯವಿಧಿಗಳನ್ನೆಲ್ಲ ತೀರಿಸುವದರೊಳಗಾಗಿ ಪತಿವಿಯೋಗ ಶೋಕಗ್ರಸ್ತೆಯಾದ ರತ್ನಳು ಶ್ರೀನಿ

ವಾಸನ ಹನ್ನೆರಡನೆಯ ದಿವಸ ಕಳೆಯಲು ರೋಗದಿಂದ ಹಾಸಿಗೆಯನ್ನು ಹಿಡಿದಳು. ಅಂಟುಜಾಡ್ಯವಾದ ಪಿಡುಗು ಬೇನೆಯ ಕೃಪಾಕಟಾಕ್ಷವೀಕ್ಷಣಕ್ಕೆ ಅವಳು ಪಾತ್ರೀಭವಿಸಿದಳು. ಮೂರು ದಿನಗಳ ವರೆಗೆ ಬೇನೆಯಿಂದ ನರಳುತ್ತಿದ್ದು, ಅನಂತರ ತನ್ನ ಕಂದನನ್ನು ತನ್ನ ಮಾವನ ಕರಗಳಿಗೆ ಒಪ್ಪಿಸಿ, ತನ್ನ ಪತಿದೇವನ ದರ್ಶನಾಕಾಂಕ್ಷೆಯಿಂದ ತನ್ನ ಜೀವನಯಾತ್ರೆಯನ್ನು ಅಂತ್ಯಗೊಳಿಸಿ, ಅವಳು ಪರಲೋಕಕ್ಕೆ ನಿರ್ಗಮಿಸಿದಳು. ಶಾಸ್ತ್ರಿಗಳ ವೃದ್ಧಳಾದ ಮಡದಿಯೂ ಸಹ ಪಿಡುಗು ಬೇನೆಗೆ ಬಲಿಯಾಗಿ ಅಂತ್ಯದಲ್ಲಿ ತನ್ನ ಸೊಸೆಯನ್ನು ಹಿಂಬಾಲಿಸಿದಳು!

ಶಾಸ್ತ್ರಿಗಳಿಗೆ ಸಂಸಾರವೇ ಶೂನ್ಯವಾಯಿತು; ಈಗ ಅವರಿಗಿರುವ ಏಕಮಾತ್ರ ಬಂಧುವೆಂದರೆ ರಂಗನು ಮಾತ್ರ. ಆ ಬಾಲಕನ ಭಾರವನ್ನು ಅವನ ತಾಯ್ತಂದೆಗಳು ಈಗ ಮುದುಕನಿಗೆ ಒಪ್ಪಿಸಿದ್ದರು. ಶಾಸ್ತ್ರಿಗಳಿಗೆ ಬದುಕುವ ಬಯಕೆಯಿರಲಿಲ್ಲ. ಭೂಮಿಯು ನರಕತುಲ್ಯವಾಗಿ ಪರಿಣಮಿಸಿತು. ಪತ್ನಿ ಪುತ್ರರ ವಿಯೋಗದಿಂದ ಅವರ ಹೃದಯವು ಶೋಕ ನಿಬಿಡವಾಯಿತು. ಅವರು ಜೀವಿಸುತ್ತಿದ್ದುದು ರಂಗನಿಗೆ ಬೇಕಾಗಿ ಮಾತ್ರ.

ಯಾವ ಗೃಹದಲ್ಲಿ ತಮ್ಮ ದಿನಗಳನ್ನು ಸುಖವಾಗಿ ಕಳೆದಿದ್ದರೋ ಯಾವ ಮನೆಯಲ್ಲಿ ತಮ್ಮ ಮಡದಿ ಮಕ್ಕಳು, ಸೊಸೆ ಇವರೊಡನೆ ಆನಂದಿಸಿದ್ದರೋ, ಆ ನಿಲಯವಿಂದು ಶಾಸ್ತ್ರಿಗಳಿಗೆ ಮಸಣತುಲ್ಯವಾಗಿದೆ! ಪ್ರತಿನಿಮಿಷ ತಮ್ಮ ಮಡದಿ ಮಕ್ಕಳ ವಿಚಾರವು ಬಂದು ಅವರಿಗೆ ಅಪಾರವಾದ ಶೋಕವನ್ನು ನೀಡುತ್ತಿರುವುದು. ಆ ಹಳ್ಳಿಯಲ್ಲಿ ಜೀವಿಸುವುದು ಅವರಿಗೆ ಅಸದಳವಾಗಿ ಪರಿಣಮಿಸಿತು.

ಅವರು ಹೊಸೂರಿನಲ್ಲಿರುವ ತಮ್ಮ ಜಮೀನನ್ನು ವಿಕ್ರಯಿಸಿದರು. ಬಂದ ಹಣವನ್ನು ತೆಗೆದುಕೊಂಡು, ಅವರು ತಮ್ಮ ಮೊಮ್ಮಗನನ್ನು ಕರೆದುಕೊಂಡು ನಗರಕ್ಕೆ ಹೊರಟರು.

---

## ೪ ಗತಿಹೀನರಿಗೆ ಶ್ರೀಪತಿಯೇ ಗತಿಯು!

ಹಿಂದಿನ ಪರಿಚ್ಛೇದದಲ್ಲಿ ಹೇಳಿದಂತೆ ತಮಗೆ ಸಂಪ್ರಾಪ್ತವಾದ ದುರ್ವಿಧಿಯ ನಿಮಿತ್ತದಿಂದ ಹೊಸೂರಿನ ಶ್ಯಾಮಾಶಾಸ್ತ್ರಿಗಳು ಇಮ್ಮ ಮೊಮ್ಮಗನೊಡನೆ ನಗರವನ್ನು ಸೇರಿದರು. ಪಟ್ಟಣದಲ್ಲಿ ಹೇಗೆ ಜೀವಿಸಬೇಕೆಂಬ ವಿಚಾರವು ಶಾಸ್ತ್ರಿಗಳಿಗಿರಲಿಲ್ಲ; ಆದರೆ ನಗರವಾಸದಿಂದ ತಮ್ಮ ಶೋಕದ ಭಾರವು ಕಡಿಮೆಯಾಗುವುದೆಂದು ಅವರು ಬಗೆದಿದ್ದರು.

ತಮ್ಮ ವಾಸಕ್ಕಾಗಿ ತಿಂಗಳಿಗೆ ಮೂರು ರೂಪಾಯಿಗಳ ಬಾಡಿಗೆಯನ್ನು ಕೊಟ್ಟು ಒಂದು ಮನೆಯನ್ನು ಮಾಡಿದರು. ಮೂರು ಕೊಟಡಿಗಳಿರುವ ಒಂದು ಚಿಕ್ಕ ಮನೆಗೆ ಪ್ರತಿತಿಂಗಳೂ ಮೂರು ರೂಪಾಯಿಗಳಷ್ಟು ಹಣವನ್ನು ಬಾಡಿಗೆಯಾಗಿ ಕೊಡಬೇಕಾಗಿ ಬಂದುದನ್ನು ನೋಡಿ, ಶಾಸ್ತ್ರಿಗಳು ಕೌತುಕಭರಿತರಾದರು; ಆದರೆ ನಗರ

ದಲ್ಲಿ ಅಷ್ಟು ಹಣವನ್ನು ಕೊಡದೆ ಮನೆಯು ದೊರೆಯುವಂತಿಲ್ಲ. ಹಣವಿಲ್ಲದೆ ಪಟ್ಟಣ ದಲ್ಲಿ ದಿನಗಳನ್ನು ಕಳೆಯಲು ಸಾಧ್ಯವಿಲ್ಲವೆಂಬುದನ್ನು ಶಾಸ್ತ್ರಿಗಳು ತಿಳಿದುಕೊಂಡರು; ಆದರೆ ಹಣವೆಲ್ಲಿಂದ? ಹೊಲವನ್ನು ಮಾರಿ ಬಂದ ಹಣದಿಂದ ಹೆಚ್ಚಾದರೆ ನಾಲ್ಕಾರು ಸಂವತ್ಸರಗಳನ್ನು ಕಳೆಯಬಹುದು. ಅನಂತರ ತಮ್ಮ ಗತಿಯೇನು? ಎಂಬಿತ್ಯಾದಿ ಚಿಂತೆಗಳು ಶಾಸ್ತ್ರಿಗಳನ್ನು ಹೆಚ್ಚಿಗೆ ಬಾಧಿಸಲಿಲ್ಲ. ಅದಕ್ಕೆ ಕಾರಣವು ಅವರ ಆಧ್ಯಾತ್ಮಿಕ ಚಿತ್ತವೃತ್ತಿಯಾಗಿದ್ದಿತು. ನಾಳೆಯದನ್ನು ಚಿಂತಿಸಿ ಇಂದೇ ತಮ್ಮ ಮೆದುಳನ್ನು ತೊಂದರೆಪಡಿಸಿಕೊಳ್ಳುವ ಮನುಷ್ಯರು ಅವರಾಗಿರಲಿಲ್ಲ. "ನಾವು ನಟರು; ಸೂತ್ರ ಧಾರಿಯು ನೀನು! ನಿನಗೆ ಸುಸೂಕ್ತವಾದ ದಾರಿಯಲ್ಲಿ ನಮ್ಮನ್ನು ನಡೆಸಿಕೋ!" ಎಂದು ಅವರು ತಮ್ಮ ಬದುಕನ್ನು ಕುರಿತು ಚಿಂತಿಸುವಾಗ, ವಿಶ್ವವ್ಯಾಪಿಯೊಡನೆ ನುಡಿಯುತ್ತಿದ್ದರು.

ಚಿಕ್ಕದಾದ ಮನೆಯು ಅದು; ನಾಲ್ಕೆಂಟು ಹೂಗಿಡಗಳನ್ನು ತಂದು ಶಾಸ್ತ್ರಿಗಳು ತಮ್ಮ ಮನೆಯ ಅಂಗಣದಲ್ಲಿ ನೆಟ್ಟರು. ಅವರು ಬಹು ಅಕ್ಕರೆಯಿಂದ ಆರೈಕೆ ಮಾಡುತ್ತಿದ್ದರು. ಪ್ರತಿದಿನವೂ ಬಂದು ಕೊಡದಲ್ಲಿ ನೀರನ್ನು ತಂದು ಆ ಗಿಡಗಳಿಗೆ ಎರೆಯುತ್ತಿದ್ದರು; ಬಿಸಿಲಿನಿಂದ ಗಿಡದ ಎಲೆಗಳು ಬಾಡಿದರೆ, "ಅಯ್ಯೋ! ಪಾಪ! ಆ ದಿನ ಕರನು ಎಷ್ಟು ದುಷ್ಟನು! ತನ್ನ ಬಿಸಿಲಿನಿಂದ ಕೋಮಲವಾದ ನಿನ್ನನ್ನು ನೋಯಿಸುತ್ತಿರುವನಲ್ಲಾ?" ಎಂದು ಅವರು ನುಡಿಯುತ್ತಿದ್ದರು. ಹೌದು, ಅವರು ಆ ಹೂಗಿಡಗಳನ್ನು ಪುತ್ರವ ತ್ಸಲ್ಯದಿಂದ ಪರಿಪೋಷಿಸುತ್ತಿದ್ದರು ಆ ಹೂಗಿಡಗಳ ಮೇಲೆ ಶಾಸ್ತ್ರಿಗಳಿಗೆ ಇರುವ ಮಮತೆಯನ್ನು ದರ್ಶಿಸಿ, ನೆರೆಯೊರೆಯವರು, "ಅಯ್ಯೋ! ನೋಡಿದಿರಾ, ಆ ಮುದುಕನ ಹುಚ್ಚನ್ನು! ಹೂ ಗಿಡಗಳನ್ನು ಮಕ್ಕಳೆಂದು ಭಾವಿಸುತ್ತಿರುವ ಅವನ ಬುದ್ಧಿಗೆ ಏನೆಂದು ನುಡಿಯಬೇಕು?" ಎಂದು ಆಗಾಗ ನುಡಿಯುತ್ತಿದ್ದರು.

ಆದರೆ ಶಾಸ್ತ್ರಿಗಳು ಹುಚ್ಚರಲ್ಲ; ಮೂಢರಲ್ಲ. ತಿಳುವಳಿಕೆ, ಜ್ಞಾನ ಇವುಗಳು ಅವರಲ್ಲಿ ತುಂಬಿ ತುಳುಕುತ್ತಲಿದ್ದುವು. ಜನರು ಶಾಸ್ತ್ರಿಗಳ ಹೃದಯ ವಿಶಾಲತೆಯನ್ನು ಅಳೆಯಲು ಶಕ್ತರಾಗಲಿಲ್ಲ. ಅವರ ಅಂತರಂಗವನ್ನು ತಿಳಿಯದ ಜನರು ಶಾಸ್ತ್ರಿಗಳನ್ನು ಹುಚ್ಚರೆಂದು ಕರೆದರು. "ಮುದುಕನಿಗೆ ಪ್ರೀತಿಯ ವಸ್ತುಗಳು ಒಂದು ಕೂಸು ಮತ್ತು ಹೂ ಗಿಡಗಳು ಮಾತ್ರವಾಗಿವೆ." ಎಂದು ಜನರು ಅವರನ್ನು ಉಪಹಾಸ ಗೈದರು; ಆದರೆ ಜನರು ಶಾಸ್ತ್ರಿಗಳ ಹೃದಯವು ಜಗತ್ತಿನ ಸ್ಥಾವರ ಜಂಗಮ ಜೀವಿಗಳನ್ನೆಲ್ಲಾ ಮಮತೆಯಿಂದ ನೋಡುವಷ್ಟು ವಿಶಾಲವಾದುದು ಎಂಬುದನ್ನು ತಿಳಿದುಕೊಂಡಿರಲಿಲ್ಲ.

ಶಾಸ್ತ್ರಿಗಳು ಸರಳ ಸ್ವಭಾವಿಗಳು; ತಮ್ಮ ಆಹಾರವನ್ನು ತಾವೇ ಪಾಕಮಾಡುವರು. ಯಾವ ಬೇಸರವೂ ಇಲ್ಲದೆ ಮನೆಯ ಕಶ್ಮಲಗಳನ್ನೆಲ್ಲ ದೂರಗೊಳಿಸಿ ಸ್ವಚ್ಛ ಮಾಡುವರು. ತಮ್ಮ ಹಾಗೂ ರಂಗನ ಮಲಿನ ವಸ್ತ್ರಗಳನ್ನು ಕ್ಷಾಲಿಸಿ ಶುದ್ಧ ಮಾಡುವರು. ಅವರು ಆ ಬಾಲಕನನ್ನು ತಾವೇ ಸ್ನಾನ ಮಾಡಿಸುತ್ತಲಿದ್ದರು. ಅಕ್ಕರೆ

ಯಿಂದ ಎತ್ತಿ ಅವರು ಆಗಾಗ ಅವನನ್ನು ಮುತ್ತಾಡುತ್ತಿದ್ದರು. ಬಾಲಕನ ನಗುವನ್ನು ನೋಡಿ, ಅವನ ಸಂತೋಷದಲ್ಲಿ ತಾವೂ ಭಾಗವನ್ನು ವಹಿಸುತ್ತಿದ್ದರು. ಅವರ ಲೋಕವು ಆ ಬಾಲಕನಾಗಿದ್ದನು. ಅವನನ್ನು ಸಂತೋಷಭರಿತನನ್ನಾಗಿ ಮಾಡಲು ಅವರು ಯತ್ನಿಸುತ್ತಿದ್ದ ಉದ್ಯಮಗಳು ಅಷ್ಟು ಇಷ್ಟೆಂದು ಹೇಳಲು ಸಾಧ್ಯವಿಲ್ಲ.

ಪ್ರಭಾತ ಕಾಲದಲ್ಲಿ ಅವರು ಜಾಗ್ರತರಾಗುತ್ತಿದ್ದರು; ಸೂರ್ಯೋದಯಕ್ಕೆ ಇನ್ನೊಂದು ಯಾಮವಿರುವಾಗಲೇ ಅವರು ಎಚ್ಚತ್ತು, ತಮ್ಮ ಪ್ರಾತಃಕಾಲದ ದೇಹಶುದ್ಧಿಯ ಕರ್ಮಗಳನ್ನು ನೆರವೇರಿಸಿಕೊಂಡು ಬರುವರು ಹಣತೆಯೊಂದನ್ನು ಹತ್ತಿಸಿ ಅವರು ಮಧುರ ಕಂಠದಲ್ಲಿ ಭಕ್ತಶಿರೋಮಣಿಯಾದ ಜಯದೇವ ಕವಿಯ ಅಷ್ಟಾಪದೀ ಗೀತೆಯನ್ನು ಮಧುರಕಂಠದಲ್ಲಿ ಹಾಡುತ್ತಿದ್ದರು. ಅವರ ಆ ಕಂಠನಾದವು ನಿದ್ರೆಯಲ್ಲಿರುವ ರಂಗನನ್ನು ಎಚ್ಚರಗೊಳಿಸುತ್ತಿದ್ದಿತು. ಬಾಲಕನು ತನ್ನ ಪುಟ್ಟ ಹಾಸಿಗಯಿಂದ ಎದ್ದು ಓಡಿಹೋಗಿ ಶಾಸ್ತ್ರಿಗಳ ತೊಡೆಯ ಮೇಲೆ ಆಸೀನನಾಗುತ್ತಿದ್ದನು. ಅವನು ಮೌನದಲ್ಲಿ ಶಾಸ್ತ್ರಿಗಳ ವದನಪಂಕಜದಿಂದ ಹೊರಬೀಳುತ್ತಿರುವ ಗೀತೆಯನ್ನು ಆಶ್ರಾವಿಸುವನು. "ಅಷ್ಟಪದಿ"ಯ ತಾತ್ಪರ್ಯವು ಬಾಲಕನಿಗೆ ಹೊಳೆಯದಿದ್ದರೂ, ಆ ಹಾಡು ಅವನ ಹೃದಯದ ಅಂತರಾಳವನ್ನು ಪ್ರವೇಶಿಸಿತು. ಶಾಸ್ತ್ರಿಗಳ ಮೋಹನ ಗಾನವು ಬಾಲಕನ ಮನಸ್ಸಿಗೆ ಹೊಸ ಆಶೆಯನ್ನು ನೀಡಿತು. ಅದೇನೆಂಬುದನ್ನು ರಂಗನು ತಿಳಿಯನು. ಗಾನವು ಅವನ ಆತ್ಮವನ್ನು ಶಾಂತತೆಯಿಂದ ಪರಿಪೂರ್ಣವಾದ ಇನ್ನೊಂದು ಲೋಕಕ್ಕೆ ಎಳೆದೊಯ್ದು ಅದೊಂದು ಬಗೆಯ ಆನಂದವನ್ನು ಅವನಿಗೆ ಪ್ರದಾನ ಮಾಡುತ್ತಿದ್ದಿತು. ಆ ಗಾನರಸದಲ್ಲಿ ತನ್ಮಯನಾದ ರಂಗನ ಆತ್ಮಪಕ್ಷಿಯು ಅವನಿಗೆ ತಿಳಿಯದಂತೆಯೇ ಅದು ಒಂದು ದಿವ್ಯ ಚೈತನ್ಯದ ದರ್ಶನಕ್ಕಾಗಿ ಎಲ್ಲಿಗೂ ಹಾರಾಡುತ್ತಿದ್ದಿತು. ಹೌದು, ಬಾಲಕನು ತನ್ನ ಅಜ್ಜನ ಗಾನವನ್ನು ಆಶ್ರಾವಿಸುತ್ತ, ಬೆಳಗಾಗುವ ವರೆಗೆ ಗಂಭೀರ ಮುಖಭಾವದಿಂದ ಮುದುಕನ ತೊಡೆಯ ಮೇಲೆ ಕುಳಿತಿರುತ್ತಿದ್ದನು.

ಒಂದುವೇಳೆ ವಾಚಕರು ಈ ಸಂಗತಿಯು ಅಶಕ್ಯವೆಂದೂ ಎಳೆಯ ವಯಸ್ಸಿನಲ್ಲಿ ಬಾಲಕನ ಆತ್ಮವು ಗಾನರಸದಲ್ಲಿ ತಲ್ಲೀನತೆಯನ್ನು ಹೊಂದುವುದು ಅಸ್ವಾಭಾವಿಕವೆಂದೂ ಶಂಕಿಸಬಹುದು; ಆದರೆ ನಾವು ಜೀವನವನ್ನು ಸೂಕ್ಷ್ಮದೃಷ್ಟಿಯಲ್ಲಿ ವೀಕ್ಷಿಸಿದರೆ, ಸಂಗೀತಕ್ಕೆ ಮನುಷ್ಯಾತ್ಮದ ಮೇಲೆ ಸ್ವಾಧೀನತೆಯು ಎಷ್ಟರ ಮಟ್ಟಿಗೆ ಇದೆಯೆಂಬುದು ವ್ಯಕ್ತವಾಗುವುದು. ಸಂಗೀತಕ್ಕೆ ಇತರ ಎಲ್ಲಾ ಕಲೆಗಳಿಗಿಂತಲೂ ಹೆಚ್ಚಾಗಿ ಮನುಷ್ಯನನ್ನು ವಶೀಕರಿಸಲು ಶಕ್ತಿಯಿದೆ. ಮೂಢನಾಗಲೀ, ಪಂಡಿತನಾಗಲೀ, ಮಗು-ವಾಗಲೀ, ಗಂಡುಸಾಗಲೀ, ಹೆಂಗುಸಾಗಲೀ, ಅವರು ಯಾರೆ ಆಗಿದ್ದರೂ ಇಂಪಾದ ಗಾನಪಾಶಕ್ಕೆ ಸಿಲುಕಿದಾಗ, ಅವರು ತಮ್ಮನ್ನು ತಾವೇ ಮರೆತು ಬಿಡುತ್ತಾರೆ. ನಮ್ಮ ಆತ್ಮಗಳನ್ನು ನಿದ್ರೆಯಿಂದ ಎಚ್ಚರಿಸಿ, ಸಂಗೀತವು ಯಾವುದೋ

ಒಂದು ಹೊಸ ಸಂದೇಶವನ್ನು ನೀಡುತ್ತಿದೆ. ತೊಟ್ಟಿಲಲ್ಲಿ ಅಳುತ್ತಿರುವ ಮಗುವು ತಾಯಿಯು ಹಾಡುತ್ತಿರುವ ಜೋಗುಳವನ್ನು ಆಶ್ರಾವಿಸುವಾಗ ತನ್ನ ಕ್ರಂದನವನ್ನು ನಿಲ್ಲಿಸುತ್ತದೆ. ಇದಕ್ಕೆ ಕಾರಣವೇನು? ತಾಯಿಯ ಹಾಡು ಆ ಶಿಶುವಿನ ಕೋಮಲ ಹೃದಯವನ್ನು ಸ್ಪರ್ಶಿಸಿ ಒಂದು ಬಗೆಯ ಶಾಂತಿಯನ್ನುಂಟುಮಾಡುತ್ತವೆ ಭಾರ ತುಂಬಿದ ಬಂಡಿಯನ್ನೆಳೆವ ಎತ್ತುಗಳೂ ಸಹ ಗೌಡನ ಹಾಡೀ ಪದವನ್ನು ಕೇಳುವ ಭರದಲ್ಲಿ ಭಾರವನ್ನೇ ಲಕ್ಷಿಸವು. ಇರಲಿ.

ಸಂಗೀತವು ಜೀವನದಲ್ಲಿ ಒಂದು ಪ್ರಧಾನ ಭಾಗವಾಗಿದೆ, ಅದರಲ್ಲಿ ಭಾರತೀಯ ಜೀವನದಲ್ಲಿ ಅದಕ್ಕಿರುವ ಸ್ಥಾನವು ಅತ್ಯುತ್ಕೃಷ್ಟವಾದುದಾಗಿದೆ. ನಾವು ಒಮ್ಮೆ ನಗರಗಳನ್ನು ಪರಿತ್ಯಜಿಸಿ, ನಮ್ಮ ಕರ್ನಾಟಕದ ಹಳ್ಳಿಗಳಿಗೆ ತೆರಳದರ, ಅಲ್ಲಿನ ಜನರ ಮಧ್ಯದಲ್ಲಿ ಈ ಕಲೆಯು ಯಾವ ರೀತಿ ಬೇರೂರಿದೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬಹುದು. ಹಳ್ಳಿಯ ಹೆಂಗಸರು ಉಷಃಕಾಲದಲ್ಲಿ ಹಾಡುತ್ತಿರುವ ಉದಯರಾಗ, ಕನಕದಾಸ, ಪುರಂದರದಾಸ ಇವರ ಕೀರ್ತನೆಗಳು, ಎಂಬಿವುಗಳಿಂದ ನಮ್ಮ ನಗರವಾಸಿಗಳಿಂದ ಅಶಿಕ್ಷಿತೆಯರೆಂದೆನಿಸಿಕೊಳ್ಳುವ ಗ್ರಾಮೀಣ ಕನ್ಯೆಯರ ಮಧ್ಯದಲ್ಲಿ ಸಂಗೀತ ಕಲೆಯು ಬೇರೂರಿ ಎಷ್ಟು ಆಳವಾಗಿ ನಿಂತಿದೆ ಎಂಬುದು ವ್ಯಕ್ತವಾಗುವುದು; ಆದರೆ ನಮ್ಮ ದುರ್ದೈವ ವಶಾತ್ ಈಗ ಹಳ್ಳಿಪಳ್ಳಿಗಳಿಗೂ ಸಹಾ ವ್ಯಾಪಿಸುತ್ತಿರುವ ಪಡುವಣದ ಗಾಳಿಯ ಪರಿಣಾಮವಾಗಿ ಕನ್ನಡನಾಡಿನ ಸಹೋದರಿಯರ ವದನದಾವರೆಗಳಲ್ಲಿ ನಲಿದಾಡುತ್ತಿದ್ದ ಉದಯರಾಗ, ಕೀರ್ತನೆಗಳು, ಹಾಡುಗಳು ಇವುಗಳೆಲ್ಲಾ ಮಾಯವಾಗತೊಡಗಿರುತ್ತವೆ. ಕನ್ನಡಿಗರು ಈ ರೀತಿ ತಮ್ಮ ಜೀವನದಿಂದ ಸಂಗೀತ ಕಲೆಯು ಮಾಯವಾಗದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕಾಗಿದೆ.

ಬಾಲ್ಯದಲ್ಲಿಯೇ ವಾಗ್ದೇವಿಯು ತೊಟ್ಟಿಲಲ್ಲಿ ರಂಗನಾಥನು ಬೆಳೆದನೆಂದರೆ ತಪ್ಪಾಗಲಾರದು. ತನ್ನ ಅಜ್ಜನ ವದನಮಂಡಲದಿಂದ ಹೊರಬರುತ್ತಿರುವ ಮಧುರ ಗಾನಗಳು ಅವನ ಹೃದಯದಲ್ಲಿ ಅಡಗಿರುವ ಕಲಾಭಿರುಚಿಯನ್ನು ವಿಕಾಸಗೊಳಿಸಿದುವು ಅವನು ಕೆಲವು ದಿನಗಳಲ್ಲಿಯೇ ತನ್ನ ಅಜ್ಜನ ಬಾಯಿಯಿಂದ ಹೊರ ಸೂಸುತ್ತಿದ್ದ ಅಷ್ಟಪದೀ ಗೀತೆಯನ್ನು ಕಲಿತನು. ತನ್ನ ಸಮಪ್ರಾಯದ ಬಾಲಕರೊಡನೆ ಆಡುತ್ತಿರುವಾಗ ತಾನು ಕಲಿತ ಆ ಗೀತೆಯನ್ನು ಮೃದುಮಧುರವಾದ ವಾಣಿಯಲ್ಲಿ ಅವನು ಹಾಡುತ್ತಿದ್ದನು. ಬಾಲಕರು ಆ ಗಾನಪೀಯೂಷವನ್ನು ಕುಡಿದು ಆನಂದಪಡುತ್ತಿದ್ದರು.

ನಗರಕ್ಕೆ ಬಂದುದರಿಂದ ರಂಗನಾಥನ ವಿದ್ಯಾಭ್ಯಾಸಕ್ಕೆ ಬಹಳ ಸೌಕರ್ಯವು ಲಭಿಸಿತು ವಿದ್ಯೆಯ ಬೆಲೆಯನ್ನು ಶಾಸ್ತ್ರಿಗಳು ಚನ್ನಾಗಿ ಬಲ್ಲರು. ತಮ್ಮ ಮೊಮ್ಮಗನ ಜೀವನವು ಶೋಭಾಯಮಾನವಾಗಬೇಕಾದರೆ, ಅವನು ವಿದ್ಯಾವಂತನಾಗಬೇಕೆಂಬುದನ್ನು ಶಾಸ್ತ್ರಿಗಳು ತಿಳಿದಿದ್ದರು. ಆದುದರಿಂದ ಆ ನಗರದ ಮುನ್ಸಿಪಲ್

ಪ್ರಾಥಮಿಕ ಶಾಲೆಯಲ್ಲಿಗೆ ಅವರು ರಂಗನನ್ನು ಸೇರಿಸಿದರು. ರಂಗನು ತೀಕ್ಷ್ಣಮತಿ ಯಾಗಿದ್ದುದರಿಂದ ವಿದ್ಯಾಭ್ಯಾಸವು ಅವನಿಗೆ ಕಷ್ಟವಾಗಿ ತೋರಲಿಲ್ಲ. ಅವನು ಶಾಲೆ ಯಲ್ಲಿ ತಪ್ಪದೆ ತನ್ನ ಪಾಠಗಳನ್ನು ಕಲಿಯುತ್ತಿದ್ದನು; ವಿನಯಪೂರ್ವಕವಾಗಿ ಆಚಾರ್ಯರೊಡನೆ ವರ್ತಿಸುತ್ತಲಿದ್ದನು.

ರಂಗನ ಬಾಲ್ಯಜೀವನವು ಅತ್ಯಂತ ನಿಷ್ಕಳಂಕವಾಗಿದ್ದಿತು. ಅವನು ಎಂದೂ ಸುಳ್ಳನ್ನು ಹೇಳಿರಲಿಲ್ಲ. ಸಾಧಾರಣವಾಗಿ ಬಾಲಕರಲ್ಲಿ ಗೋಚರವಾಗುತ್ತಲಿರುವ ತುಂಟತನವಾಗಲಿ, ಇತರ ದುರಭ್ಯಾಸಗಳಾಗಲಿ ಅವನಿಗಿರಲಿಲ್ಲ. ಅಸತ್ಯವನ್ನು ನುಡಿಯುವುದೆಂದರೆ ಅವನಿಗೆ ಬಹು ಸಂಕಟವಾಗಿ ತೋರುತ್ತಿತ್ತು. ಇದಲ್ಲದೆ ಹುಡುಗನು ಬಹು ದಯಾಶೀಲನಾಗಿದ್ದನು. ಅನ್ಯರ ಸಂಕಟಗಳನ್ನು ನೋಡಿ ಸಹಿಸುವ ಮನಸ್ಸಲ್ಲ ಅವನದು; ಅವನ ದಯವು ಎಷ್ಟು ಮಟ್ಟಿಗಿನದೆಂಬುದನ್ನು ಅರುಹುವದಕ್ಕೆ ಇಲ್ಲಿ ಅವನ ಶಾಲೆಯಲ್ಲಿ ನಡೆದ ಒಂದು ಸಂಗತಿಯನ್ನು ನುಡಿಯುತ್ತೇನೆ. ಒಂದು ದಿನ ಶಾಲೆಯಲ್ಲಿ ಒಬ್ಬ ಹುಡುಗನ ಟೋಪಿಯನ್ನು ಇನ್ನೊಬ್ಬ ತುಂಟ ಹುಡುಗನು ಹರಿದು ಹಾಕಿದನು. ಆ ಬಡವ ಬಾಲಕನು ತನ್ನ ಟೋಪಿಯನ್ನು ಕಳೆದುಕೊಂಡದ್ದರಿಂದ ಅಳತೊಡಗಿದನು. ಇತರ ಬಾಲಕರೆಲ್ಲರೂ ಆ ಹಸುಳೆಯ ಕ್ರಂದನಗಳನ್ನು ಆಶ್ರಾವಿಸಿ ಹಾಸ್ಯಮಾಡುತ್ತಿದ್ದರಲ್ಲದೆ, ಅವನಿಗೆ ಸಹಾಯವನ್ನು ಮಾಡಲು ಉದ್ಯುಕ್ತರಾಗಲಿಲ್ಲ. ಈ ಸಂದರ್ಭದಲ್ಲಿ ರಂಗನಾಥನು ಅಲ್ಲಿಗೆ ಬಂದನು; ಆವನು ಟೋಪಿಯನ್ನು ಕಳೆದುಕೊಂಡ ಬಾಲಕನನ್ನೂ ಅವನ ಸುತ್ತುಗಟ್ಟಿ ವಿವಿಧ ರೀತಿಯಲ್ಲಿ ಹಾಸ್ಯ ಮಾಡುತ್ತಿರುವ ಹುಡುಗರನ್ನೂ ವೀಕ್ಷಿಸಿದನು. ಆಗ ಅವನು ಆ ಹಸುಳೆಯ ಹತ್ತಿರ ಸೇರಳಿದನು.

“ತಮ್ಮಾ, ನೀನೇಕೆ ಅಳುತ್ತಿರುವೆ?”

“ಟೋಪಿ,-ನನ್ನ ಟೋಪಿ,-ಹಾಳಾಗಿ ಹೋಗಿದೆ!” “ಹೇಗೆ!

“ಅಗೋ! ಅವನು ಹರಿದು ಹಾಕಿದ್ದಾನೆ!”

“ಅಳಬೇಡ, ನಾನೊಂದು ಟೋಪಿಯನ್ನು ಕೊಡುತ್ತೇನೆ; ಮಧ್ಯಾಹ್ನ ಶಾಲೆಗೆ ಬರುವಾಗ ಆಗಲಿ!”

ಮಧ್ಯಾಹ್ನದ ಊಟವನ್ನು ಮಾಡಿಕೊಂಡು ಶಾಲೆಗೆ ಹಿಂದಿರುಗುವಾಗ, ರಂಗನು ಮನೆಯಿಂದ ಆರಾಣೆ ಕಾಸು ತಂದಿದ್ದನು. ಅವನು ಪೇಟೆಯಿಂದ ಆರಾಣೆ ಬೆಲೆಯ ಒಂದು ಟೋಪಿಯನ್ನು ಕೊಂಡುಕೊಂಡನು. ಆ ಟೋಪಿಯನ್ನು ಆ ಬಾಲಕನಿಗೆ ಕೊಟ್ಟು ಅವನನ್ನು ಸಮಾಧಾನಪಡಿಸಿದನು. ಇದು ಒಂದು ಸಾಮಾನ್ಯ ಕೃತ್ಯವೇ ಆಗಿದ್ದರೂ ಇದರಿಂದ ಅನ್ಯರ ಶೋಕವನ್ನು ವೀಕ್ಷಿಸುವಾಗ ರಂಗನ ಹೃದಯವು ಯಾವ ರೀತಿಯಲ್ಲಿ ಕರಗುತ್ತಿದ್ದಿತು ಎಂಬುದನ್ನು ನಾವು ತಿಳಿದುಕೊಳ್ಳಬಹುದು. ಒಂದು ಗಿಡದ ಚಿಗುರಿನಿಂದಲೇ ಅದು ಯಾವ ರೀತಿಯ ಮರವಾಗುವದೆಂಬುದು ವ್ಯಕ್ತವಾಗುತ್ತದೆ. ಅದರಂತೆ ಬಾಲ್ಯದಲ್ಲಿಯೇ ದೃಗ್ಗೋ

ಚರವಾಗುತ್ತಿರುವ ಗುಣಗಳು, ಸ್ವಭಾವ ಇವುಗಳಿಂದ ಅವನ ಭಾವೀ ಜೀವನದ ಚಿತ್ರವು ಯಾವ ತರಹದ್ದೆಂಬುದನ್ನು ನಾವು ಊಹಿಸಿಕೊಳ್ಳಬಹುದು. ನಾವು ಈ ವಿಶ್ವದಲ್ಲಿ ಬೆಳಗಿದ ಅನೇಕ ಮಂದಿ ಮಹಾತ್ಮರುಗಳ ಜೀವನ ಚಿತ್ರಗಳನ್ನು ಅವಲೋಕಿಸಿದರೆ, ಅವರು ಬಾಲ್ಯದಿಂದಲೇ ತಮ್ಮಲ್ಲಿರುವ ಗುಣಗಳನ್ನು ಪ್ರದರ್ಶಿಸಿರುವರೆಂಬದನ್ನು ತಿಳಿದುಕೊಳ್ಳಬಹುದು. ಈ ನಿಯಮದಂತೆಯೇ ರಂಗನಾಥನಲ್ಲಿ ಪ್ರಕಾಶಿಸುತ್ತಿರುವ ಹೃದಯವಿಶಾಲತೆಯು ಅವನ ಬಾಲ್ಯದಲ್ಲಿಯೆ ಚಿಗುರನ್ನು ಹೊಂದಿತು. ರಂಗನಾಥನ ಆ ಕೃತ್ಯವನ್ನು ವೀಕ್ಷಿಸಿದ ಒಬ್ಬ ಆಚಾರ್ಯರು:— "ಈ ಹುಡುಗನು ತನ್ನ ಭಾವೀ ಜೀವನದಲ್ಲಿ ಒಬ್ಬ ಮಹಾನುಭಾವನಾಗುತ್ತಾನೆ." ಎಂದು ನುಡಿದರು ಆ ಗುರುವರ್ಯರು ಆಡಿದ ಮಾತು ಹೇಗೆ ಸತ್ಯವಾಗಿ ಪರಿಣಮಿಸಿತೆಂಬುದನ್ನು ನಾವು ಮುಂದಿನ ಅಧ್ಯಾಯಗಳಿಂದ ತಿಳಿದುಕೊಳ್ಳಬಹುದು

ರಂಗನು ತನ್ನ ಶಾಲೆಯ ಬಾಲಕರಿಗೆಲ್ಲ ಆದರ್ಶಪ್ರಾಯನಾಗಿದ್ದನು; ಪಾಠ ಕಲಿಯುವುದು, ಆಡುವುದು ಎಂಬಿತ್ಯಾದಿ ವಿದ್ಯಾರ್ಥಿ ಜೀವನದ ವಿವಿಧ ಪಾರ್ಶ್ವಗಳಲ್ಲಿ ಅವನು ತನ್ನ ಪ್ರಕಾಶವನ್ನು ಬೀರಿದನು. ಅವನು ಗುರುಗಳಿಗೆ ಹೇಗೆ ಅಚ್ಚುಮೆಚ್ಚಿನ ಶಿಷ್ಯನಾಗಿದ್ದನೋ, ಅದರಂತೆಯೇ ತನ್ನ ಶಾಲೆಯ ಹುಡುಗರಿಗೆ ಅವನೊಬ್ಬ ಉತ್ತಮ ಗೆಳೆಯನಾಗಿ ಪರಿಣಮಿಸಿದನು ಇದಕ್ಕೆ ಕಾರಣವು ಅವನ ಸ್ನೇಹಮಯ ವರ್ತನೆಯಾಗಿದ್ದಿತು. ತನ್ನಣ ವಿದ್ಯಾರ್ಥಿಗಳೊಂದಿಗೆ ಅವನು ಸಿಟ್ಟು ಮಾಡಿದವನಲ್ಲ ಹುಡುಗರ ಮಧ್ಯದಲ್ಲಿ ಕಲಹಗಳು ನಡೆದರೆ, ಅವರ ಜಗಳವನ್ನು ತೀರಿಸುವ ನ್ಯಾಯಾಧೀಶನು ರಂಗನಾಥನಾಗಿದ್ದನು. ತನ್ನ ಶಾಲೆಯಲ್ಲಿ ನಡೆಯುತ್ತಿರುವ ಕಲಹ, ಹೊಡದಾಟ ಎಂಬಿವುಗಳನ್ನು ಸಮಾಪ್ತಿಗೊಳಿಸಿ, ಶಾಂತಿಯನ್ನು ಹರಡುವ ಕೆಲಸವು ರಂಗನದಾಗಿದ್ದಿತು. ಪಾಠಗಳನ್ನು ತಿಳಿಯಲು ಅಸಮರ್ಥರಾದ ವಿದ್ಯಾರ್ಥಿಗಳಿಗೆ, ಅವನು ಬೇಸರವಿಲ್ಲದೆ ಅವುಗಳ ತಾತ್ಪರ್ಯವನ್ನು ವಿವರಿಸಿ ಹೇಳಿಕೊಡುತ್ತಿದ್ದನು ಆ ಶಾಲೆಯಲ್ಲಿ ಒಂದು ಹೊಸ ಉತ್ಸಾಹವು ರಂಗನಾಥನ ಪರಹಿತ ಚಿಂತನೆಯಿಂದ ಸಂಜಾತವಾಯಿತೆಂದು ಹೇಳಿದರೆ ತಪ್ಪಾಗಲಾರದು.

ರಂಗನಾಥನ ದಿನಚರಿಯನ್ನು ಕುರಿತು ಒಂದೆರಡು ಮಾತುಗಳನ್ನು ಇಲ್ಲಿ ಹೇಳುವುದು ತಪ್ಪಾಗಲಿಕ್ಕಿಲ್ಲವೆಂಬು ನನ್ನ ಭಾವನೆಯು. ಶಾಲೆಯನ್ನು ಸಾಯಂಕಾಲ ತ್ಯಜಿಸಿದರೆ, ತನ್ನ ಗೆಳೆಯನಾದ ಮಾಧವನೊಡನೆ ಸಂಚರಿಸಲು ತೆರಳುವುದು ಅವನ ದಿನಚರ್ಯೆಯಲ್ಲಿ ಒಂದು ಪದ್ಧತಿಯಾಗಿ ಹೋಗಿತ್ತು. ಮಾಧವನ ಮೇಲೆ ರಂಗನಿಗಿರುವ ಪ್ರೇಮವು ಅಪಾರವಾದುದು; ಇಬ್ಬರೂ ಒಂದೇ ತರಗತಿಯಲ್ಲಿ ಕಲಿಯುತ್ತಿದ್ದರು ಮಾಧವನಾದರೂ ಅಷ್ಟು ಧನಿಕ ಕುಟುಂಬದವನಲ್ಲ; ದರಿದ್ರನಾದ ಒಬ್ಬ ಕಾರಕೂನನ ಮಗನು ಅವನು; ಆದರೆ ಧನವಿಲ್ಲದಿದ್ದರೂ ವಿನಯ ಮತ್ತು ವಿದ್ಯೆ ಇವುಗಳು ಆ ಬಾಲಕನಲ್ಲಿ ಬೇರೂರಿದ್ದವು. ಈ ಗುಣಗಳೇ ರಂಗನೊಡನೆ ಅವನ ಗೆಳೆತನವಾಗುವಂತೆ ಪ್ರೇರಿಸಿದುವು.

ಈ ಗೆಳೆಯರಿಬ್ಬರ ಸ್ವಭಾವಗಳಲ್ಲಿಯೂ ವೈಪರೀತ್ಯಗಳಿದ್ದುವು; ರಂಗನು ಸ್ವಭಾವತಃ ಶಾಂತಿಶೀಲನು; ಎಲ್ಲಾ ಕೆಲಸಗಳನ್ನು ಸಾವಧಾನತೆಯಿಂದ ಮಾಡಿ ಕ್ರಮೇಣ ಪೂರೈಸುವುದು ಅವನ ಸ್ವಭಾವ. ಜನರೊಡನೆ ಮಾತಾಡುವುದಕ್ಕಿಂತ ಕೆಲಸಗಳನ್ನು ಮಾಡುವುದರಲ್ಲಿ ಅವನಿಗೆ ಹೆಚ್ಚಿನ ಪ್ರೇಮವು. ಅವನ ವ್ಯಕ್ತಿತ್ವವಾಗಲಿ ನುಡಿಗಳಾಗಲೀ ಯಾರನ್ನೂ ಹೆಚ್ಚಿಗೆ ಆಕರ್ಷಿಸಲಾರವು; ಆದರೆ ಅವನ ಕೆಲಸಗಳನ್ನು ವೀಕ್ಷಿಸುವಾಗ, ಜನರಲ್ಲಿ ಅಪಾರವಾದ ಪರಿಣಾಮ ಉಂಟಾಗುವುದು. ಇಷ್ಟೆಲ್ಲ ಗುಣಗಳಿಂದ ನಿಬಿಡವಾದ ರಂಗನಾಥನಲ್ಲಿಯಾದರೂ ಕೆಲವು ದೋಷಗಳಿಲ್ಲದೆ ಇರಲಿಲ್ಲ. ಈ ಲೋಕದಲ್ಲಿ ಸಕಲ ಗುಣಸಂಪೂರ್ಣನಾಗಿ ಯಾವ ನ್ಯೂನತೆಯೂ ಇಲ್ಲದೆ ಇರುವ ನರಜೀವಿಯನ್ನು ನೋಡಸಿಗುವುದು ದುರ್ಲಭವಾಗಿರುವುದರಿಂದ, ಅಲ್ಪ ಸ್ವಲ್ಪ ಕೆಡುಕುಗಳಿಂದ ಕೂಡಿರುವ ಮನುಷ್ಯನನ್ನು ನಿಂದ್ಯ ದೃಷ್ಟಿಯಲ್ಲಿ ನೋಡುವುದು ಅನುಚಿತವಾಗಿದೆ. ರಂಗನಾಥನ ನ್ಯೂನತೆಗಳು ಯಾವುವು ಎಂಬುದನ್ನು ವಿವರಿಸುತ್ತೇನೆ. ರಂಗನ ಮೊದಲನೆಯ ನ್ಯೂನತೆಯು ತನ್ನ ಅಂತರಂಗಕ್ಕೆ ಸಂಬಂಧಿಸಿದ ಸಂಗತಿಗಳಲ್ಲಿ ದುಃಖವು ಬಂದೊದಗಿದರೆ, ಅವುಗಳನ್ನು ಸಹಿಸಿಕೊಳ್ಳಲು ಶಕ್ತಿಯಿಲ್ಲದುದಾಗಿದೆ. ತನ್ನ ಅಂತರಂಗದಲ್ಲಿ ಪ್ರವೇಶಿಸುವ ಸಂಗತಿಗಳು ಬಂದೊದಗಿದರೆ ಅವನ ಮನಸ್ಸು ಚಿಂತಾಪರವಶವಾಗಿ ಉದ್ವೇಗವನ್ನು ಹೊಂದುತ್ತದೆ. ಹೀಗೆ ಮನಸ್ಸು ಉದ್ವೇಗಪರವಶವಾದ ವೇಳೆಯಲ್ಲಿ ಯುಕ್ತಾಯುಕ್ತ ವಿವೇಚನೆಯಿಲ್ಲದೆ, ಅವನು ಹುಚ್ಚನಂತೆ ವರ್ತಿಸಿ ಬಿಡುತ್ತಾನೆ ಆ ಸಂದರ್ಭಗಳಲ್ಲಿ ಅವನು ಮಾಡುತ್ತಿರುವ ಪ್ರಯತ್ನಗಳ ತಾತ್ಪರ್ಯವಾಗಲೀ ಅವುಗಳಿಂದ ಉಂಟಾಗುವ ಪರಿಣಾಮವೇನೆಂಬುದಾಗಲೀ ಅವನಿಗೆ ತಿಳಿಯದು. ಇದೇ ಅವನಲ್ಲಿರುವ ನ್ಯೂನತೆಯು; ಈ ದೋಷವು ಅವನ ಜೀವನದಲ್ಲಿ ಹಲವು ಉತ್ಪಾತಗಳಿಗೆ ಕಾರಣವಾಯಿತು; ಅವನು ಅನೇಕ ಸಂಕಟಗಳನ್ನು ಅನುಭವಿಸಬೇಕಾಗಿ ಬಂದಿತು.

ಮಾಧವನು ಶಾಂತ ಸ್ವಭಾವದವನಲ್ಲ; ಯಾವಾಗಲೂ ಸಿಟ್ಟಿಗೇಳುತ್ತಿರುವ ಸ್ವಭಾವವು ಅವನದು. ಬಾಲ್ಯದಲ್ಲಿಯೇ ಒಬ್ಬ ಕ್ರಾಂತಿಕಾರಿಯ ರಕ್ತವು ಅವನಲ್ಲಿ ಹರಿಯುತ್ತಿರುವುದು ಗೋಚರವಾಗಲಾರಂಭಿಸಿತು. ಒಂದು ಕೆಲಸವು ಅನ್ಯಾಯವೆಂದೂ, ಅಧರ್ಮವೆಂದೂ ಅವನಿಗೆ ತೋರಿದರೆ, ತನ್ನಲ್ಲಿರುವ ಸಕಲ ಶಕ್ತಿಗಳನ್ನೂ ವಿನಿಯೋಗಿಸಿ, ಅದನ್ನು ನಿರ್ಮೂಲಗೊಳಿಸಲು ಅವನು ಪ್ರಯತ್ನಿಸುತ್ತಲಿದ್ದನು. ಕ್ರಮೇಣ ಎಂಬ ಪದವು ಅವನ ಶಬ್ದಕೋಶದಲ್ಲಿಲ್ಲ. ಒಂದು ಉದ್ಯಮಕ್ಕೆ ಕೈ ಹಾಕಿದರೆ, ಅದನ್ನು ಸಫಲಗೊಳಿಸಬೇಕೆಂಬುದೇ ಅವನ ಆಗ್ರಹವು; ಆದರೆ ತಾನು ಮಾಡುತ್ತಿರುವ ಪ್ರತಿಯೊಂದು ಕೆಲಸವನ್ನೂ ಬಹು ತೀಕ್ಷ್ಣಬುದ್ಧಿಯನ್ನು ಪ್ರಯೋಗಿಸಿ, ಅವನು ಚಿಂತಿಸುತ್ತಿದ್ದನು. ಅವನ ಮನಸ್ಸು ರಂಗನದರದಂತೆ ಅಷ್ಟು ಕೋಮಲವಾದುದಲ್ಲ. ಅದು ವಜ್ರದಂತೆ ಕಠಿಣವಾಗಿದ್ದು ಶೋಕ-ತಾಪಗಳ ಸೆಕೆಗೆ ಸಿಲುಕಿ ಕರಗಲಾರದು. ಸುಖವಾಗಲೀ, ದುಃಖವಾಗಲೀ ಅವನಿಗೆ ಪ್ರಧಾನವಾದ ಕಾರ್ಯ

ಗಳಾಗಿರಲಿಲ್ಲ. ಆ ಎರಡು ಶಕ್ತಿಗಳೂ ಅವನನ್ನು ಸ್ಪರ್ಶಿಸಲಾರವು "ಪ್ರಯತ್ನ" ಇದು ಮಾತ್ರವೇ ಅವನಿಗೆ ಬೇಕಾದುದು. ಇಂಥ ವಿಚಿತ್ರ ಸ್ವಭಾವದ ಒಬ್ಬ ಬಾಲಕನಿಗೆ ಶಾಲೆಯಲ್ಲಿ ಹೆಚ್ಚು ಮಂದಿ ಮಿತ್ರರಿರಲಾರರು. ಅನ್ಯರನ್ನು ಸಂತೋಷಪಡಿಸಿ, ಅವರನ್ನು ಗೆಳೆಯರನ್ನಾಗಿ ಮಾಡಿಕೊಳ್ಳುವ ಅಭ್ಯಾಸವು ಮಾಧವನಿಗಿಲ್ಲದುದರಿಂದ, ಅವನಿಗಿರುವ ಮಿತ್ರರ ಸಂಖ್ಯೆಯಾದರೂ ಕಡಿಮೆಯಾಗಿದ್ದಿತು. ಅವನ ತೀಕ್ಷ್ಣವಾದ ಅಭಿಪ್ರಾಯ, ಶಾಂತಿಕಾರಿಯ ಮನೋಭಾವ ಇವುಗಳು ಹಲವರನ್ನು ಅವನ ಶತ್ರುಗಳನ್ನಾಗಿ ಮಾಡಿದುವು.

ಆದರೂ ಈ ಎರಡು ಪರಸ್ಪರ ಸ್ವಭಾವ ವೈಪರೀತ್ಯಗಳಿಂದ ಕೂಡಿದ ಎರಡು ಮಂದಿ ಬಾಲಕರು ಪರಸ್ಪರ ಗೆಳೆಯರಾದುದು ಆಶ್ಚರ್ಯವೇ ಸರಿ! ನಿಜವಾಗಿ ಹೇಳುವುದಾದರೆ ಈ ಗೆಳೆತನವು ಎರಡು ಶಕ್ತಿಗಳ ಸಮ್ಮಿಲನವಾಗಿದ್ದಿತು. ಈ ಪ್ರೇಮಬಂಧವು ಅವರ ಬಾಲ್ಯದಲ್ಲಿ ಮಾತ್ರವಲ್ಲ; ಅವರ ತಾರುಣ್ಯದಲ್ಲಿಯೂ ನೆಲೆ ನಿಂತಿತು.

ಸಾಧಾರಣವಾಗಿ ಈ ಬಾಲಕರಿಬ್ಬರೂ ತಮ್ಮ ಶಾಲಾ ವೇಳೆಯು ಕಳೆದರೆ ಸಂಚಾರಾರ್ಥವಾಗಿ ತೆರಳುವುದು ಅವರ ಅಭ್ಯಾಸ. ಇಬ್ಬರು ಗೆಳೆಯರೂ ಸಂಜೆಯ ಸಮಯದಲ್ಲಿ ಒಂದೆರಡು ಮೈಲುಗಳ ದೂರ ಸಂಚರಿಸಿ ಮನೆಗಳಿಗೆ ಹಿಂದಿರುಗಿ ಬರುತ್ತಿದ್ದರು. ಅವರು ಹೋದ ದಾರಿ [illegible] ಚರ್ಚೆಗಳನ್ನು [illegible] ಮಾತಾಡುತ್ತಲೂ ಅವರಿಗೆ [illegible] ಗೆ [illegible] ಗುಣಗಳನ್ನು ಒಬ್ಬರು ಇನ್ನೊಬ್ಬರಿಗೆ ವಿವರಿಸಿ [illegible] ಇದ್ದರು. ರಾಮಾಯಣದಲ್ಲಿ ರಂಗನ ಪ್ರೀತಿಗೆ ಪಾತ್ರನಾದ [illegible] ಮಾಧವನು ತೀಕ್ಷ್ಣ[illegible]ನಾಗಿದ್ದಿತು ಹೆಚ್ಚಿಗೆ ಮೆಚ್ಚು[illegible] ಸಾರಿ ಈ ಗೆಳೆಯರಿಬ್ಬರ ನಡುವೆ ದೊಡ್ಡ ವಾದವಿವಾದಗಳು ನಡೆ[illegible]ತ್ತಿದ್ದುವು. ಸ್ವಭಾವತಃ ಮಾಧವನು ತನ್ನ ಅಭಿಪ್ರಾಯವನ್ನು ಶಕ್ತಿ[illegible] ನೀಡಿದನು [illegible] ಮನಸ್ಸುಗಳಲ್ಲಿ ಪರಿಣಾಮವನ್ನುಂಟು ಮಾಡು[illegible] ಇದಕ್ಕೆ ಉದಾಹರಣೆಯು ಶಾಲೆಯಲ್ಲಿ ನಡೆದ [illegible]ಯಲ್ಲಿ ಅವನು ಪ್ರಥಮ ಬಹುಮಾನವನ್ನು ಸಂಪಾದಿಸಿದುದಾಗಿದ್ದಿತು. ಅವನು ಒಂದು ವಿಷಯವನ್ನು ಕುರಿತು ಮಾತಾಡಲು ಪ್ರಾರಂಭಿಸಿದರೆ, ಆ ಸಂಗತಿಗಿರುವ ಕಾರ್ಯ-ಕಾರಣಗಳನ್ನೂ ಅದರಿಂದ ಸಂಭವಿಸಬಹುದಾದ ಫಲಗಳನ್ನೂ ಬಹಳ ಸೊಗಸಾಗಿ ವರ್ಣಿಸುತ್ತಿದ್ದನು.

ಭಕ್ತಿಯು ರಂಗನಿಗೆ ಇಷ್ಟವಾದುದು; ಅವನ ಅಜ್ಜನು ನೆಟ್ಟ ಆ ಬೀಜವು ಅವನ ಎದೆಯಲ್ಲಿ ಮೊಳಕೆಯೊಡೆದು ಗಿಡವಾಗತೊಡಗಿದ್ದಿತು. ಪ್ರೇಮರಸದಲ್ಲಿ ಅವನ ಚಿತ್ತವೃತ್ತಿಯು ತಲ್ಲೀನವಾಗುತ್ತಲಿತ್ತು. ಧ್ರುವ, ಪ್ರಹ್ಲಾದ, ಕಬೀರ ಎಂಬಿತ್ಯಾದಿ ಭಕ್ತರು ಅವನ ಹೃದಯದಲ್ಲಿ ರಾಜಿಸುತ್ತಲಿದ್ದರು; ಆದರೆ ಮಾಧವನು ಭಕ್ತಿರಸದ ಸವಿಯನ್ನು ಉಂಡವನಾಗಿರಲಿಲ್ಲ. ಅವನು ಧೀರರನ್ನೂ ಉದ್ಯಮಶೀಲರಾದ ಪ್ರಚಾರಕೇಸರಿಗಳನ್ನೂ ಮೆಚ್ಚುತ್ತಿದ್ದನು. ಉದ್ಯಮಗಳಲ್ಲಿ ಅವನಿಗೆ ಹೆಚ್ಚಿನ ಅಭಿ

ರುಚಿಯು! ದುಷ್ಟ ನಿರ್ಮೂಲಕ್ಕಾಗಿ ಕ್ಷತ್ರಿಯ ಸಂಹಾರ ಕೃತ್ಯದಲ್ಲಿ ಉದ್ಯುಕ್ತನಾದ ಪರಶುರಾಮನೂ ಕುರುವಂಶದ ಅಭ್ಯುದಯಕ್ಕಾಗಿ ತನ್ನ ಅಂತ್ಯಕಾಲದವರೆಗೆ ಹೆಣಗಿದ ಭೀಷ್ಮನೂ ಅವನ ನಚ್ಚಿನ ನಾಯಕರಾಗಿದ್ದರು.

ದಿನಗಳು ಕಳೆದುವು; ಕಾಲಚಕ್ರವನ್ನು ನಿಯಂತ್ರಿಸುವವರು ಯಾರೂ ಇಲ್ಲ. ಉಷೆಯು ಮಧ್ಯಾಹ್ನಕ್ಕೆ ತನ್ನ ಸ್ಥಳವನ್ನು ಬಿಟ್ಟುಕೊಡುವದು. ಮಧ್ಯಾಹ್ನದ ಆಸನವನ್ನು ಸಂಜೆಯು ಬಂದು ಆಕ್ರಮಿಸುವುದು. ಸಂಜೆಯಾಗಲು ರಾತ್ರಿಯು ತನ್ನ ಕರೀವರ್ಣದ ಹಚ್ಚಡವನ್ನು ತೆಗೆದುಕೊಂಡು ಬರುವುದು. ಕಾಲಸಾಗರದಲ್ಲಿ ಒಂದೊಂದು ಅಲೆಗಳು ಬಂದು ತೀರಕ್ಕೆ ಅಪ್ಪಳಿಸಿ ಮಾಯವಾಗುತ್ತಲಿರುವುವು. ಅವುಗಳ ಸ್ಥಾನವನ್ನು ಹೊಸತರಂಗಗಳು ಆಕ್ರಮಿಸುತ್ತಲಿವೆ ಕಾಲಕ್ಕೆ ವಿಶ್ರಾಂತಿಯಿಲ್ಲ; ಅದರ ಪ್ರಯಾಣಕ್ಕೆ ಅಂತ್ಯವಿಲ್ಲ ಪ್ರಾರಂಭವಿಲ್ಲ ತನ್ನ ದಾರಿಯಲ್ಲಿ ಕಾಣುತ್ತಿರುವ ಹೊಸ ದೃಶ್ಯಗಳನ್ನು ನೋಡುತ್ತ ಹಳೆಯವುಗಳನ್ನು ಮರೆಯುತ್ತ ಅದು ತನ್ನ ಹೆಜ್ಜೆಗಳನ್ನು ಮುಂದಿಡುತ್ತಿರುವುದು ಅದಕ್ಕೆ ಕರುಣೆಯಿಲ್ಲ, ಮರುಕವಿಲ್ಲ, ವಿರಹ ದುಃಖವಿಲ್ಲ ತನ್ನೊಡನೆ ಆಡಿ ನಲಿದಾಡುತ್ತಿರುವ ಲೋಕವನ್ನೇ ಒಂದು ಬದಿಗೆ ಎಸೆದು, ಹೊಸ ಲೋಕ, ಹೊಸ ಜೀವನವನ್ನು ಅವಲೋಕಿಸುವದಕ್ಕಾಗಿ ಒಂದು ಮಂದಸ್ಮಿತವನ್ನು ಬೀರಿ, ಅತಿ ವೇಗದಲ್ಲಿ ಮುಂದೆ ಸಾಗುತ್ತಲಿರುವುದು. ಹೌದು ಕಾಲಕ್ಕೆ ಹಳೆಯದರ ನೆನಪಿದೆ, ಮುಂಬರುವ ಚಿತ್ರಗಳನ್ನು ಅದು ಕಾಣಬಲ್ಲುದು ಕೋಟ್ಯಾನುಕೋಟಿ ವರ್ಷಗಳ ಹಿಂದಿನದು, ಮನುಷ್ಯಬುದ್ಧಿಗೆ ಸಿಲುಕದ ಪುರಾತನ ಚಿತ್ರ, ಕಾಲಗ ಚಿತ್ರ, ಇವುಗಳು ಕಾಲಕ್ಕೆ ನಿನ್ನೆ ದಿನದ ಮಾತುಗಳಾಗಿವೆ! ಅದರ ಸ್ಮರಣೆಯಿಂದ ಅವುಗಳು ಮಾಯವಾಗಲಾರವು. ಪ್ರಾಚೀನ ಭಾರತ, ಇಜಿಪ್ತ, ಬೆಬಿಲೋನ ಗ್ರೀಕ, ರೋಮ ಎಂಬಿತ್ಯಾದಿ ದೇಶಗಳ ಪ್ರಾಚೀನ ಸಂಸ್ಕೃತಿಗಳನ್ನು ಅದು ನೋಡಿದೆ! ರಾಮ-ರಾವಣರ ಯುದ್ಧವನ್ನು ಅದು ವೀಕ್ಷಿಸಿದೆ! ಸೀಸರನ ದಾಳಿಯನ್ನು ಅವಲೋಕಿಸಿದ ಪ್ರೇಕ್ಷಕನು ಅದು ಇಂದಿನ ಮಾನುಷ ಲೋಕದ ನಾಗರೀಕತೆಯನ್ನು ಕಂಡು, ಹಿಂದಿನವುಗಳಂತೆ ಇದೂ ಅಸ್ಥಿರವೆಂದು ಕಾಲವು ಅಟ್ಟಹಾಸಗೈಯುತ್ತಲಿರುವದು. ತನ್ನ ಮೇಲೆ ಆಡುತ್ತಿರುವ ಮನುಷ್ಯನ ಕ್ಷಣಭಂಗುರವಾದ ಬದುಕನ್ನು ವೀಕ್ಷಿಸಿ ಅವನನ್ನು

'ಜೀವನವು ಕ್ಷಣ ನೇರದಾ,
ಮಿಂಚಾಗಿರಲು ಕೆವ್ವ ನರಗೆ ಬಂದೆ!'

ಎಂದು ಅದು ಪರಿಹಾಸ ಮಾಡುತ್ತಲಿರುವುದು.

ದಿನಗಳು ಕಳೆದುವು; ವರ್ಷಗಳು ದಾರಿಯಲ್ಲಿ ಗೋಚರವಾಗುತ್ತಿರುವ ಮೈಲುಕಲ್ಲುಗಳಂತೆ ಒಂದೊಂದಾಗಿ ಕಳೆದು ಹೋದುವು. ಆರು ಸಂವತ್ಸರಗಳು ದಾಟಿದುವು ರಂಗನು ಪ್ರಬುದ್ಧನಾಗುತ್ತ ಬಂದನು ಹದಿನಾಲ್ಕು ವರ್ಷಗಳ ಪ್ರಾಯವಾಯಿತು ರಂಗನಿಗೆ ಅವನು ವಿದ್ಯಾಲಯದ ಒಂದೊಂದು ಮೆಟ್ಟಿಲುಗಳನ್ನು ಹತ್ತಿ

ಈ IV ಫಾರಂಗೆ ಬಂದು ತಲುಪಿದನು. ಅವನ ಬುದ್ಧಿಯು ವಿಕಾಸವನ್ನು ಹೊಂದಿ, ಲೋಕದ ಪರಿಚಯವನ್ನು ಸಂಪಾದಿಸಲಾರಂಭಿಸಿತು. ಬಾಲ್ಯದ ಆಟ-ಪಾಟಗಳ ವಿಚಾರವು ಮಾಯವಾಗಿ ವಿದ್ಯಾರ್ಜನೆ-ಜ್ಞಾನಸಂಪಾದನೆ ಇವುಗಳು ಅವನ ಚಿಂತನಾ ವಿಷಯಗಳಾಗಿ ಪರಿಣಮಿಸಿದುವು.

ಶಾಸ್ತ್ರಿಗಳು ವೃದ್ಧರಾದರು; ಅವರ ಶಾರೀರಕ ಬಲವು ಜರಾಪೀಡನೆಯಿಂದ ಕ್ಷಯಿಸತೊಡಗಿತು. ದೇಹದಲ್ಲಿ ನಿತ್ರಾಣವು ತುಂಬಿತುಳುಕಲಾರಂಭಿಸಿತು. ತಮ್ಮ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸಬೇಕಾದ ಕಾಲವು ಬಂದೊದಗಿದೆ, ಎಂಬುದು ಅವರಿಗೆ ತಿಳಿಯದೆ ಇರಲಿಲ್ಲ. ಕೆಲವು ಸೂರ್ಯೋದಯಗಳನ್ನು ಮಾತ್ರ ತಮ್ಮ ಜೀವನದ ದೀಪವು ಕಾಣಬಲ್ಲುದು, ಎಂಬುದನ್ನು ಅವರು ತಿಳಿದಿದ್ದರು; ಆದರೆ ಅದನ್ನು ಕುರಿತು ಅವರಿಗೆ ಭಯವಿಲ್ಲ: ಆದರೆ ತಮ್ಮ ಮೊಮ್ಮಗನನ್ನು ಸಲಹ ಬೇಕಾದ ಗತಿಯೇನು? ತಾವಿಂದು ತೆರಳಿದರೆ, ಅವನನ್ನು ರಕ್ಷಿಸುವರಾರು? ಎಂಬಿತ್ಯಾದಿ ವಿವಿಧ ಸಮಸ್ಯೆಗಳು ಅವರ ಮೆದುಳನ್ನು ತಿನ್ನುತ್ತಲಿದ್ದುವು.

ರಾಮನಗರಕ್ಕೆ ಬಂದ ಅನಂತರ ಶಾಸ್ತ್ರಿಗಳು ಒಬ್ಬ ಗೆಳೆಯರನ್ನು ಸಂಪಾದಿಸಿದ್ದರು ಆ ಗೆಳೆಯರು ರಾಮನಗರದ ಜಮೀನ್ದಾರರಾದ ಅನಂತರಾಯರಾಗಿದ್ದರು. (ಅವರ ಪರಿಚಯವನ್ನು ಮುಂದೆ ಕೊಡುತ್ತೇನೆ) ಶಾಸ್ತ್ರಿಗಳ ಪಾಂಡಿತ್ಯವು ಜಮೀನ್ದಾರರ ಮನಸ್ಸನ್ನು ಆಕರ್ಷಿಸಿತು ರಾಯರು ಶ್ರೀಮಂತರಾದರೂ ಸಾಧಾರಣವಾಗಿ ಶ್ರೀಮಂತರನ್ನು ಆವರಿಸಿರುವ ದುರ್ಗುಣಗಳು ಅವರನ್ನು ಬಾಧಿಸಿರಲಿಲ್ಲ. ಹಣದ ಮಾನದಂಡವಿಲ್ಲದೆ ಮನುಷ್ಯನಲ್ಲಿ ಬೆಳಗುತ್ತಿರುವ ಸದ್ಗುಣಗಳನ್ನು ನೋಡಿ, ಅವನ ಯೋಗ್ಯತೆಯನ್ನು ಅಳೆಯಲು ಅವರು ಶಕ್ತರಾಗಿದ್ದರು. ರಾಯರು ಶಾಸ್ತ್ರಿಗಳಲ್ಲಿ ಬೆಳಗುತ್ತಿರುವ ಸದ್ಗುಣಗಳು, ಅವರ ಪಾಂಡಿತ್ಯ, ಆಧ್ಯಾತ್ಮಿಕ ಜ್ಯೋತಿ ಇವುಗಳಿಗೆ ಮನಸೋತು, ಶಾಸ್ತ್ರಿಗಳ ಮೈತ್ರಿಯನ್ನು ಸಂಪಾದಿಸಿದರು. ಅನುದಿನವು ಶಾಸ್ತ್ರಿಗಳ ಗೃಹಕ್ಕೆ ಬಂದು ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಶಾಸ್ತ್ರಿಗಳಿಗೆ ಯಾವುದಾದರೂ ತೊಂದರೆಗಳು ಬಂದೊದಗಿದರೆ, ಅವುಗಳನ್ನು ರಾಯರು ನಿವಾರಿಸಲು ಯತ್ನಿಸುತ್ತಿದ್ದರು.

ಒಂದು ದಿನ ಶಾಸ್ತ್ರಿಗಳಿಗೆ ಸ್ವಲ್ಪ ಜ್ವರ ಬಂದಿತು; ಆ ದಿನ ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ನೆರವೇರಿಸಿ, ಸಂಧ್ಯಾವಂದನೆಯನ್ನು ಮಾಡಲು ಅವರು ಶಕ್ತರಾಗಲಿಲ್ಲ. ರಂಗನೇ ಶಾಸ್ತ್ರಿಗಳಿಗೆ ಆಹಾರವನ್ನು ನೀಡಿದನು. ಅವರ ಶರೀರವನ್ನೆಲ್ಲ ತನ್ನ ಕರಗಳಿಂದ ಒತ್ತಿ, ಅವರ ಶರೀರದ ನೋವು ಕಡಿಮೆಯಾಗುವಂತೆ ಮಾಡಿದನು; ಆದರೆ ಮಧ್ಯಾಹ್ನವಾಗಲು ಶಾಸ್ತ್ರಿಗಳಿಗೆ ಎದೆ ನೋವೂ, ಕೆಮ್ಮಲೂ ಆರಂಭವಾಯಿತು.

ಸಾಯಂಕಾಲ ಅನಂತರಾಯರು ಶಾಸ್ತ್ರಿಗಳನ್ನು ನೋಡ ಬಂದಾಗ ಶಾಸ್ತ್ರಿಗಳು ತಮ್ಮ ಹಾಸಿಗೆಯಲ್ಲಿ ಮಲಗಿದ್ದರು ಶರೀರವು ಬಹಳ ಬಳಲಿದ್ದಿತು. ರಾಯರು ಶಾಸ್ತ್ರಿಗಳ ಹತ್ತರ ಬಂದು ಅವರ ಎದೆಯನ್ನೂ ಹಣೆಯನ್ನೂ ಸ್ಪರ್ಶಿಸಿ ನೋಡಿದರು.

ಅವರ ದೇಹವು ಬೆಂಕಿಯಂತೆ ಸುಡುತ್ತಿರುವುದು ರಾಯರಿಗೆ ಗೋಚರವಾಯಿತು.

"ಶಾಸ್ತ್ರಿಗಳೇ, ಡಾಕ್ಟರರನ್ನು ಕರೆತರಲೇ?"

"ಬೇಡ. ನಾನೇಕೆ ನಿಮಗೆ ತೊಂದರೆಯನ್ನುಂಟು ಮಾಡಬೇಕು? ಸ್ವಲ್ಪ ಜ್ವರಮಾತ್ರವಲ್ಲವೇ ಇರುವದು?"

"ಜ್ವರವು ಅತ್ಯಂತ ತೀವ್ರವಾಗಿದೆ; ಶರೀರದ ಕಡೆಗೆ ಹೆಚ್ಚು ಗಮನವನ್ನು ನೀಡಬೇಕು!"

ರಾಯರು ಡಾಕ್ಟರರನ್ನು ಬರಹೇಳಿದರು; ಡಾಕ್ಟರೆಂದರೆ ನಮ್ಮ ಸಮಾಜದಲ್ಲಿ ಧನ್ವಂತರಿಗಿಂತಲೂ ಹೆಚ್ಚು ಪ್ರತಿಷ್ಠೆಯಿರುವ ವ್ಯಕ್ತಿಗಳಾಗಿರುತ್ತಾರೆ.

ಡಾಕ್ಟರರು ಬಂದರು; ಶಾಸ್ತ್ರಿಗಳ ಬಾಯಲ್ಲಿ ಉಷ್ಣಮಾಪಕ ಯಂತ್ರವನ್ನಿಟ್ಟು ರೋಗಿಯ ಶರೀರ ಶಾಖವನ್ನು ಅವರು ಅಳೆದರು. ಉಷ್ಣವನ್ನು ಸೂಚಿಸಲು ನಳಿಕೆಯೊಳಗಿರುವ ಪಾದರಸವು ೧೦೬ ಅಂಶದ ಗುರುತಿರುವಲ್ಲಿಗೆ ಬಂದು ತಲುಪಿದ್ದಿತು. ಅನಂತರ ಆ ಡಾಕ್ಟರರು ರೋಗಿಯ ನಾಲಿಗೆಯನ್ನು ಪರಿಶೋಧಿಸಿದರು ಎದೆಯನ್ನೂ ಬೆನ್ನಲುಬನ್ನೂ ಪರೀಕ್ಷಿಸಿದರು

ಡಾಕ್ಟರರ ಔಷಧೋಪಚಾರದಿಂದ ಶಾಸ್ತ್ರಿಗಳ ಕಾವಲೆಯು ಮಾಯವಾಗಲಿಲ್ಲ. ಅವರು ದಿನೇ ದಿನೇ ಬಲಹೀನರಾಗುತ್ತಾ ಬಂದರು. ಅವರ ದೇಹವೆಂಬ ಗೂಡಿನಿಂದ ವಿಮುಕ್ತವಾಗಲು ಅವರ ಆತ್ಮಪಕ್ಷಿಯು ಯತ್ನಿಸಲಾರಂಭಿಸಿತು. ಒಂದು ದಿನ ಶಾಸ್ತ್ರಿಗಳು ಹಾಸಿಗೆಯಲ್ಲಿ ಮಲಗಿಕೊಂಡಿದ್ದರು. ಅವರ ಹಾಸಿಗೆಯ ಬಳಿಯಲ್ಲಿ ರಂಗನೂ, ಅನಂತರಾಯರೂ, ಮಾಧವನೂ ನಿಂತಿದ್ದರು. ಶಾಸ್ತ್ರಿಗಳ ಮುಖದಲ್ಲಿ ಅವರು ಇನ್ನು ಕೆಲವು ನಿಮಿಷಗಳಲ್ಲಿಯೇ ತಮ್ಮ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸುವರೆಂಬುದರ ಸೂಚನೆಗಳು ಎದ್ದು ಕಾಣುತ್ತಿದ್ದುವು.

ತಮ್ಮ ನೇತ್ರಗಳಿಂದ ಒಂದು ಬೆಳಕನ್ನು ಬೀರಿ, ಶಾಸ್ತ್ರಿಗಳು ಹೇಳಿದರು:—"ರಾಯರೇ, ನನ್ನ ಜೀವನದ ಸೂರ್ಯನು ಅಸ್ತಾಚಲವನ್ನು ಸೇರಲು ಉದ್ಯುಕ್ತನಾಗಿದ್ದಾನೆ. ಹಳೆಯದಾದ ಈ ವಸ್ತ್ರವನ್ನು ನಾನಿಂದು ಉಪೇಕ್ಷಿಸಬೇಕಾಗಿ ಬಂದಿದೆ. ಅದಕ್ಕಾಗಿ ನನಗೆ ಚಿಂತೆಯಿಲ್ಲ; ನನ್ನ ಪ್ರಯಾಣವು ಸಂಕುಚಿತವಾದ ಒಂದು ಲೋಕದಿಂದ ವಿಶಾಲವಾದ ಒಂದು ಜಗತ್ತಿಗೆ ಉಳ್ಳದ್ದಾಗಿದೆ! ಈ ರಂಗಭೂಮಿಯಲ್ಲಿ ಆಡಿ ಬೇಸತ್ತ ನಟನು ನಾನಾಗಿರುವೆನು. ಹೊಸದಾದ ಒಂದು ರಂಗವನ್ನು ಸೇರಲು ನನ್ನ ಆತ್ಮವು ಬಯಸುತ್ತಿರುವದು; ಆದರೆ ನನ್ನ ಮುದ್ದುವನ್ನು,-ನನ್ನ ಕುಟುಂಬದ ಭಾಗ್ಯತಾರೆಯನ್ನು ತ್ಯಜಿಸಲು ನನಗೆ ಸಂಕಟವಾಗುತ್ತಿರುವುದು. ಆ ಹಸುಳೆಯನ್ನು ರಕ್ಷಿಸುವ ಚಿಂತೆಯು ನನ್ನನ್ನು ಈ ಲೋಕಕ್ಕೆ ಎಳೆಯುತ್ತಿರುವುದು."

"ಶಾಸ್ತ್ರಿಗಳೇ, ತಾವು ಚಿಂತಿಸಬೇಡಿರಿ. ರಂಗನು ತಮ್ಮ ಕಂದನಲ್ಲ; ನನ್ನ ಕಂದನು! ಅವನನ್ನು ರಕ್ಷಿಸುವ ಭಾರವು ನನ್ನದು."

"ರಾಯರೇ, ನನ್ನ ಮಗುವನ್ನು ಸಲಹುವಿರಾ? ಅವನಿಗೆ ಜೀವನದ ಪಥ

ವನ್ನು ತೋರಿಸುವಿರಾ?"

"ಸತ್ಯ! ನಾನು ಅವನ ಏಳಿಗೆಗಾಗಿ ನನ್ನಿಂದಾಗುವುದಿಲ್ಲ ಪ್ರಯತ್ನಿಸುತ್ತೇನೆ."

"ಸಂತೋಷ, ರಾಯರೇ ನನ್ನ ಬಂಧುಗಳು ತಪ್ಪು! ವಿಪತ್ಕಾಲದಲ್ಲಿ ಸಹಾಯವನ್ನು ಮಾಡುವಾತನೇ ಮಿತ್ರನು. ನನ್ನ ಎದೆಯ ಮೇಲಿನ ಭಾರವು ಕಡಿಮೆಯಾಯಿತು"

ಎಂದು ನುಡಿದು ಶಾಸ್ತ್ರಿಗಳು ಮೌನವನ್ನು ಅವಲಂಬಿಸಿದರು. ಮೂವರೂ ನಂದಿಹೋಗಲು ಉದ್ಯುಕ್ತವಾಗಿರುವ ಆ ದೀಪವನ್ನು ನೋಡುತ್ತಿದ್ದರು ಎಣ್ಣೆಯಿಂದ ದೀಪವು ತಾನು ನಂದುವ ಮುಂಚೆ ತೀವ್ರವಾಗಿ ಪ್ರಜ್ವಲಿಸುವಂತೆ, ಶಾಸ್ತ್ರಿಗಳ ವದನದಿಂದ ಒಂದು ಕಾಂತಿಯು ಹೊರಬಿದ್ದಿತು. ಅವರು ತಮ್ಮ ಎದೆಯ ಮೇಲೆ ಎರಡು ಕರಗಳನ್ನೂ ಇಟ್ಟು ಮೆಲ್ಲನೆ ಜಪಿಸಿದರು:

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ |
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ||

ಎಂದು ಅವರ ಮನಸ್ಸು ಭಕ್ತಿಯಿಂದ ಪರಂಜ್ಯೋತಿಯನ್ನು ನೆನೆಯುತ್ತಿತ್ತು ಕರುಣಾಘನನ ನಾಮಗಳನ್ನು ಅವರ ನಾಡೀಸ್ಪಂದನದ ಶಕ್ತಿಯು ಕುಗ್ಗಲಾರಂಭಿಸಿತು. ಅಲ್ಪ ಸಮಯದಲ್ಲಿಯೇ ಅವರ ಜೀವನದ ಚೈತನ್ಯವು ಪರಂಜ್ಯೋತಿಯಲ್ಲಿ ಐಕ್ಯವನ್ನು ಹೊಂದುವದಕ್ಕಾಗಿ ಅವರ ಜೀವನ ದೇಹವನ್ನು ಪರಿತ್ಯಜಿಸಿತು.

ರಂಗನನ್ನು ಅಕ್ಕರೆಯಿಂದ ಸಾಕಿ ಸಲಹಿದ ಅಜ್ಜನು ತನ್ನ ಪಯಣವನ್ನು ಸಮಾಪ್ತಿಗೊಳಿಸಿದನು. ಬಂಧುಗಳಿಲ್ಲದ ಅನಾಥನು ಅವನಾದನು, ಆದರೆ ಅನಾಥರಿಗೂ ಒಬ್ಬ ನಾಥನು ಇದ್ದೇ ಇರುತ್ತಾನೆ. ಗತಿಹೀನರಿಗೆ ಶ್ರೀಪತಿಯೇ ಗತಿಯಾಗಿದ್ದು, ದೀನಬಂಧುವೆಂದು ವಿಖ್ಯಾತನಾಗಿರುತ್ತಾನೆ!

---

## ೫ ಜಮೀನದಾರನ ಆಶ್ರಯದಲ್ಲಿ

ರಾಮನಗರದಲ್ಲಿ ಜಮೀನ್ದಾರ ಅನಂತರಾಯರು ಸನ್ಮಾನ್ಯವ್ಯಕ್ತಿಗಳಾಗಿದ್ದರು. ಧನಿಕರಾಗಿದ್ದರೂ ಅಹಂಭಾವವಿಲ್ಲ; ಸಂಕುಚಿತ ಬುದ್ಧಿಯು ಯಾವ ವಿಷಯವು ಅವರ ಮನೋಮಂಡಲವನ್ನು ಆವರಿಸಿರಲಿಲ್ಲ. ನಿಜವನ್ನು ಹೇಳುವುದಾದರೆ, ಮಾನವನು ಧನಿಕ ಕುಟುಂಬದಲ್ಲಿ ಜನ್ಮಗ್ರಹಣ ಮಾಡುವದು ಅವನ ಪೂರ್ವಜನ್ಮದ ದುರಿತಗಳ ಫಲವಾಗಿದೆ, ಎಂದು ಹೇಳಬಹುದು; ಏಕೆಂದರೆ, ಧನವೆಂಬುದು ಮಾನವನ ಆತ್ಮವಿಕಾಸದ ದಾರಿಯಲ್ಲಿ ನಿಂತಿರುವ ಒಂದು ಗೋಡೆಯಾಗಿದೆ. ಹೊಳೆಯುತ್ತಿರುವ ಚಿನ್ನದ ಸಂಕೋಲೆಗಳು ಕೈಗಳನ್ನು ಬಂಧಿಸಿದಂತೆ, ಧನವು ಮಾನವನ ಕೆಲವು ಇಚ್ಛೆಗಳನ್ನು ಪೂರೈಸಲಿರುವ ಒಂದು ಶಕ್ತಿಯಾಗಿದ್ದರೂ, ಆ ಶಕ್ತಿಯೇ ಮನುಷ್ಯನ ಸುತ್ತಲೂ ಒಂದು ಕತ್ತಲೆಯ ಗೋಡೆಯನ್ನು ನಿರ್ಮಿಸಿ, ಆ ಗೋಡೆಗಳ ಹೊರಗಿರುವ ಜಗತ್ತು ತನಗಿಂತ ಬೇರೆಯಾದುದು ಎಂಬ ಭಾವನೆಯು ಮನುಷ್ಯನಲ್ಲಿ

ಸಂಜಾತವಾಗುವಂತೆ ಮಾಡುತ್ತವೆ. ವಿಶಾಲವಾದ ಜಗತ್ತಿನಲ್ಲಿರುವ ಇತರ ಮಾನವರ ಹೃದಯದರ್ಪಣಗಳಲ್ಲಿ, ಧನಿಕನು ತನ್ನ ಆತ್ಮದ ಪ್ರತಿಬಿಂಬವನ್ನು ವೀಕ್ಷಿಸಲು ಶಕ್ತನಾಗುವುದಿಲ್ಲ. ಆದುದರಿಂದಲೇ ಮಹಾತ್ಮಾ ಜೇಸುಸ್ತ ಹೀಗೆ ಹೇಳಿರುತ್ತಾನೆ "ಒಂದು ಸೂಜಿಯ ತೂತಿಗಾಗಿ ಒಂಟೆಯು ದಾಟಬಹುದು, ಆದರೆ ಧನಿಕನು ನಾಕದ ಹೆಬ್ಬಾಗಿಲುಗಳನ್ನು ದಾಟಲಾರನು" ಎಂಬುದಾಗಿ ಎಂದು ಮಾತ್ರವಲ್ಲ, ಆತ್ಮವಿಕಾಸವನ್ನು ಹೊಂದಿದ ಪ್ರತಿಯೊಬ್ಬ ಮಹಾತ್ಮನೂ, ಧನವನ್ನು ತ್ಯಜಿಸಿರುತ್ತಾನೆ. ಕನ್ನಡಕೀರ್ತನಕೇಸರಿ ಪುರಂದರ ದಾಸರು ತಮ್ಮಲ್ಲಿರುವ ಸಿರಿಯನ್ನು ತ್ಯಾಗ ಮಾಡುವವರೆಗೆ ಭಗವಂತನ ಕೃಪೆಗೆ ಅವರು ಪಾತ್ರರಾಗಲಿಲ್ಲ. ದಿವ್ಯಚೈತನ್ಯದ ದರ್ಶನವನ್ನು ಹೊಂದಲು ಮಹಾರಾಷ್ಟ್ರದ ಭಕ್ತಶಿರೋಮಣಿ ತುಕಾರಾಮ ಸಾಧುಗಳು ತಮ್ಮ ಸಿರಿಯನ್ನು ಹರ್ಷಭರಿತರಾಗಿ ದಾನ ಮಾಡಿದರು. ಅಭಿನವ ಭಾರತದ ಯೋಗೀಶ್ವರರಾದ ಶ್ರೀರಾಮಕೃಷ್ಣ ಪರಮಹಂಸರು ಹೊನ್ನು-ಮಣ್ಣುಗಳೆರಡೂ ಒಂದೇ ಬಗೆಯವೆಂದು ನೆನೆದು, ಅವೆರಡುಗಳನ್ನೂ ಗಂಗೆಯಲ್ಲಿ ಬಿಸುಟು ಆತ್ಮವಿಕಾಸವನ್ನು ಹೊಂದಲು ತಮ್ಮ ಸಾಧನೆಗಳನ್ನು ಪ್ರಾರಂಭಿಸಿದರು. ಇವುಗಳಿಂದ ನಮಗೆ ವ್ಯಕ್ತವಾಗುವದೇನೆಂದರೆ, ಧನವು ಮನುಷ್ಯ ಜೀವನವನ್ನು ವಿಕಾಸಗೊಳಿಸುವದರ ಬದಲಾಗಿ, ಅವನನ್ನು ಅಧಃಪತನದ ದಾರಿಯಲ್ಲಿ ಹಿಡಿದೆಳೆಯುತ್ತದೆ.

ಆದುದರಿಂದ ಧನಿಕನಾದವನಲ್ಲಿ ಸಂಕುಚಿತ ಚಿತ್ತವೃತ್ತಿಯಿಲ್ಲದಿದ್ದರೆ ಅವನು ಒಬ್ಬ ಉತ್ತಮ ತರಗತಿಯವನೆಂದು ನಾವು ಒಪ್ಪಬೇಕಾಗುವದು. ಏಕೆಂದರೆ, ಧನಿಕನನ್ನು ಬಾಲ್ಯದಿಂದಲೇ ಅಹಂಭಾವ, ದಂಭ, ಅತ್ಯಾಸಕ್ತಿ, ವಿಷಯವಾಸನೆ ಎಂಬ ವ್ಯಾಮೋಹಗಳು ಆವರಿಸುತ್ತವೆ. ಈರೀತಿಯ ದುರ್ಗುಣಗಳ ಬಲೆಗೆ ಸಿಗದೆ ವಿನಯಶಾಲಿಯಾಗಿಯೂ ಧರ್ಮಿಷ್ಠನಾಗಿಯೂ, ಇರುವ ಧನಿಕನು ಅದ್ವಿತೀಯಮನೋದಾರ್ಢ್ಯವಿರುವ ವ್ಯಕ್ತಿಯೆಂದು ನುಡಿಯಬಹುದಲ್ಲವೆ?

ಜಮೀನದಾರನೆಂದರೆ, ಒಬ್ಬ ಚಿಕ್ಕ ಅರಸನೇ ಅವನೆಂದು ಹೇಳಬಹುದು. ನೂರಾರು ಮಂದಿ ರೈತರು ಒಬ್ಬ ಜಮೀನದಾರನ ಆಶ್ರಯದಲ್ಲಿ ಬಾಳುತ್ತಾರೆ. ಅರಸನು ದುಷ್ಟನಾದರೆ ನಾಡು ಕೆಡುವಂತೆ, ಜಮೀನದಾರನು ನೀಚ ಮನೋವೃತ್ತಿಯ ಹಾಗು ದುರಾಗ್ರಹದ ಮನುಷ್ಯನಾಗಿದ್ದರೆ, ಅವನ ಆಶ್ರಯದಲ್ಲಿರುವ ಒಕ್ಕಲಿಗರ ಬದುಕು ನಾಯಿಪಾಡಾಗಿ ಪರಿಣಮಿಸುತ್ತದೆ, ಅವರ ಜೀವನಗಳನ್ನು ಹಾಳು ಮಾಡಬಹುದು; ಆದರೆ ನಮ್ಮ ರಾಯರು ದುರಾಗ್ರಹಿಗಳೂ, ಧನಲೋಭಿಗಳೂ ಆಗಿರಲಿಲ್ಲ. ಆದುದರಿಂದ ಒಕ್ಕಲಿಗರ ಶ್ರಮೆಯು ಜಮೀನದಾರನ ರಕ್ತವನ್ನು ಹೆಚ್ಚಿಸಲಿರುವ ಉದ್ಯಮಗಳಾಗಿ ಪರಿಣಮಿಸಲಿಲ್ಲ. ರಾಯರು ತಮ್ಮ ಆಶ್ರಯದಲ್ಲಿ ಬಾಳುತ್ತಿರುವ ಒಕ್ಕಲಿಗರನ್ನು ಸ್ವಂತ ಮಕ್ಕಳಂತೆ ಪ್ರೀತಿಸುತ್ತಿದ್ದರೆಂದು ನುಡಿದರೆ, ಆ ಮಾತನ್ನು ಒಂದು ವೇಳೆ ನಮ್ಮ ಸೋಷ್ಯಲಿಸ್ಟ ಬಂಧುಗಳು ಒಪ್ಪಲಿಕ್ಕಿಲ್ಲ, ಆದರೆ ಇದು ವಾಸ್ತವವಾದ ಸಂಗತಿಯಾಗಿದೆ. ತಮ್ಮ ಒಕ್ಕಲಿಗರ ಸಂಕಟಗಳನ್ನು ನಿವಾರಿಸಲು ರಾಯರು ಹಣಗು

ತ್ತಿದ್ದರು. ಒಕ್ಕಟ್ಟಿನಲ್ಲಿ ಸಿಲುಕಿ, ತಮ್ಮ ಸಹಾಯವನ್ನು ಯಾಚಿಸುತ್ತಲಿರುವ ಕೃಷಿಗಾರನನ್ನು ಎಂದಿಗೂ ರಾಯರು ಹೊರದೂಡುತ್ತಿರಲಿಲ್ಲ. ಎಷ್ಟೋ ಸಾರೆ ಮಾರವಾಡಿಗೆ ಕೊಡಬೇಕಾದ ಸಾಲಗಳನ್ನು ತೀರಿಸಲು ಶಕ್ತರಾಗದೆ ನರಳುತ್ತ ಚಕ್ರಶ್ವಾಸವನ್ನು ಬಿಡುತ್ತಿರುವ ಬಡರೈತನ ಋಣಬಾಧೆಯನ್ನು ರಾಯರು ಪರಿಹರಿಸುತ್ತಲಿದ್ದರು. ಒಕ್ಕಲಿಗರಿಂದ ಮಿತವಾದ ಗೇಣಿಯನ್ನೇ ಅವರು ವಸೂಲ ಮಾಡುತ್ತಿದ್ದರು. ದ್ರವ್ಯದಾಸೆಯಿಂದ ಕೃಷಿಗಾರರ ನೆತ್ತರನ್ನು ಹೀರಲು ಅವರ ಆತ್ಮವು ಒಪ್ಪುತ್ತಿರಲಿಲ್ಲ. ರಾಯರ ಈ ಸದ್ವರ್ತನೆಯಿಂದ ಅವರ ಗೇಣೀದಾರರು ಸಂತುಷ್ಟರಾಗಿದ್ದರು. ರಾಯರೆಂದರೆ ಕೃಷಿಗಾರರಿಗೆಲ್ಲ ಬಹು ಆದರವು, ಸ್ನೇಹವು ಎಲ್ಲೆಯೂ ಸ್ನೇಹಭಾವನೆಯನ್ನುಂಟು ಮಾಡುತ್ತದೆ. ಒಂದು ಮಾತಿನಲ್ಲಿ ಹೇಳುವುದಾದರೆ ರಾಯರು ಜಮೀನ್ದಾರರಿಗೆ ಆದರ್ಶಪ್ರಾಯರಾಗಿದ್ದರು. ಎಲ್ಲ ಧನಿಕರೂ ಅವರಂತೆ ವರ್ತಿಸಿದ್ದರೆ, "ಉಳ್ಳವರು" "ಇಲ್ಲದವರು" ಎಂಬ ವರ್ಗವ್ಯತ್ಯಾಸವಾಗಲಿ ಸೋಶ್ಯಲಿಸ್ಟರು ಹೇಳುವ ವರ್ಗಸಮರದ ಆವಶ್ಯಕತೆಯಾಗಲಿ ಇರುತ್ತಿರಲಿಲ್ಲ. ಮಾರ್ಕ್ಸನ ಸಿದ್ಧಾಂತಗಳ ಆವಶ್ಯಕತೆಯೂ ಇರುತ್ತಿರಲಿಲ್ಲ, ಆದರೆ ಎಲ್ಲರಿಗೂ ವಿಶಾಲ ಹೃದಯವಾಗಲಿ ಪರಹಿತ ಸಾಧನೆಯ ಬುದ್ಧಿಯಾಗಲಿ ಎಲ್ಲಿಂದ ಲಭಿಸೀತು?

ಶ್ಯಾಮಶಾಸ್ತ್ರಿಗಳು ಮರಣವನ್ನು ಹೊಂದಿದ ಅನಂತರ ರಂಗನು ಅನಂತರಾಯರ ಆಶ್ರಯದಲ್ಲಿ ಬೆಳೆದನು. ರಾಯರಿಗೆ ಗಂಡು ಮಕ್ಕಳಿರಲಿಲ್ಲ. ರಾಯರ ಏಕಮಾತ್ರ ಸಂತಾನವು ಪದ್ಮಳಾಗಿದ್ದಳು. ಪದ್ಮಳು ಹಸುಗೆ ಅತ್ಯಂತ ಚತುರೆಯು ಹಾಗೆ ಸುಂದರಳಾಗಿದ್ದಳು. ರಂಗನು ಜಮೀನ್ದಾರರ ಗೃಹದಲ್ಲಿ ಕಾಲಿಟ್ಟಾಗ ಅವಳಿಗೆ ೮-೯ ವರ್ಷಗಳ ಪ್ರಾಯವಿರಬಹುದು.

ರಂಗನು ಶ್ರೀಮಂತಿಕೆಯಲ್ಲಿ ಹುಟ್ಟಿ ಬೆಳೆದವನಲ್ಲ; ಆದುದರಿಂದ ಜಮೀನ್ದಾರನ ಭವ್ಯನಿಲಯವನ್ನೊಳಗೆ ಪ್ರವೇಶಿಸಿ ಅಲ್ಲಿ ಜೀವಿಸುವದೆಂದರೆ ಅವನಿಗೆ ಹಗೋ ಆಯಿತು. ಇದಲ್ಲದೆ ತನ್ನನ್ನು ಸಾಕಿ-ಸಲಹಿದ ಮುದುಕನ ನೆನಪು ಬಂದು ಅವನನ್ನು ಶೋಕಪೀಡಿತನನ್ನಾಗಿ ಮಾಡುತ್ತಿತ್ತು. ತನಗೆ ಪರಿಚಯವಿಲ್ಲದ ಭೃತ್ಯರು, ಗೃಹಿಣಿ, ಪದ್ಮಾ ಇವರೊಡನೆ ಬಾಯಿ ತೆರೆದು ಮಾತಾಡಲಿಕ್ಕೆ ಸಂಕೋಚಿಸುತ್ತಿತ್ತು. ತನಗೆ ಈ ಜಗತ್ತಿನಲ್ಲಿ ಬೇರೆ ಯಾರೂ ಗತಿಯಿಲ್ಲವೆಂಬ ಭಾವನೆಯು ಅವನ ಮನೋದರ್ಪಣದಲ್ಲಿ ಹೊಳೆಯುತ್ತಿತ್ತು. ತಾನು ಏಕಾಂಗಿ, ತನಗೆ 'ಇದುವರೆಗೆ ಪರಿಚಯವಿಲ್ಲದ ಒಂದು ವಲಯದಲ್ಲಿ ಅವನು ಜೀವಿಸುತ್ತಲಿದ್ದಾನೆ. ಅವರೊಡನೆ ಹೇಗೆ ವರ್ತಿಸಬೇಕೆಂಬುದು ಅವನಿಗೆ ತಿಳಿಯದು; ರಾಯರು ಅವನಿಗೆ ಒದಗಿಸಿ ಕೊಟ್ಟಿದ್ದ ಒಂದು ಕೋಣೆಯಲ್ಲಿ ಕುಳಿತು, ರಂಗನು ಮೌನವಾಗಿ ತನ್ನ ಅಜ್ಜನನ್ನೂ, ಅವನೊಡನೆ ತಾನು ಕಳೆದ ಮೃದು ಮಧುರ ನಪಿಯಿಂದ ತುಂಬಿದ ದಿನಗಳನ್ನೂ, ನೆನೆದು ನೇತ್ರಗಳಿಂದ ಬಾಷ್ಪವನ್ನು ಹರಿಸುತ್ತಿದ್ದನು. ಮುತ್ತಿನಂತಿರುವ ಎರಡು ಅಶ್ರುಕಣಗಳು ಅವನ ಮುಂದಿರುವ ಪುಸ್ತಕದ ಮೇಲೆ ಪತಿಸಿದುವು. ಹಳೆಯ ದಿನಗಳನ್ನು ನೆನೆಸುತ್ತ ಅಶ್ರುಪೂರ್ಣ ನೇತ್ರನಾದನು.

"ರಂಗೂ, ಏಕೆ ಮೌನದಲ್ಲಿ ಕುಳಿತಿರುವೆ? ನಿನಗೇಕೆ ಬೇಸರವು?" ಎಂಬ ಮೃದುಮಧುರವಾದ ಒಂದು ಕಂಠನಾದವು ಬಂದು ಅವನ ಶ್ರವಣೇಂದ್ರಿಯಗಳಲ್ಲಿ ಪತಿಸಿ, ವಿಚಾರಲೋಕದಿಂದ ಅವನನ್ನು ಎಚ್ಚರಿಸಿತು. ಅವನು ತನ್ನ ಶಿರಸ್ಸನ್ನೆತ್ತಿ ಅವಲೋಕಿಸಿದನು; ಗೃಹಿಣಿಯು ಬಂದು ತನ್ನ ಕೋಣೆಯ ಬಾಗಿಲ ಬಳಿ ನಿಂತಿರುವ ಚಿತ್ರವು ದೃಗ್ಗೋಚರವಾಯಿತು. ಅವಳನ್ನು ನೋಡಿದೊಡನೆಯೇ ತನ್ನ ನೇತ್ರಗಳಲ್ಲಿ ತುಂಬಿದ್ದ ಬಾಷ್ಪಬಿಂದುಗಳನ್ನು ತಾನು ಹೊದೆದಿದ್ದ ಶಾಲಿನಿಂದ ಒರಸಿಕೊಳ್ಳಲು ರಂಗನು ಪ್ರಯತ್ನಿಸಿದನು.

"ರಂಗಾ, ನೀನು ಅಳುತ್ತಿರುವದೇಕೆ? ನಾವು ಬೇರೆಯವರಲ್ಲ. ಯಾವಾಗಲೂ ನಿನ್ನ ಬಾಡಿದ ಮೋರೆಯನ್ನು ನೋಡುವಾಗ ನಮಗೆ ಹೇಗೋ ಅನಿಸುತ್ತದೆ. ನಿನ್ನ ಮನೋರಥಗಳನ್ನು ನೆರವೇರಿಸಿ ಕೊಡಲು ನಾವು ಸಿದ್ಧರಿರುತ್ತೇವೆ."

"ಅಮ್ಮಾ, ನನ್ನ ಶೋಕವು ತಮ್ಮ ಮನಸ್ಸನ್ನು ಪೀಡಿಸುತ್ತಿರುವದಾದರೆ ಹರ್ಷವನ್ನು ತಾಳಲು ನಾನು ಪ್ರಯತ್ನಿಸುತ್ತೇನೆ. ಈ ಅನಾಥನ ಮೇಲೆ ತಾವೆಲ್ಲರೂ ಇಷ್ಟು ಕೃಪೆಯನ್ನು ತೋರಿದುದಕ್ಕೆ ನಾನು ಕೃತಜ್ಞನಿರುತ್ತೇನೆ."

"ಅದಿರಲಿ. ರಂಗಾ, ನೀನು ಹರ್ಷವನ್ನು ಹೊಂದು. ಚಿಂತೆಯನ್ನು ಬಿಟ್ಟು ಬಾಲಕರಿಗೆ ಅನುಯೋಜ್ಯವಾದ ಆಟಗಳಲ್ಲಿ ಆಸಕ್ತನಾಗು.

ಈ ನುಡಿಗಳಿಂದ ಹೊನ್ನಮ್ಮಳಿಗೆ (ಅದಾಗಿತ್ತಿತು ಗೃಹಿಣಿಯ ಹೆಸರು) ರಂಗನ ಮೇಲೆ ಎಷ್ಟು ವಾತ್ಸಲ್ಯವಿದ್ದಿತು, ಎಂಬದು ವ್ಯಕ್ತವಾಗುವದು ಹೊನ್ನಮ್ಮಳು ಅನಂತರಾಯರಿಗೆ ತಕ್ಕ ಸಹಧರ್ಮಿಣಿಯಾಗಿದ್ದಳು. ಅವಳಿಗೆ ಗಂಡುಮಕ್ಕಳಿರಲಿಲ್ಲ, ಆದರೆ ತನಗೆ ಬಂಧುವಲ್ಲದ ಒಬ್ಬ ಅನಾಥ ಬಾಲಕನ ಮೇಲೆ ಅವಳು ತನ್ನ ಹೃದಯದಲ್ಲಿ ಹರಿಯುತ್ತಿರುವ ಪುತ್ರಪ್ರೇಮವನ್ನು ನಿಕ್ಷೇಪಿಸಿ, ಆ ಹೆಣ್ಣೊಡಲು ತನ್ನ ಪುತ್ರನಂತೆ ರಂಗನನು ಪ್ರೀತಿಸಲಾರಂಭಿಸಿತು. ಪ್ರೇಮವು ವಿಚಿತ್ರವಾದದ್ದು; ಜಮೀನ್ದಾರನ ಪತ್ನಿಯೆಲ್ಲಿ? ಅನಾಥ ಬಾಲಕನೆಲ್ಲಿ? ಆದರೆ ಪ್ರೇಮವು ಆ ನದಿಯನ್ನು ದಾಟಿ ಅವರಿಬ್ಬರ ಜೀವನದಲ್ಲಿಯೂ ಪೀಯೂಷವನ್ನು ಸಿಂಚಿಸಿತು.

ಅನಂತರಾಯರಾದರೂ ರಂಗನನ್ನು ಕುರಿತು ಅಲಕ್ಷ್ಯಭಾವವನ್ನು ಕೈಗೊಳ್ಳಲಿಲ್ಲ. ಅವನನ್ನು ವಾತ್ಸಲ್ಯಪೂರ್ಣ ದೃಷ್ಟಿಯಿಂದ ಅವರು ನೋಡುತ್ತಿದ್ದರು. ಅವನ ಸುಖ-ಸಂತೋಷಗಳಿಗೆ ಯಾವ ಕುಂದಕವೂ ಬಾರದಂತೆ ಜಾಗರೂಕರಾಗಿದ್ದರು. ಅವನ ವಿದ್ಯಾರ್ಜನೆಗೆ ಆವಶ್ಯವಿರುವ ಎಲ್ಲ ಸೌಕರ್ಯಗಳನ್ನು ಅವರು ಒದಗಿಸಿಕೊಟ್ಟರು. ರಂಗನ ವಿನಯ, ಔದಾರ್ಯ ಇತ್ಯಾದಿ ಗುಣಗಳನ್ನು ನಿರೀಕ್ಷಿಸಿ ಹರ್ಷಭರಿತರಾಗಿ ತಮಗೆ ಗಂಡುಮಕ್ಕಳಿಲ್ಲವೆಂಬ ಚಿಂತೆಯನ್ನೇ ಅವರು ಮರೆತು ಬಿಡುತ್ತಿದ್ದರು. ಪ್ರತಿದಿನವೂ ತಮ್ಮ ಮಗಳನ್ನೂ ರಂಗನನ್ನೂ ಕರೆದುಕೊಂಡು ವಾಯು ಸಂಚಾರಕ್ಕೆ ತೆರಳುತ್ತ, ದಾರಿಯಲ್ಲಿ ಅವರಿಬ್ಬರ ಸಲ್ಲಾಪಗಳನ್ನು ಕೇಳಿ, ರಾಯರು ಉತ್ಸಾಹಭರಿತರಾಗುತ್ತಿದ್ದರು. ಆ ಬಾಲ-ಬಾಲಕಿಯರ ನುಡಿಗಳನ್ನು ಕೇಳಿ, ದೂರದ ಭವಿಷ್ಯದಲ್ಲಿ ಬೆಳಗು

ತ್ತಿರುವ ಒಂದು ಶೋಭಾಯಮಾನವಾದ ಚಿತ್ರವನ್ನು ಮನಸ್ಸಿನಲ್ಲಿ ಚಿತ್ರಿಸುತ್ತ ಆ ಸಂಕಲ್ಪ ಚಿತ್ರದ ದರ್ಶನದಿಂದ ಉಪಲಬ್ಧವಾಗಬಹುದಾದ ಸವಿಯನ್ನು ಅವರು ಆಸ್ವಾದಿಸುತ್ತಲಿದ್ದರು.

ಪದ್ಮಳಿಗೆ ರಂಗನ ಆಗಮನದಿಂದ ಆಟವಾಡಲು ಒಬ್ಬ ಸಂಗಾತಿಯು ಲಭಿಸಿದನು. ನಿರ್ವಿಕಾರಭರಿತವಾದ ಆ ಎರಡು ಎಳೆಯ ಹೃದಯಗಳು ಆಟ-ಪಾಟಗಳಲ್ಲಿ ಹರ್ಷವನ್ನು ಉಣಿತಿದ್ದುವು. ರಂಗನೆಂದರೆ ಪದ್ಮಳಿಗೆ ಜೀವ ಎಂಬಷ್ಟು ಸ್ನೇಹವು ಅವಳಲ್ಲಿ ನೆಲೆಸಿತು. ಅವಳ ಎಳೆಯ ಹೃದಯದಲ್ಲಿ ಅಷ್ಟು ಮಹತ್ತಾದ ಪರಿಣಾಮವನ್ನುಂಟು ಮಾಡಲು ರಂಗನಲ್ಲಿ ಯಾವ ಅದ್ಭುತ ಶಕ್ತಿಯಿದ್ದಿತೆಂಬುದನ್ನು ಬಲ್ಲವನು ನಾನಲ್ಲ. ಬಹುಶಃ ಅವನ ನಿಷ್ಕಲಂಕಪೂರ್ಣವಾದ ಸ್ವಭಾವವೇ ಆಗಿರಬಹುದು. ಪ್ರತಿದಿನವೂ ಸಂಜೆಗೆ ಪದ್ಮಳು ರಂಗನ ಬಳಿಗೆ ಓಡಿ ಬಂದು, "ರಂಗಾ, ನನಗೆ ಒಂದು ಕತೆಯನ್ನು ಹೇಳು" ಎಂದು ಅವನನ್ನು ಪೀಡಿಸುತ್ತಲಿದ್ದಳು.

"ಯಾವ ಕತೆಯನ್ನು ಹೇಳಲಿ ಪದ್ಮಾ?"

"ಯಾವುದಾದರೂ ಒಂದನ್ನು ಹೇಳು, ಅದು ಬಹು ಸೊಗಸಾಗಿರಬೇಕು."

"ನನಗೆ ಕತೆಯೇ ಬರೋದಿಲ್ಲ."

"ಸುಳ್ಳು. ನಿನ್ನೆ ದಿನ ಮಾಧವನು ಏನು ಹೇಳಿದನು ಎಂಬುದನ್ನು ಬಲ್ಲೆಯಾ?"

"ಇಲ್ಲ. ಅವನು ಹೇಳಿದುದೇನು?"

"ನಿನ್ನಷ್ಟು ಸೊಗಸಾಗಿ ಕತೆ ಹೇಳುವವರು ಅವನ ತರಗತಿಯಲ್ಲಿಯೇ ಇಲ್ಲವಂತೆ, ಆದುದರಿಂದ ಈಗ ನೀನಂದದ್ದು ಸುಳ್ಳು! ಒಂದು ಕತೆಯನ್ನು ಹೇಳಲೇಬೇಕು. ಯಾವುದಾದರೂ ಒಂದು, ಅದು ಚನ್ನಾಗಿರಬೇಕು!"

"ಹಾಗಾದರೆ ತುಲಸೀದಾಸನ ಕತೆಯನ್ನು ಹೇಳುತ್ತೇನೆ."

"ಹೂಂ, ಹೇಳಿಬಿಡು!"

ರಂಗನು ಪದ್ಮಳ ಒತ್ತಾಯವನ್ನು ಸಹಿಸಲಾರದೆ ತುಲಸೀದಾಸನ ಚರಿತ್ರೆಯನ್ನು ಹೇಳಿದನು. ಮಹಾತ್ಮಾ ತುಲಸೀದಾಸರು ಭಾರತವರ್ಷಕ್ಕೆ ಪರಿಚಯದವರು. ಅಕ್ಬರ ಚಕ್ರವರ್ತಿಯ ಕಾಲದಲ್ಲಿ ಜೀವಿಸಿದ ಆ ಭಕ್ತಶಿರೋಮಣಿಯ ಚರಿತ್ರೆಯು ಪ್ರತಿಯೊಬ್ಬ ಭಾರತೀಯನ ಹೃದಯದಲ್ಲಿಯೂ ಆಧ್ಯಾತ್ಮಿಕ ಚಿಂತನೆಗಳೆಂಬ ಕೆಲವು ಕಿಡಿಗಳನ್ನು ಪ್ರಜ್ವಲಿಸುವಂತೆ ಮಾಡದಿರದು. ಆದರೆ ಸದ್ಯಕ್ಕೆ ನಾನು ಇಂದಿನ ಕಾಲಕ್ಕೆ ಸಂಬಂಧಿಸಿದ ಒಂದು ಚರಿತ್ರೆಯನ್ನು ಬರೆಯಲು ಉದ್ಯುಕ್ತನಾಗಿರುವದರಿಂದ, ಒಂದು ಉಪಕತೆಯಂತೆ ಆ ಮಹಾತ್ಮರ ಚರಿತ್ರೆಯನ್ನು ನುಡಿಯುವದು ಉಚಿತವಾಗಲಾರದು. ಆದುದರಿಂದ ಮುಂದೆ ಆ ಮಹಾತ್ಮರ ಚರಿತ್ರೆಯನ್ನು ಬೇರೊಂದು ಕಾದಂಬರಿ ರೂಪದಿಂದ ತಮ್ಮಗಳ ಮುಂದೆ ಇಡಬೇಕೆಂದಿರುವೆನು. ಅದುವರೆಗೆ ವಾಚಕರು ಕ್ಷಮಿಸಿರಲಿ!

ರಂಗನು ಕತೆಯನ್ನು ಮುಗಿಸಿದ ಅನಂತರ ಪದ್ಮಳೆಂದಳು—"ರಂಗಾ, ನೀನೇಕೆ ಯಾವಾಗಲೂ ಭಕ್ತರ ಕತೆಗಳನ್ನೇ ಹೇಳುತ್ತಿರುವೆ? ಬೇರೆಯವನ್ನು ನುಡಿಯಬಾರದೆ?"

ನನಗೇಕೋ ಭಕ್ತಶಿರೋಮಣಿಗಳ ಕತೆಯನ್ನು ಕೇಳುವುದು ಹಾಗು ಹೇಳುವುದೆಂದರೆ ಬಹು ಪ್ರೀತಿ. ಆ ಪುಣ್ಯಪುರುಷರ ಚರಿತ್ರೆಗಳನ್ನು ಓದುವಾಗ ನನ್ನ ಎದೆಯು ಸಂತೋಷಭರಿತವಾಗುತ್ತದೆ.

"ಆದರೆ ನೀನು ಪದ್ಮಿನಿಯ ಕತೆಯನ್ನು ಕೇಳಿರುವೆಯಾ?"

"ಇಲ್ಲ."

"ಅದೆಷ್ಟು ಸುಂದರವಾಗಿದೆ! ಮಾಧವನು ನನಗೆ ಅದನ್ನು ನಿನ್ನೆ ದಿನ ಹೇಳಿದನು. ಎಷ್ಟು ವ್ಯಸನಕರವಾದ ಕತೆಯದು!"

"ಹೌದು. ಮಾಧವನಿಗೆ ಯಾವಾಗಲೂ ವೀರರಸಪ್ರಧಾನವಾದ ಕತೆಗಳೇ ಇಷ್ಟವು."

## ೭ ಪ್ರೇಮಾಂಕುರ.

ಇಲ್ಲಿ ರಂಗನ ವಿದ್ಯಾರ್ಥಿ ಜೀವನವನ್ನು ಕುರಿತು ವರ್ಣಿಸಲು ನಾನು ಉದ್ಯುಕ್ತನಾಗುವದಿಲ್ಲ. ರಂಗನ ಬಾಲ್ಯವಾಗಲಿ ವಿದ್ಯಾರ್ಥಿ ಜೀವನವಾಗಲಿ ನಮಗೆ ಪ್ರಧಾನ ಸಂಗತಿಗಳಲ್ಲ. ಅಭಿನವ ಭಾರತವನ್ನು ರಂಜಿಸುವ ಕೃತ್ಯದಲ್ಲಿ ಅವನು ವಹಿಸಿದ ಭಾಗವನ್ನು ಚಿತ್ರಿಸುವದಾಗಿದೆ ನನ್ನ ಉದ್ದೇಶವು.

ಏಳು ಸಂವತ್ಸರಗಳು ಗತಿಸಿದವು, ರಂಗನು ಬಾಲ್ಯದೆಸೆಯನ್ನು ಕಳೆದು ತಾರುಣ್ಯದಲ್ಲಿ ಪಾದಾರ್ಪಣವನ್ನು ಮಾಡಿದನು. ಅವನು ರಾಮನಗರದಲ್ಲಿ ತನ್ನ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿ, ವಿದ್ಯಾಪೀಠದ ಶಿಕ್ಷಣವನ್ನು ಹೊಂದುವದಕ್ಕಾಗಿ ಮುಂಬೈಗೆ ಗಮಿಸಿದನು. ಪದ್ಮಿನಿಯಾದರೂ ತನ್ನ ಕಿಶೋರಾವಸ್ಥೆಯನ್ನು ದಾಟಿ ಯೌವನದಲ್ಲಿ ಪ್ರವೇಶಿಸಿದಳು. ಅವಳೀಗ ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ರಾಮನಗರದ ಹೈಸ್ಕೂಲಿನಲ್ಲಿ ಪಠಿಸುತ್ತಲಿದ್ದಾಳೆ. ಸೊಬಗಿನ ನದಿಯು ಅವಳ ದೇಹದಲ್ಲಿ ಪ್ರವಹಿಸುತ್ತಲಿತ್ತು. ಅವಳ ಕೋಮಲ ದೇಹದ ನಡಿಗೆಯು ಜಲಾಶಯದಲ್ಲಿ ಹಂಸವು ಸಂಚರಿಸುವಂತೆ ಅತ್ಯಂತ ಮನೋಹರವಾಗಿದ್ದಿತು. ಯೌವನದ ಆವಿರ್ಭಾವದಿಂದ ಅವಳು ತನ್ನ ಮುಂದೆ ಹೊಸದೊಂದು ಜಗತ್ತು ನಿಂತಿದೆ, ಎಂಬುದನ್ನು ತಿಳಿದುಕೊಂಡಳು.

ಈ ಏಳು ವರ್ಷ ಕಾಲದಲ್ಲಿ ಅನಂತರಾಯರ ಕುಟುಂಬದಲ್ಲಿ ಜರುಗಿದ ಪ್ರಧಾನ ಸಂಗತಿಯು ಪದ್ಮಳ ಜನನಿಯ ನಿರ್ಯಾಣವಾಗಿದ್ದಿತು. ಪೊನ್ನಮ್ಮಳ ನಿಧನವು ಪದ್ಮಳನ್ನೂ ಆ ಕುಟುಂಬವನ್ನೂ ಶೋಕಸಾಗರಕ್ಕೆ ಈಡುಮಾಡಿತೆಂಬುದನ್ನು ಇಲ್ಲಿ ಹೇಳಬೇಕಾದುದಿಲ್ಲ; ಆದರೆ ಈ ಬೇಸಿಗೆ ಕಾಲವು ಅತ್ಯುತ್ತಮವಾದ ಔಷಧಿಯು! ಮನುಷ್ಯನು ತನ್ನ ಆಪ್ತರ ನಿಧನದಿಂದ ಶೋಕಪೀಡಿತನಾಗಿ ಅನೇಕ ಯಾತನೆಗಳನ್ನು ಅನುಭವಿಸುತ್ತಾನೆ ಆಗ ಕಾಲವು ಬಂದು ಅವನ ಕಿವಿಗಳಲ್ಲಿ ಮೆಲ್ಲನೆ ನುಡಿಯುತ್ತಿದೆ —"ಏಂ, ಮಾನವಾ! ನೀನೇಕೆ ಶೋಕಿಸುತ್ತಿರುವೆ? ಈ ಜಗತ್ತಿನ ಅವಸ್ಥೆಯೇ ಅಪಾಗಿದೆ! ನೀನು ನಡಿ, ನಿನ್ನ ಸ್ಥಾನವನ್ನು ಹೊಸತಿಗೆ ಕೊಡಬೇಕಾಗಿ ಬರುತ್ತಿದೆ." ಎಂಬುದಾಗಿ.

ಅದರಂತೆಯೇ ರಾಯರ ಕುಟುಂಬವಾದರೂ ಗೃಹನಾಯಿಕೆಯ ನಿಧನದಿಂದ ಸಂಪ್ರಾಪ್ತವಾದ ಶೋಕ-ಸಂತಾಪಗಳನ್ನು ಕೆಲವು ಕಾಲದ ನಂತರ ಪೂರ್ಣವಾಗಿ ಮರೆತು, ಹರ್ಷದ ಹಡಗಿನಲ್ಲಿ ಕುಳಿತು ಕಾಲಸಾಗರದಲ್ಲಿ ತಾನು ಮಾಡುತ್ತಿರುವ ಪ್ರವಾಸವನ್ನು ಮುಂದುವರಿಸಿತು. ಪದ್ಮಳಲ್ಲಿ ತುಂಬಿದ್ದ ಶೋಕದ ಮುಗಿಲುಗಳು ಮಾಯವಾಗಿ ಆನಂದಭಾಸ್ಕರನ ರಿಚಿಗಳು ಆ ವದನಮಂಡಲದಲ್ಲಿ ಬೆಳಕನ್ನು ಬೀರ ಲಾರಂಭಿಸಿದುವು.

ಈ ಕಾಲಘಟ್ಟದಲ್ಲಿಯೇ ರಂಗನು ರಾಮನಗರದ ಹೈಸ್ಕೂಲಿನಲ್ಲಿ ತನ್ನ ಶಿಕ್ಷಣ ವನ್ನು ಪೂರೈಸಿ ಉನ್ನತವಿದ್ಯಾಭ್ಯಾಸ ಸಾಧನೆಗಾಗಿ ಮುಂಬಯಿಗೆ ತೆರಳಿದ್ದನು. ರಂಗನು ತನ್ನನ್ನು ತ್ಯಜಿಸಿ ದೂರದ ನಗರಕ್ಕೆ ತೆರಳುವಾಗ ಪದ್ಮಳಿಗೆ ವ್ಯಸನವಾಗದೆ ಇರಲಿಲ್ಲ. ಅವನು ಮುಂಬಯಿಗಿರುವ ಉಗಿಬಂಡಿಯನ್ನು ಹತ್ತುವಾಗ ಅವನನ್ನು ಬೀಳ್ಕೊಡುವುದಕ್ಕಾಗಿ ಅವಳು ನಿಲ್ದಾಣಕ್ಕೆ ತೆರಳಿದ್ದಳು. ರಂಗನು ಗಾಡಿಯನ್ನು ಹತ್ತಿ:—"ಪದ್ಮೂ, ನಾನು ತೆರಳುವೆನು" ಎಂದು ನುಡಿಯುವಾಗ ಅವಳ ಲೋಚನ ಗಳಲ್ಲಿ ಅಶ್ರುಗಳು ತುಂಬಿದುವು. ಅವಳ ಮುಖವು ಸಪ್ಪಗಾಯಿತು.

"ಪದ್ಮೂ, ನೀನೇಕೆ ಖೇದಿಸುತ್ತಿರುವೆ? ಈಗ ತೆರಳಿದ ಮಾತ್ರದಿಂದೇನು? ಮುಂದಿನ ವರ್ಷ ರಜಾಕಾಲದಲ್ಲಿ ನಾನು ಹಿಂದಿರುಗಿ ಬರುವದಿಲ್ಲವೆ?" ಎಂದು ರಂಗನು ನಸುನಗುತ್ತಾ ನುಡಿದನು; ಆದರೆ ಪದ್ಮಳನ್ನು ತ್ಯಜಿಸಿ ತಾನು ದೂರದ ಊರಿಗೆ ತೆರಳುತ್ತೇನೆಂಬುದನ್ನು ನೆನೆಯುವಾಗ ಅವನ ಮನೋಗಗನದಲ್ಲಿ ಒಂದುಚಿಂತೆಯ ಮುಗಿಲು ತಲೆದೋರದೇ ಇರಲಿಲ್ಲ.

"ರಂಗಾ, ಹೋಗಿ ಬಾ! ನನ್ನನ್ನು ಮರೆಯಬೇಡ."

"ನಿನ್ನನ್ನು ಮರೆಯುವುದೇ! ಅದು ಸಾಧ್ಯವಿಲ್ಲ, ನನ್ನ ದೇಹದಲ್ಲಿ ಉಸಿರು ಇರುವವರೆಗೆ ಅದು ಸಾಧ್ಯವಿಲ್ಲ!" ಎಂದು ಪದ್ಮಳ ಕರಗಳನ್ನು ಹಿಡಿದುಕೊಂಡು ರಂಗನು ನುಡಿದನು.

ಗಾಡಿಯು ಹೊರಡುವದಕ್ಕಾಯಿತೆಂಬ ಸೂಚನೆಯನ್ನು ಗಾರ್ಡನು ತೋರಿಸಿದ ಹಸರು ಬಾವುಟವು ಕೊಟ್ಟಿತು. ಇನ್ನೊಂದು ನಿಮಿಷದಲ್ಲಿಯೇ ಗಾಡಿಯು 'ಖ್ಖೂ-ಖ್ಖೂ!' ಎಂದು ಭಯಂಕರವಾಗಿ ಆರ್ಭಟಿಸಿ ತನ್ನ ಪಯಣವನ್ನು ಪ್ರಾರಂಭಿಸಿತು. ಉಗಿಗಾಡಿಯು ತನ್ನ ದೃಷ್ಟಿಯಿಂದ ಮರೆಯಾಗುವವರೆಗೆ ಅದನ್ನೇ ನೋಡುತ್ತ ಪದ್ಮಳು ನಿಲ್ದಾಣದಲ್ಲಿ ನಿಂತಳು. ಅವಳಿಗೆ ಅತ್ಯಂತ ಪ್ರಿಯವಾದ ಒಂದು ವಸ್ತು ವನ್ನು ಆ ಗಾಡಿಯು ವಹಿಸಿಕೊಂಡು ತೆರಳಿದ್ದಿತು.

ಗಾಡಿಯು ತನ್ನ ದೃಷ್ಟಿಯಿಂದ ಮಾಯವಾದ ಮೇಲೆ ಪದ್ಮಳು ದೀರ್ಘವಾದ ಒಂದು ನಿಶ್ವಾಸವನ್ನು ಬಿಟ್ಟು ಮೆಲ್ಲನೆ ತನ್ನ ಗೃಹಕ್ಕೆ ಹಿಂದಿರುಗಿದಳು. ಮನೆಯು ಅವ ಳಿಗೆ ಶೂನ್ಯವಾಗಿ ತೋರಿತು, ಅವಳ ಹೃದಯದ ಒಲವಿಗೆ ಪಾತ್ರೀಭೂತವಾದ ಒಂದು ವಸ್ತುವು ಅಲ್ಲಿರಲಿಲ್ಲ. ಅದಿಲ್ಲದಿರುವುದರಿಂದ ಅವಳ ಚಿತ್ತವು ಬೇಸರವನ್ನು ಹೊಂದಿ

ಅದು ಆ ಪ್ರಿಯ ವಸ್ತುವಿನ ಹಿಂದೆಯೇ ಅತ್ಯಂತ ವೇಗವಾಗಿ ಧಾವಿಸುತ್ತಿತ್ತು.

ಅವಳು ತನ್ನ ಕೋಣೆಯೊಳಗೆ ಪ್ರವೇಶಿಸಿದಳು; ಹಲವು ಪುಸ್ತಕಗಳೂ ಕಾಗದಗಳೂ ಮೇಜಿನ ಮೇಲೆ ಅವ್ಯವಸ್ಥಿತವಾಗಿ ಬಿದ್ದಿದ್ದುವು. ಅವಳು ಅದಾವುದನ್ನೂ ನೋಡಲಿಲ್ಲ. ತನ್ನ ಆಸನದ ಮೇಲೆ ಉಪವಿಷ್ಟಳಾಗಿ ವಿಚಾರಮಗ್ನಳಾದಳು. ಹಲವು ವಿಚಾರಗಳು ಮಿಂಚಿನಂತೆ ಅವಳ ಚಿತ್ತದಲ್ಲಿ ಹೊಳೆದು ಮಾಯವಾದುವು. ಒಮ್ಮೆ ಅವಳು ತನ್ನ ಕಣ್ಣುಗಳನ್ನು ತೆರೆದು ಗೋಡೆಯ ಮೇಲಿರುವ ಒಂದು ಭಾವಚಿತ್ರದ ಕಡೆಗೆ ತನ್ನ ದೃಷ್ಟಿಯನ್ನು ಚೆಲ್ಲಿದಳು. ಅದೊಬ್ಬ ಸುಂದರಾಕಾರನಾದ ತರುಣನ ಭಾವಚಿತ್ರವಾಗಿದ್ದಿತು. ಅವಳು ಆಸನದಿಂದ ಎದ್ದು ಆ ಚಿತ್ರವನ್ನು ತೆಗೆದುಕೊಂಡಳು. ತನ್ನ ರೆಪ್ಪೆಗಳನ್ನು ಮುಚ್ಚದೆ ಆ ಭಾವಚಿತ್ರವನ್ನೇ ವೀಕ್ಷಿಸಿದಳು. ಆ ಚಿತ್ರದಲ್ಲಿರುವ ತರುಣನ ವದನಮಂಡಲದಿಂದ ಹೊರಸೂಸುತ್ತಿರುವ ಗಾಂಭೀರ್ಯವನ್ನೂ ಶಾಂತಿರಸವನ್ನೂ ಅವಳು ಸವಿದಳು. ಆ ಭಾವಚಿತ್ರವು ಆ ಹೆಣ್ಣಿ ಹೃದಯದಲ್ಲಿ ಯಾವ ಭಾವನೆಗಳನ್ನು ಸಂಜಾತವಾಗುವಂತೆ ಮಾಡಿದುವು, ಎಂಬುದನ್ನು ಇಲ್ಲಿ ವಿವರಿಸಲು ನಾನು ಅಶಕ್ಯನು. ಆ ಚಿತ್ರವನ್ನು ನೋಡುತ್ತಿದ್ದಂತೆಯೇ ಅವಳ ಮುಖವು ನಸುಗೆಂಪು ಬಣ್ಣವನ್ನು ತಾಳಿತು. ಅವಳ ನೇತ್ರಗಳಿಂದ ಒಂದು ಬಗೆಯ ಕಾಂತಿಯ ಕಿರಣಗಳು ಸ್ಫುರಿಸಿದುವು. ರೋಮಾಂಚನದಿಂದ ಅವಳ ದೇಹವು ಪುಲಕಿತವಾಯಿತು. ತನ್ನ ಅಂತರಂಗದ ಭಾವನೆಗಳನ್ನು ಅಡಗಿಸಿಕೊಳ್ಳಲು ಅವಳು ಸಮರ್ಥಳಾಗದೆ, ಆ ಭಾವಚಿತ್ರದ ಮೇಲೆ ಒಂದು ಚುಂಬನ ಮುದ್ರೆಯನ್ನು ಒತ್ತಿದಳು. ಆ ಮುದ್ರೆಯು ಚಿತ್ರದ ಮೇಲೆ ಪತಿಸಲು ತಾನು ಗೈದುದೇನೆಂಬ ವಿಚಾರವು ಅವಳಿಗೆ ಹೊಳೆದಿತು. ತನ್ನ ಸಂಯಮನದ ಲೋಪವು ಮನಸಿಗೆ ಬರಲು, ಅವಳು ಲಜ್ಜೆಯಿಂದ ಬಿಳುಪೇರಿದಳು.

ಅವಳ ಹೃದಯದಲ್ಲಿ ಜೀವನದ ಸುಧೆಯಾದ ಪ್ರಣಯವು ಹರಿದಾಡತೊಡಗಿದ್ದಿತು. ಅವಳ ಬಾಲ್ಯದ ಗೆಳೆಯನಾದ ರಂಗನಾಥನ ಮೂರ್ತಿಯು ಅವಳಿಗೆ ತಿಳಿಯದಂತೆಯೇ, ಅವಳ ಹೃದಯದಲ್ಲಿ ಸ್ಥಾನವನ್ನು ಹಿಡಿದಿದ್ದಿತು. ಪ್ರಣಯವು ಅಪಾರಶಕ್ತಿ ಸಂಪನ್ನವಾದ ಒಂದು ಜ್ಯೋತಿಯಾಗಿದೆ. ಆತ್ಮವು ತನ್ನ ಪ್ರವಾಸದಲ್ಲಿ ಒಬ್ಬ ಸಹಪಥಿಕನನ್ನು ಬಯಸುತ್ತಿರುವುದು. ಜೀವನದ ಸುಖ-ದುಃಖಗಳಲ್ಲಿ ಭಾಗವನ್ನು ವಹಿಸಿ ಬಾಳಿನಲ್ಲಿ ಬೆಳಕನ್ನು ತೋರಲು ಒಬ್ಬ ಸಂಗಡಿಗನು ಹೆಂಗಸಿಗಾಗಲಿ ಗಂಡಸಿಗಾಗಲಿ ಅತ್ಯಾವಶ್ಯಕವು. ಅನುರಾಗ ರಸದ ರುಚಿಯನ್ನು ತಿಳಿಯಲಾರದ ಮಾನವನು ತನ್ನನ್ನಾಗಲಿ ಲೋಕವನ್ನಾಗಲಿ ತಿಳಿದುಕೊಳ್ಳಲಾರನು. ಏಕೆಂದರೆ, ಈ ಸಮಸ್ತ ಲೋಕವೇ ಪ್ರೇಮವೆಂಬ ಸೂತ್ರದಿಂದ ಬಂಧಿತವಾಗಿದೆ! ಈಶ್ವರನು ಪ್ರೇಮಸ್ವರೂಪನಾಗಿರುತ್ತಾನೆ! ಪ್ರೇಮಸ್ವರೂಪನಾದ ಭಗವಂತನ ಸಾಕ್ಷಾತ್ಕಾರವು ಪ್ರೇಮ ಮಾರ್ಗದಿಂದಲ್ಲದೆ, ಇನ್ನಾವ ದಾರಿಯಿಂದಲೂ ಆಗಲಾರದು. ಪ್ರೇಮವೆಂಬುದು ಬಾಳಿನಲ್ಲಿ ಬೆಳಕನ್ನು ತೋರಿಸಲು ಬಂದ ಒಂದು ದಿವ್ಯ ಚೈತನ್ಯವಾಗಿದೆ. ಮಾನವನು ಆತ್ಮವಿಕಾಸ

ವನ್ನು ಹೊಂದಬೇಕಾದರೆ ಪ್ರೇಮಪಾಶದಿಂದ ಬಂಧಿತನಾಗಬೇಕು. ಪ್ರೇಮವಿಲ್ಲದೆ ಜೀವನವು ತನ್ನ ಗುರಿಯನ್ನು ತಿಳಿಯಲಾರದು. ಪ್ರೇಮವೆಂದರೆ ಎರಡು ಹೃದಯಗಳ ಸಂಗಮವು! ಎರಡು ಶಕ್ತಿಗಳ ಮಿಲನವು! ಹೀಗೆ ಮಾನವನು ತನ್ನ ಪ್ರೇಮವನ್ನು ಜೀವನದ ಯಾತ್ರೆಯ ಸಂಗಡಿಗಳಿಗರ್ಪಿಸಿ, ಅವರ ಆತ್ಮವನ್ನು ತಿಳಿದು, ತನ್ನ ಆತ್ಮ ಸಾಕ್ಷಾತ್ಕಾರವನ್ನು ಹೊಂದಬೇಕಾಗಿದೆ.

ಈ ವಿಶ್ವವೇ ಪ್ರೇಮಸೂತ್ರಗಳಿಂದ ಬಂಧಿತವಾಗಿದೆ, ನದಿಗಳು ಪ್ರೇಮಭರಿತವಾಗಿ ತಮ್ಮಲ್ಲಿರುವ ಜಲವನ್ನು ಸಾಗರರಾಜನಿಗೆ ಕಾಣಿಕೆಯಾಗಿ ಅರ್ಪಿಸಲು ಅತ್ಯಂತ ವೇಗದಲ್ಲಿ ಸಾಗರಾಭಿಮುಖವಾಗಿ ಧಾವಿಸುತ್ತಲಿರುವವು. ತಾರಗಳು ಕಿರುನಗೆಯನ್ನು ಸೂಸುತ್ತ ಸುಧಾಂಶುವಿನಲ್ಲಿ ತಮಗಿರುವ ಅಪಾರ ಪ್ರೇಮವನ್ನು ತೋರಿಸುತ್ತಲಿರುವವು. ಪ್ರೇಮಪೂರ್ಣನಾಗಿ ಕುರಂಗಧರನು ಧರೆಯ ಮೇಲೆ ಶುಭ್ರ ಜ್ಯೋತ್ಸ್ನವನ್ನು ವರ್ಷಿಸುತ್ತಲಿರುವನು. ಪ್ರೇಮಾರ್ದ್ರಹೃದಯನಾಗಿ ಮಾರುತನು ತಂಗಾಳಿ ಚಾಮರವನ್ನು ಬೀಸುತ್ತಲಿರುವನು. ಆ ಪ್ರೇಮಬಲದಿಂದಲೇ ಕಾಲಕ್ಕೆ ಸರಿಯಾಗಿ ಮಳೆಯನ್ನು ಪರ್ಜನ್ಯನು ವರ್ಷಿಸುತ್ತಲಿರುವನು. ಪ್ರೇಮಯಂತ್ರದ ಬಲದಿಂದಲೇ ಭೂರಮೆಯು ಸಸ್ಯಶಾಲಿನಿಯಾಗಿ ಕಂಗೊಳಿಸುತ್ತಿರುವಳು. ಪ್ರೇಮಗೀತವನ್ನೇ ಕವಿಯು ಹಾಡುತ್ತಲಿದ್ದಾನೆ. ಮುರಲೀಧರನು ಪ್ರೇಮಪೀಯೂಷವನ್ನು ನೀಡಿ ನಂದಗೋಕುಲದಗೋಪಕನ್ಯೆಯರನ್ನು ಕೃತಾರ್ಥರನ್ನಾಗಿ ಮಾಡಿದನು. ಈ ಕಾರಣದಿಂದ ಜಗತ್ತೇ ಪ್ರೇಮಮಯವಾಗಿದೆಯಲ್ಲವೆ?

ದಿನಗಳು ಗತಿಸಿದವು, ಮಧುರವಾದ ಹಲವು ಹಗಲುಗನಸುಗಳನ್ನು ಕಾಣುತ್ತ ಭಾವನಾಪ್ರಪಂಚದಲ್ಲಿ ಉಪಲಬ್ಧವಾಗಬಹುದಾದ ಆಹ್ಲಾದವನ್ನು ಸವಿಯುವದರಲ್ಲಿ ಪದ್ಮಳು ನಿರತಳಾದಳು. ಅದು ಜೀವನದಲ್ಲಿ ಅಸ್ವಾಭಾವಿಕವಲ್ಲ. ಯಾವಾಗ ಪ್ರತ್ಯಕ್ಷವಾದ ಸುಖವನ್ನು ಅನುಭವಿಸಲು ಮನುಷ್ಯನಿಗೆ ಸಾಧ್ಯವಿಲ್ಲವೋ, ಆಗ ಅವನು ಭಾವನಾಪ್ರಪಂಚದಲ್ಲಿ ಪ್ರವೇಶಿಸಿ, ಕಾಲ್ಪನಿಕ ಸುಖಗಳನ್ನು ಸವಿಯುವದರಲ್ಲಿ ನಿರತನಾಗುತ್ತಾನೆ. ಅವನ ಲೌಕಿಕ ಜೀವನದಲ್ಲಿ ಪ್ರಾಪ್ತನಾಗಬಹುದಾದ ಸಂಕಟಗಳು ಈ ಕಾಲ್ಪನಿಕ ಸುಖದ ಮುಂದೆ ಮಾಯವಾಗುವವು. ಇದರಂತೆಯೇ ಪದ್ಮಳು ತನ್ನ ಹೃದಯ ದೇಗುಲದ ದೇವನ ದರ್ಶನವಿಲ್ಲದೆ ವಿಯೋಗಾಗ್ನಿಯಿಂದ ಕಾತರಳಾಗಿರಲು, ಅವಳು ಭಾವನಾಪ್ರಪಂಚದಲ್ಲಿ ಪ್ರವೇಶಿಸಿ, ಕಲ್ಪನಾಮಯ ಆಹ್ಲಾದವನ್ನು ಸವಿಯುವುದರಲ್ಲಿ ನಿರತಳಾದಳು.

ಅದೊಂದು ದಿನ ಪದ್ಮಳು ತನ್ನ ಕೋಣೆಯಲ್ಲಿ ಕುಳಿತು ಗೋಡೆಯ ಮೇಲೆ ತೂಗಹಾಕಿರುವ ಆ ಹಳೆಯ ಚಿತ್ರವನ್ನು ನೋಡುತ್ತಾ ಯಾವುದೋ ಒಂದು ಕವನದ ಕೆಲವು ಚರಣಗಳನ್ನು ಮೃದುವಾಗಿ ಹಾಡುತ್ತಿದ್ದಳು. ಆ ಹಾಡು ಯಾವುದೆಂಬುದು ವ್ಯಕ್ತವಾಗದಿದ್ದರೂ ಅವಳ ಕಂಠನಾದದಿಂದಲೂ, ಅಸ್ಪಷ್ಟವಾದ ಶಬ್ದಗಳಿಂದಲೂ ಆ ಗೀತೆಯು ಅತ್ಯಂತ ಮನೋಹರವಾದುದೆಂಬುದು ವ್ಯಕ್ತವಾಗುತ್ತಿತ್ತು. ಕ್ರಮೇಣ ಆ

ಗೀತೆಯ ಉಚ್ಚಾರಣೆಯು ಸುಸ್ಪಷ್ಟವಾಗಿ ಕೇಳಿಬಂದಿತು. ಆ ಗೀತೆಯು ಈ ಪ್ರಕಾರ ವಾಗಿದ್ದಿತು.

ಬೇಡುವೆ ಭಿಕ್ಷೆಯ, ನೀಡಲು ದಯವು ಇಲ್ಲವೆ ನಿನಗೆ ಎನ್ನಯ ಇನಿಯ!
ಎನ್ನಯ ಗುಡಿಯಲಿ ನಿನ್ನಯ ಬಿಂಬವು ರಾಜಿಸುತಿದೆ ಎನ್ನೊಲವಿನ ನಲ್ಲ!
ಬೇಡುವೆ ಭಿಕ್ಷೆಯ ನೀಡಲು ಹೃದಯವು ಇಲ್ಲವೆ ನಿನಗೇ ಹೇಳಲೆ ನಾಥ!
ನಿನ್ನಯ ಚರಣದಿ ನೀಡುವೆಯನ್ನಯ ಕಾಣಿಕೆಯ, ಸ್ವೀಕರಿಸಲೆ ರಾಯ!
ಹಾಡುವೆ ನಾನು ನಿನ್ನಯ ಗೀತೆಯ, ನೀಡಲೆ ಗೆಳೆಯ ಪ್ರೇಮದ ಸುಧೆಯ!
ಜೀವನದ ಕಡಲಲ್ಲಿ ತೋರಲೆ ಪ್ರಿಯ ನಿನ್ನಯ ದಾಸಿಗೆ ಮುಕ್ತಿಯ ಪಥವ!

ಹಾಡನ್ನು ಅವಳು ಪೂರ್ತಿಗೊಳಿಸಿರಲಿಲ್ಲ, ಅಷ್ಟರಲ್ಲಿ ಯಾರೋ ಹಿಂದಿನಿಂದ ಬಂದು ಅವಳ ನೇತ್ರಗಳನ್ನು ಬಂಧಿಸಿದರು. ಪದ್ಮಳು ತಾನು ಹಾಡುತ್ತಿರುವ ಗೀತೆಯನ್ನು ಅಷ್ಟಕ್ಕೆ ಸಾಕು ಮಾಡಿ, ತನ್ನ ನೇತ್ರಗಳನ್ನು ಮುಚ್ಚಿರುವ ಕರಪಲ್ಲವಗಳಿಂದ ವಿಮುಕ್ತಳಾಗಲು ಉದ್ಯಮಿಸಿದಳು. ಆದರೆ ಆ ಪ್ರಯತ್ನವು ಫಲಕಾರಿಯಾಗಲಿಲ್ಲ. ಅನಂತರ ಅವಳು ಸಿಟ್ಟಿಗೆದ್ದವಳಂತೆ ನಟಿಸುತ್ತಾ ನುಡಿದಳು "ಯಾರೇ ಅದು? ಕೈ ಬಿಡು!"

ಆದರೆ ಮುಚ್ಚಿದ್ದ ಕಣ್ಣುಗಳ ಮೇಲಿನಿಂದ, ಪದ್ಮಳ ಹಿಂಬದಿಯಲ್ಲಿ ನಿಂತಿದ್ದ ವ್ಯಕ್ತಿಯು ಕರಗಳನ್ನು ತೆಗೆಯಲಿಲ್ಲ. ಆ ವ್ಯಕ್ತಿಯ ಮುಖಮಲ್ಲಿಗೆಯಿಂದ ಒಂದು ನಗೆಯು ಹೊರಸೂಸಿತು. ಪದ್ಮಳು ತನ್ನ ಲೋಚನಗಳನ್ನು ಬಂಧಿಸಿರುವ ತೋಳುಗಳನ್ನು ಹಿಡಿದುಕೊಂಡು -"ಛೇ! ಸರೋಜ, ನಿನ್ನ ಉಪದ್ರವವು ಸಾಕು! ಬಿಡು ಕೈಯನ್ನು!" ಎಂದಳು.

ಈ ನುಡಿಗಳನ್ನು ಆಶ್ರಾವಿಸಲು ಆ ವ್ಯಕ್ತಿಯು ತನ್ನ ಹಿಡಿತವನ್ನು ಸಡಿಲ ಮಾಡಿತು, ಪದ್ಮಳು ಹಿಂದಿರುಗಿ ನೋಡಿದಳು. ಅವಳ ಸಹಪಾಠಿನಿ, ಅವಳ ಗೆಳತಿ ಸರೋಜಳು ತನ್ನ ಬೆನ್ನ ಹಿಂದೆ ನಿಂತಿರುವುದನ್ನು ಪದ್ಮಳು ಕಂಡಳು.

"ಪದ್ಮೂ, ಏನೇ ಅದು? ನಾನು ಈ ಕೊಠಡಿಯೊಳಗೆ ಬಂದು. ಆಗಲೇ ಹತ್ತು-ಹದಿನೈದು ನಿಮಿಷಗಳಾದವು. ಆದರ ಭಿಕ್ಷೆಯನ್ನು ಯಾಚಿಸುವುದರಲ್ಲಿ ನಿರತಳಾಗಿದ್ದ ನಿನಗೆ ನಾನು ಬಂದುದು ತಿಳಿಯಲೇ ಇಲ್ಲ. ಅಂತ್ಯದಲ್ಲಿ ನಿನ್ನನ್ನು ಸ್ವಲ್ಪ ಬೆದರಿಸೋಣ ಅಂತ ಕಣ್ಮುಚ್ಚಿದೆನಷ್ಟೆ."

"ಹೂಂ, ಬಿಡು. ನಾನು ಯಾವ ಭಿಕ್ಷೆ ಯಾಚಿಸುತ್ತಿರುವುದನ್ನು ನೋಡಿದೆ?"

"ನಿನ್ನ ನಲ್ಲನೊಡನೆ!"

"ಸರೋಜ, ನಿನಗೇನಾದರೂ ಹುಚ್ಚು ಹಿಡಿದಿದೆಯೇ! ಇದೇನು ಅಸಂಬದ್ಧವನ್ನು ನುಡಿಯುತ್ತಿರುವೆ?"

"ಪದ್ಮೂ, ನನಗೇನೂ ಹುಚ್ಚು ಹಿಡಿದಿಲ್ಲ, ಉನ್ಮಾದವು ನಿನ್ನನ್ನು ಆವರಿಸಿದೆ!"

"ನನ್ನನ್ನು ಹುಚ್ಚಳನ್ನಾಗಿ ಮಾಡಬೇಕೆಂದಿರುವೆಯಾ?"

"ನಾನು ಮಾಡಿದರೆ ನೀನು ಹುಚ್ಚಳಾಗುವೆಯಾ? ಅದು ನಿನ್ನನ್ನೂ ಈಗಾಗಲೇ ಆವರಿಸಿವೆ!"

"ನನ್ನಲ್ಲಿ ಯಾವ ಲಕ್ಷಣವನ್ನು ನೀನು ಕಂಡುಹಿಡಿದೆ? ಬಾಯ್ಬಿಚ್ಚಿದು ಹೇಳಬಾರದೇ ಸರೋಜ?"

"ಅದನ್ನೇ ಹೇಳಬೇಕೆಂದಿರುವೆನು."

"ಹಾಗಾದರೆ ಏಕೆ ತಡಮಾಡುವೆ? ಹೇಳಿಬಿಡು."

'ಬೇಡುವೆ ಭಿಕ್ಷೆಯ ನೀಡಲು ಹೃದಯವು ಇಲ್ಲವೆ ನಿನಗೇ ಎನ್ನಯ ಇನಿಯಾ?'

"ಅವನು ನಾನು ಹಾಡಿದ ಮಾತ್ರದಿಂದ ಹೇಗೆ ಹುಚ್ಚಳಾಗುವೆನು?"

"ಅದೇ ಹೇಳುತ್ತೇನೆ, ನಿನಗೆ ನಿನ್ನ ಇನಿಯನ ಹುಚ್ಚು ಹಿಡಿದಿದೆ! ಆದುದರಿಂದಲೇ ನೀನು ಅವನೊಡನೆ ಯಾಚಿಸುತ್ತಿದ್ದೆ.

"ಹಾಡುವೆ ನಾನೂ ನಿನ್ನಯ ಗೀತೆಯ ನೀಡಲೆ ಗೆಳೆಯ ಪ್ರೇಮದ ಸುಧೆಯ!"

ಇದನ್ನು ಕೇಳುತ್ತಲೆ ಪದ್ಮಳ ಮುಖವು ನಸುಗೆಂಪು ಬಣ್ಣವನ್ನು ತಾಳಿ, ಒಂದು ಗುಲಾಬೀ ಹೂವಿನಂತೆ ಅತ್ಯಂತ ಮನೋಹರವಾಗಿ ಕಂಗೊಳಿಸಿತು. ಆ ಮುಖಮಂಡಲದಲ್ಲಿ ತನ್ನ ಅಂತರಂಗದ ರಹಸ್ಯವು ಹೊರಕ್ಕೆ ಬಂದಿತೆಂಬ ಭಯ-ಪ್ರೇಮ ಎಂಬಿತ್ಯಾದಿ ವಿವಿಧ ಬಣ್ಣಗಳು ಬೆಳಗಿದುವು. ಅವಳು ಏನನ್ನೋ ಮಾತಾಡಲು ಪ್ರಯತ್ನಿಸಿದಳು; ಆದರೆ ಅದು ಸಾಧ್ಯವಾಗಲಿಲ್ಲ. ಅವಳ ತುಟಿಗಳನ್ನು ಭೇದಿಸಿಕೊಂಡು ನುಡಿಗಳು ಹೊರಸೂಸಲಿಲ್ಲ.

"ಪದ್ಮಾ, ನೀನು ಅಧೀರಳಾಗಬೇಡ, ನಿನ್ನ ಎದೆಯ ಅಂತರಾಳದಲ್ಲಿ ಆ ರಹಸ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಿರುವ ಉದ್ಯಮವು ಫಲಕಾರಿಯಾಗಲಾರದು. ನಿನ್ನಂತೆಯೇ ನನ್ನದೂ ಹೆಣ್ಣುಹೃದಯವಾಗಿರುವುದು, ಎಂಬುದನ್ನು ನೆನಪಿನಲ್ಲಿಡು. ಈಗ ಕೆಲವು ತಿಂಗಳ ಹಿಂದೆ ರಂಗನು ಮುಂಬಯಿಗೆ ತೆರಳಿದ ಮೇಲೆ ನಿನ್ನ ಜೀವನದಲ್ಲಿ ಹಲವು ಮಾರ್ಪಾಟುಗಳುಂಟಾಗಿರುತ್ತವೆ. ಒಬ್ಬ ವಿರಹಿಣಿಯಲ್ಲಿ ಗೋಚರವಾಗುತ್ತಿರುವ ಲಕ್ಷಣಗಳೆಲ್ಲವೂ ನಿನ್ನಲ್ಲಿ ಕಂಗೊಳಿಸುತ್ತಿರುವುವು. ಅಂದರಾಯಿತು. ಇದು ನಿಜವಷ್ಟೆ?"

"ಸರೋಜ, ಹೌದು! ಯಾವುದೋ ಒಂದು ಮಾರ್ಪು ನನ್ನ ಜೀವನದಲ್ಲಿ ಸಂಭವಿಸಿದೆ. ಅದೆಲ್ಲಿಗೆ ನನ್ನನ್ನು ಒಯ್ಯುತ್ತಿದೆ, ಎಂಬುದು ಮಾತ್ರ ತಿಳಿಯದು. ನಾನೆಷ್ಟು ಪ್ರಯತ್ನಿಸಿದರೂ ಅಂಬಿಗನ ಹತೋಟಿಯನ್ನು ಮೀರಿ ತೆರಳುತ್ತಿರುವ ನೌಕೆಯಂತೆ ನನ್ನ ಮನಸ್ಸು ಯಾವುದೋ ಒಂದು ವಸ್ತುವನ್ನು ಹುಡುಕಿಕೊಂಡು ಎಲ್ಲಿಗೋ ತೆರಳುತ್ತಿರುವುದು. ನನ್ನ ವಿಚಾರ ಲೋಕದಲ್ಲಿ ಯಾವುದೋ ಒಂದು ಚಿತ್ರವು ನರ್ತಿಸುತ್ತಲಿರುವುದು. ನನ್ನಲ್ಲಿ ಉಂಟಾದ ಈ ಮಾರ್ಪಿಗೆ ಕಾರಣವೇನೆಂಬುದು ತಿಳಿಯದು."

"ತಿಳಿಯದೆ ಏನು? ಅನುರಾಗಸುರಾಪಾನದಿಂದ ನೀನು ಉನ್ಮತ್ತಳಾಗಿ ಹೋಗಿರುತ್ತಿಯೋ!"

“ಅನುರಾಗ?”

“ಹೌದು, ಅನುರಾಗವು ನಿನ್ನಲ್ಲಿ ಸದಿಂಪಾಗಿ ಪ್ರವಹಿಸುತ್ತಲಿದೆ. ನಿನ್ನ ಜೀವನದ ಭಾವೀ ಚಿತ್ರವನ್ನು ರಚಿಸುವದರಲ್ಲಿ ನೀನು ಉದ್ಯುಕ್ತಳಾಗಿರುವೆ. ಪದ್ಮಾ, ಅದು ಅನುರಾಗಶೂನ್ಯವಾದ ವನಿತೆಯ ಬದುಕು ಗಂಧವಿಲ್ಲದ ಸುಮದಂತೆ ವ್ಯರ್ಥವಾದದ್ದು! ಅನುರಾಗವೆಂದರ, ಜೀವನದಲ್ಲಿ ಬೆಳಕನ್ನು ತೋರುವ ಒಂದು ದಿವ್ಯ ಶಕ್ತಿಯು! ಈ ಜೀವನದ ಕಡಲಿನಲ್ಲಿ ನಿನ್ನ ಬಾಳಿನ ನೌಕೆಯನ್ನು ಸರಿಯಾದ ದಾರಿಯಲ್ಲಿ ಒಯ್ಯು ಲಿರುವ ಅಂಬಿಗನನ್ನು ನೀನು ಕಂಡುಹಿಡಿದಿರುವೆ!”

ಸರೋಜಳು ಶಾಲೆಯಲ್ಲಿ ಪದ್ಮಾಳ ಸಹಪಾಠಿನಿಯು! ಅವಳು ಅತ್ಯಂತ ಬುದ್ಧಿಶಾಲಿನಿಯೂ, ಸತ್ಸ್ವಭಾವದವಳೂ ಆಗಿದ್ದುದರಿಂದ ಎಲ್ಲರ ಅಕ್ಕರೆಗೂ ಪಾತ್ರಳಿದ್ದಳು. ಅವಳು ಪದ್ಮಾಳ ಜೀವನದ ಗೆಳತಿಯಾಗಿದ್ದಳು. ಪ್ರತಿದಿನವೂ ಪದ್ಮಾಳ ವಸತಿಗೆ ಬಂದು ಅವಳೊಡನೆ ಮಾತಾಡುತ್ತಲೂ ಆಡುತ್ತಲೂ ಹೊತ್ತನ್ನು ಕಳೆಯುತ್ತಿದ್ದಳು.

ದಿನಗಳು ಕಳೆದುವು, ತನ್ನ ವ್ಯಾಸಂಗದಲ್ಲಿ ವಿಜಯವನ್ನು ಹೊಂದಿ ರಂಗನು ಹಿಂದಿರುಗಿ ಬರುವನೆಂಬ ವಾರ್ತೆಯು ತಂತಿಯ ಮೂಲಕ ಪದ್ಮಾಳಿಗೆ ತಿಳಿದು ಬಂದಿತು. ಅವಳ ಹೃದಯವು ಹರ್ಷಭರಿತವಾಯಿತು, ಆತ್ಮಪಕ್ಷಿಯು ಉಲ್ಲಾಸದಿಂದ ಹಾರ ತೊಡಗಿತು, ಏಕೆಂಬುದನ್ನು ಮಾತ್ರ ಅವಳು ಬಲ್ಲವಳಲ್ಲ. ರಂಗನು ಸ್ವದೇಶಕ್ಕೆ ಹಿಂದಿರುಗಿ ಬರುವುದಾದರ ತಾನೇಕೆ ಹರ್ಷದಿಂದ ಹಿಗ್ಗಬೇಕು? ಎಂಬುದನ್ನು ಅವಳು ತಿಳಿದುಕೊಳ್ಳಲಿಲ್ಲ. ಅವಳ ಹೃದಯದ ಅಂತರಂಗದಲ್ಲಿ ಅಡಗಿರುವ ಯಾವುದೋ ಒಂದು ಶಕ್ತಿಯು ಅವಳನ್ನು ಗಾಳಿತುಂಬಿದ ಚೆಂಡಿನಂತೆ ಹಿಗ್ಗಲು ಪ್ರೇರೇಪಿಸಿತು. ತನ್ನಿಂದ ಇದುವರೆಗೆ ಅಗಲಿದ್ದ ಒಂದು ಅಮೂಲ್ಯವಾದ ರತ್ನವು ಈಗ ತನ್ನ ದರ್ಶನಕ್ಕಾಗಿ ಹಿಂದಿರುಗಿ ಬರುತ್ತಿದೆ, ಯೆಂಬ ಸ್ಮರಣೆಯು ಅವಳ ಸ್ಮೃತಿಪಥದಲ್ಲಿ ಒರಲು, ಅವಳ ಶರೀರವು ಹರ್ಷಪುಲಕಿತವಾಯಿತು. ಹೌದು, ಅವಳು ಅರಿಯದಿದ್ದರೂ ಅವಳ ಆತ್ಮಪಕ್ಷಿಯು ತನ್ನ ಸಹಪಥಿಕನನ್ನು ಕಂಡುಹಿಡಿದು ಅವನ ದರ್ಶನಕ್ಕಾಗಿ ಕಾತರಿಸುತ್ತಿತ್ತು. ಮೂರು-ನಾಲ್ಕು ವರ್ಷಗಳ ಕಾಲ ತನ್ನಿಂದಗಲಿರುವ ತನ್ನ ಗೆಳೆಯನು ತನ್ನಲ್ಲಿಗೇ ಬರುತ್ತಿರುವನೆಂಬುದನ್ನು ತಿಳಿಯಲು ಪಕ್ಷಿಯ ಜೀವವು ಉಲ್ಲಾಸಭರಿತವಾಯಿತು.

ವಿದ್ಯಾರ್ಜನೆಗಾಗಿ ಮುಂಬಯಿಗೆ ತೆರಳಿದ್ದ ರಂಗನಾಥನು ಕಳೆದ ಮೂರು ವರ್ಷ ಕಾಲದಿಂದ ಸ್ವದೇಶಕ್ಕೆ ಹಿಂದಿರುಗಿರಲಿಲ್ಲ. ಅವನು ತನ್ನ ವಿದ್ಯಾಲಯದ ರಜಾ ವೇಳೆಯನ್ನು ಸಹ ಪಾಠನೆಗಾಗಿಯೋ ಅಥವಾ ದೇಶ ಪರ್ಯಟನಕ್ಕಾಗಿಯೋ ವಿನಿಯೋಗಿಸಿದ್ದನು. ರಂಗನು ಸಮಗ್ರಭಾರತವರ್ಷದಲ್ಲೆಲ್ಲ ಸಂಚರಿಸಿ ತನ್ನ ತಾಯ್ನಾಡಿನ ವಿವಿಧ ಪ್ರಾಂತಗಳ ಪರಿಚಯವನ್ನು ಸಂಪಾದಿಸಿದ್ದನು. ವಿವಿಧ ಭಾಷೆಗಳ, ವಿವಿಧ ಸಂಸ್ಕೃತಿಗಳ ಭೂಮಿಯಾದ ಭಾರತವರ್ಷದಲ್ಲಿ ಅಖಂಡವಾದ ಒಂದು ಶಕ್ತಿಯು ಬದರೀನಾಥದಿಂದ ಕನ್ಯಾಕುಮಾರಿಯವರೆಗೆ ತಾಂಡವವಾಡುತ್ತಿರುವುದನ್ನು ಅವನು ದರ್ಶಿಸಿದ್ದನು.

ಭಾರತವರ್ಷವು,-ಒಂದು ಕಾಲದಲ್ಲಿ ಸಕಲ ಕಲೆಗಳ ನೆಲೆವೀಡಾಗಿ ಸುಸಂಸ್ಕೃತವೆನಿಸಿದ್ದ ನಾಡು,-ಇಂದು ಛಿನ್ನಭಿನ್ನವಾಗಿ ಪರಕೀಯರ ದಾಸ್ಯದಲ್ಲಿ ಸಿಲುಕಿ ಚಕ್ರಶ್ವಾಸವನ್ನು ಬಿಡುತ್ತಿರುವ ಚಿತ್ರವು ರಂಗನ ನಯನಗಳ ಮುಂದೆ ತಾಂಡವವಾಡಿತು. ಬಲಶಾಲಿಗಳೂ ಸ್ವಾತಂತ್ರ್ಯಪ್ರೇಮಿಗಳೂ ಜೀವಿಸಿದ ನಾಡಿಂದು ಸತ್ವಶೂನ್ಯರಾದ ಹೇಡಿಗಳ ಮನೆಯಾಗಿ ಪರಿಣಮಿಸಿದೆ. ಅವನು ಭಾರತವರ್ಷದ ಶೋಚನೀಯ ಅವಸ್ಥೆಯನ್ನು ವೀಕ್ಷಿಸಿದಾಗ,

ಎಲ್ಲಿ ಶೌರ್ಯ ಸಂಜೀವನದ ನದಿ ಹರಿದಿತೋ,
ಎಲ್ಲಿ ಸ್ವಾತಂತ್ರ್ಯದ ಜ್ಯೋತಿಯದು ಬೆಳಗಿತೋ,
ಎಲ್ಲಿ ಕಲೆಗಳ ಹೊಳೆಗಳು ಪ್ರವಹಿಸಿದುವೋ,
ಅಲ್ಲಿಂದು ಕತ್ತಲೆಯು ಕವಿದಿತೇ!''

ಎಂಬ ಪದ್ಯವು ಅವನ ನೆನಪಿಗೆ ಬಂದಿತು. ಅದರಂತೆಯೇ,

'ಭರತಮಾತೆಯೆ, ಭರತಮಾತೆಯೆ, ಎಂದು ನೀ ತಲೆಯೆತ್ತುವೆ?'

ಎಂದು ಗದ್ಗದ ಕಂಠದಿಂದ ಹೊರಟ ಶೋಕಾಲಾಪವು ಅವನ ಎದೆಯಿಂದ ಹೊರಸೂಸಿತು. ಛಿನ್ನಭಿನ್ನವಾಗಿ ದಾಸ್ಯನಿದ್ರೆಯಲ್ಲಿ ಬಿದ್ದಿರುವ ಭಾರತವರ್ಷವು ಜಾಗೃತಿಯನ್ನು ಹೊಂದಬಲ್ಲುದೆ? ಪ್ರಾಚೀನ ಕಾಲದಲ್ಲಿ ವಿಶ್ವಕ್ಕೆ ತನ್ನ ದಿವ್ಯ ಸಂದೇಶವನ್ನು ಬೀರಿದ ಭಾರತವರ್ಷವು ಪುನಃ ಎಚ್ಚತ್ತು ಜಗತ್ತಿಗೆ ಹೊಸದೊಂದು ಮಂತ್ರವನ್ನು ನೀಡಬಲ್ಲುದೆ? ಪಕ್ವಯದಿಂದ ಆಧುನಿಕ ಭಾರತವು ಆವಿರ್ಭವಿಸಬಲ್ಲುದೆ? ಎಂಬಿತ್ಯಾದಿ ವಿವಿಧ ಚಿಂತೆಗಳು ಅವನನ್ನು ಆವರಿಸಿದುವು.

ಈ ತೀರ್ಥಾಟನವು,-ಹೌದು, ಅವನ ಪ್ರವಾಸವು ಒಂದು ತೀರ್ಥಯಾತ್ರೆಯಾಗಿದ್ದಿತು,-ಅವನ ಹೃದಯದಲ್ಲಿ ಹೊಸದೊಂದು ಬೆಳಕು ಹುಟ್ಟುವಂತೆ ಮಾಡಿತು. ಭಾರತವರ್ಷದಲ್ಲಿ ಸರ್ವತ್ರ ಹರಡಿರುವ ದಾರಿದ್ರ್ಯ, ಅಜ್ಞಾನ, ಅಂಧ ವಿಶ್ವಾಸ, ಮದಾಂಧತೆ ಎಂಬಿತ್ಯಾದಿ ಕರಾಳ ರೂಪದ ರಾಕ್ಷಸರನ್ನು ಅವನು ಕಂಡನು. ಜನಸಾಮಾನ್ಯರು ಜೀವನದ ಬೆಲೆಯನ್ನು ತಿಳಿಯದೆ ಕೇವಲ ಉದರಂಭರಣಕ್ಕಾಗಿ ಹೆಣಗುತ್ತಿರುವ ಭಯಂಕರ ಚಿತ್ರಗಳನ್ನು ಅವನು ಅವಲೋಕಿಸಿದನು. ಇಂದಿನ ಭಾರತವರ್ಷವು ಪ್ರಾಚೀನ ಕಾಲದಂತೆ ಸುಖಸಂಪತ್ತುಗಳಿಂದ ನಿಬಿಡವಾಗಿಲ್ಲ; ಶಾಂತಿಯ ನಿಕೇತನವು ಅದಲ್ಲ. ವಿಶ್ವಕ್ಕೆ ಆಧ್ಯಾತ್ಮಿಕ ಸಂದೇಶವನ್ನು ಬೀರಲು ಶಕ್ತರಾದ ಯೋಗಿರಾಜರಿಲ್ಲ! ಭಾರತವರ್ಷವು ಅಜ್ಞತೆ, ಬಲಹೀನತೆ, ನೈತಿಕ ಅಧಃಪತನ ಇವುಗಳಿಂದ ಬಳಲುತ್ತಿದೆ, ಎಂಬ ಸತ್ಯವನ್ನು ಅವನು ತಿಳಿದನು.

ಏನೇ ಇರಲಿ, ಈ ಕಾಲದಲ್ಲಿ ರಂಗನ ಹೃದಯದಲ್ಲಿ ರಾಷ್ಟ್ರೀಯ ಬೋಧವು ಸಂಜಾತವಾಯಿತು. ಭಾರತೀಯನು ತಾನು, ಭಾರತವರ್ಷದ ಅಭ್ಯುದಯವೇ ತನ್ನ ಅಭ್ಯುದಯವೆಂಬ ತತ್ವವು ಅವನಲ್ಲಿ ಬೇರೂರಿತು. ಇದಕ್ಕೆ ಕಾರಣೀಭೂತನು ಅವನ ಗೆಳೆಯನಾದ ಮಾಧವನೆಂದರೆ ತಪ್ಪಾಗಲಾರದು. ಮಾಧವನಾದರೂ ನ್ಯಾಯ

ವಾದಿಯಾಗಲು ಮುಂಬೈಯ ವಿದ್ಯಾಲಯದಲ್ಲಿ ಪಠಿಸುತ್ತಲಿದ್ದನು. ಈ ಸಂದರ್ಭ ದಲ್ಲಿ ಅವನು ತನ್ನ ಗೆಳೆಯನೊಡನೆ ಭಾರತವರ್ಷದ ಸಧ್ಯದ ದುರವಸ್ಥೆಯನ್ನು ಕುರಿತು ಮಾತಾಡುತ್ತಿದ್ದನು. ಪಾರತಂತ್ರ್ಯದಿಂದ ಭಾರತವರ್ಷದ ಜೀವಜ್ಯೋತಿಯು ಹೇಗೆ ಲೀನವಾಗ್ತುದೆ, ಎಂಬುದನ್ನು ಅವನು ರಂಗನಿಗೆ ವಿವರಿಸುತ್ತಿದ್ದನು. ಹೀಗೆ ದೇಶಾಭಿ ಮಾನಿಯಾದ ಗೆಳೆಯನ ಸಹವಾಸದಿಂದಲೂ ತನ್ನ ದೇಶಾಟನೆಯಲ್ಲಿ ಅವನು ಪ್ರತ್ಯಕ್ಷ ವಾಗಿ ನೋಡಿದ ಚಿತ್ರಗಳಿಂದಲೂ ರಂಗನ ಹೃದಯದಲ್ಲ ದೇಶೀಯ ಬೋಧವು ಬೇರೂರಿತು.

ಇದಲ್ಲದೆ ಮುಂಬೈಯಂಥ ನಗರಜೀವನವು ರಾಷ್ಟ್ರಾಭಿಮಾನವು ಸಂಜಾತ ವಾಗುವಂತೆ ಮಾಡುತ್ತದೆ, ಎಂದರೆ ತಪ್ಪಾಗಲಾರದು. ಆ ಕಾಲದ ಸ್ವಾತಂತ್ರ್ಯ ಯೋಧರಲ್ಲಿ ಅಗ್ರೇಸರರಾದ ಲೋಕಮಾನ್ಯ ತಿಲಕರ ಉಜ್ವಲವಾದ ಭಾಷಣಗಳನ್ನು ಹಲವು ಸಾರೆ ಅವನು ಆಶ್ರಾವಿಸಿದ್ದನು. ಅವರ "ಕೇಸರಿ"ಯ ಗರ್ಜನೆಯು ಅವನನ್ನು ಜಾಗೃತಗೊಳಿಸಿತು. ಈ ಎಲ್ಲ ಕಾರಣಗಳಿಂದ ಅವನು ಸ್ವದೇಶಾಭಿಮಾನದಿಂದ ತುಂಬಿ ತುಳುಕುತ್ತಿರುವ ಒಬ್ಬ ತರುಣನಾಗಿ ಪರಿಣಮಿಸಿದನು.

ಅವನು ಮುಂಬಯಿ ವಿದ್ಯಾಪೀಠದಿಂದ ಎಂ. ಎ. ಬಿರುದನ್ನು ಸಂಪಾದಿಸಿದ ಅನಂತರ ತಾನಿನ್ನು ನಗರದಲ್ಲಿ ಜೀವಿಸುವದು ಅನಾವಶ್ಯಕವೆಂದೂ, ತನ್ನ ಕಾರ್ಯರಂಗವು ತನ್ನ ಸ್ವಂತ ಊರಾಗಿವೆಯೆಂದೂ ತಿಳಿದುಕೊಂಡನು. ಆದರೆ ತಾನು ಯಾವ ರೀತಿ ಯಲ್ಲಿ ನಾಡಿನ ಏಳಿಗೆಗಾಗಿ ಪ್ರಯತ್ನಿಸಬೇಕೆಂಬ ನಿರ್ಧಾರಕ್ಕೆ ಅವನು ತಲುಪಿರಲಿಲ್ಲ. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿದ್ದ ನಾಯಕರು ತರುಣರನ್ನು ರಾಷ್ಟ್ರದೇಳಿಗೆ ಗಾಗಿ ಯತ್ನಿಸಬೇಕೆಂದು ಉಪದೇಶಿಸುತ್ತಿದ್ದರಲ್ಲದೆ, ಯಾವ ರೀತಿಯಲ್ಲಿ ಪ್ರಯತ್ನಿಸ ಬೇಕೆಂಬ ದಾರಿಯನ್ನು ತೋರಿಸುತ್ತಿರಲಿಲ್ಲ.

ಪದ್ಮಳು ರಂಗನ ಆಗಮನವನ್ನು ನಿರೀಕ್ಷಿಸುತ್ತ ದಿನಗಳನ್ನು ಕಳೆಯುತ್ತಲಿದ್ದಳು. ಒಂದೊಂದು ದಿನವೂ ಅವಳಿಗೆ ಒಂದೊಂದು ಯುಗವಾಗಿ ತೋರುತ್ತಿತ್ತು. ಅವನನ್ನು ನೆನೆಯುವಾಗ ಅವರ ಬಾಲ್ಯದ ಸ್ಮರಣೆಗಳು ಅವಳ ಸ್ಮೃತಿಪಥದಲ್ಲಿ ಬಂದವು. ರಂಗ ನು ಅವಳ ಜೀವನಸರ್ವಸ್ವನಾಗಿದ್ದನು.

ಆ ದಿನವು ಬಂದಿತು; ಅನಂತರಾಯರೇ ರಂಗನನ್ನು ಕರೆದೊಯ್ಯುವದಕ್ಕಾಗಿ ಸ್ಟೇಶನಕ್ಕೆ ಬಂದಿದ್ದರು. ಅವರ ಕೃತ್ಯವು ರಂಗನ ಮೇಲೆ ಎಷ್ಟು ಅಪಾರವಾದ ಮಮತೆಯಿದೆಯೆಂಬುದನ್ನು ಸೂಚಿಸುತ್ತಲಿದ್ದಿತು. ರಂಗನು ಒಂದು ಮೂರನೇ ತರಗತಿಯ ಗಾಡಿಯಿಂದ ಮಾಧವನೊಡನೆ ಇಳಿದನು. ವಿದ್ಯಾಪೀಠದ ಬಿರುದನ್ನು ಹೊಂದಿ ಮನೆಗೆ ಸಡಗರದಿಂದ ಹಿಂದಿರುಗಿ ಬರುತ್ತಿರುವ ರಂಗನು ತನ್ನ ಪಯಣವನ್ನು ಒಂದು ಮೂರನೇ ತರಗತಿಯ ಗಾಡಿಯಲ್ಲಿ ಕುಳಿತು ಮಾಡಿದುದನ್ನು ನೋಡಿ ರಾಯರು ಅದ್ಭುತಪರತಂತ್ರರಾಗಿ ಹೋದರು. ಒಂದು ವೇಳೆ ಹಣದ ಅಡಚಣಿ ಯಿಂದ ಅವನು ಆ ರೀತಿ ವರ್ತಿಸಿರಬಹುದೆಂದು ರಾಯರು ತರ್ಕಿಸಿದರು; ಆದರೆ

ಅವನ್ನು ಅವನು ತಮಗೆ ತಿಳಿಸಬಹುದಾಗಿದ್ದಿತಲ್ಲ! ಅವನ ಸುಖ-ಸೌಕರ್ಯಗಳಿಗೆ ಯಾವ ಲೋಪವೂ ಬಾರದಂತೆ ತಾವು ಇಷ್ಟು ಜಾಗ್ರತೆಯನ್ನು ತೆಗೆದುಕೊಳ್ಳುತ್ತಿರುವಾಗ, ಈರೀತಿಯ ತೊಂದರೆಗಳನ್ನು ತೆಗೆದುಕೊಳ್ಳುವುದು ಸರಿಯೇ, ಎಂದು ಅವರು ತಮ್ಮೊಳಗೆ ತಾವೇ ನುಡಿದುಕೊಂಡರು.

ರಂಗನು ಉಗಿಬಂಡಿಯಿಂದಿಳಿದು, ವಿನಯದಲ್ಲಿ ರಾಯರಿಗೆ ನಮಸ್ಕರಿಸಿದನು.

"ರಂಗಾ, ಸೌಖ್ಯದಲ್ಲಿರುವೆಯಾ?" ಎಂದು ರಾಯರು ಕುಶಲಪ್ರಶ್ನೆಯನ್ನು ಮಾಡಿದರು. ಅನಂತರ ಮಾಧವನೊಡನೆ, "ಏನೋ ಮಾಧು! ನಿನ್ನನ್ನು ನೋಡಿದರೆ ಗುರುತೇ ಸಿಗೋಲ್ಲ. ಎಷ್ಟು ಮಜಬೂತಾಗಿ ಬೆಳೆದಿರುತ್ತಿಯೇ! ಸುಖವಾಗಿದ್ದಿಯಾ?"

"ತಮ್ಮ ದಯದಿಂದ" ಎಂದನು ಮಾಧವನು.

"ತಮಗೆ ಸೌಖ್ಯವೇ? ಪದ್ಮಳು ಹೇಗಿದ್ದಾಳೆ?" ಎಂದು ತನ್ನ ಪಾಲಕನ ಕ್ಷೇಮ ವಾರ್ತೆಯನ್ನು ತಿಳಿಯಲು ಉತ್ಸುಕನಾದ ರಂಗನು ಪ್ರಶ್ನಿಸಿದನು.

"ಈಶ್ವರಕಟಾಕ್ಷದಿಂದ ನಾವೆಲ್ಲರೂ ಕ್ಷೇಮದಲ್ಲಿಯೇ ಇರುತ್ತೇವೆ. ಹೋಗೋಣವೆ? ಪದ್ಮಳಂತೂ ನಿನ್ನ ಆಗಮನವನ್ನೇ ನಿರೀಕ್ಷಿಸಲಿರುವಳು. ಹೊರಗೆ ಗಾಡಿಯು ಕಾದು ನಿಂತಿದೆ."

ಮೂವರೂ ನಿಲ್ದಾಣದಿಂದ ಹೊರಗೆ ಬಂದರು. ಹತ್ತಿರ ನಿಂತಿದ್ದ ಒಂದು ಜಟ್ಕಾಗಾಡಿಯನ್ನು ಅವರು ಹತ್ತಿದರು. ಅವರು ಆ ವಾಹನದಲ್ಲಿ ಆಸೀನರಾದೊಡನೆಯೇ ಅದರ ಸಂಚಾಲಕನು ಗಾಡಿಯನ್ನು ಓಡಿಸಲಾರಂಭಿಸಿದನು. ರಾಯರು ತಮ್ಮ ಆಸನದಲ್ಲಿ ಕುಳಿತುಕೊಂಡು ಹೇಳಿದರು.—"ರಂಗಾ, ಅದೇಕೆ ನೀವಿಂದು ಮೂರನೆಯ ದರ್ಜೆಯ ಗಾಡಿಯಲ್ಲಿ ಪ್ರಯಾಣ ಮಾಡಿದಿರಿ?"

ರಂಗನು ಪ್ರತ್ಯುತ್ತರವನ್ನು ನೀಡುವುದಕ್ಕೆ ಮುಂಚೆಯೇ ಮಾಧವನು ನಡುವೇ ಬಾಯಿ ಹಾಕಿ ಹೇಳಿದನು:—"ರಾಯರೇ, ಹಣದ ಅಡಚಣೆಯಿಂದಲ್ಲ ನಾವು ಆ ರೀತಿ ವರ್ತಿಸಿದುದು. ನಮ್ಮ ನಾಡಿನ ಇಂದಿನ ಪರಿಸ್ಥಿತಿಯು ನಮ್ಮನ್ನು ಆ ರೀತಿ ವರ್ತಿಸುವಂತೆ ಪ್ರೇರೆಪಿಸಿತು."

"ನೀವು ಹೇಳುವುದು ನನಗೆ ತಿಳಿಯುವುದಿಲ್ಲ."

"ರಾಯರೆ, ನಮ್ಮ ತಾಯ್ನಾಡಿಂದು ದರಿದ್ರಳು, ಕೋಟ್ಯಾವಧಿ ಜನರು ಒಂದು ನೇರದ ಕೂಳಿಗೆ ಗತಿಯಿಲ್ಲವೆ ನರಳುತ್ತಿರುವರು. ಅಜ್ಞಾತೆಯ ಅಂಧಃಕಾರದಲ್ಲಿ ಜನತೆಯು ಬಿದ್ದಿರುವುದು. ಹೀಗಿರುವ ಸಂದರ್ಭದಲ್ಲಿ ವಿದ್ಯಾವಂತನೆನಿಸಿಕೊಳ್ಳುವ ಪ್ರತಿಯೊಬ್ಬ ಭಾರತೀಯನೂ ತನ್ನ ರಾಷ್ಟ್ರದ ಅಭ್ಯುನ್ನತಿಗಾಗಿ ಹಣಗುವುದು ಅವನ ಕರ್ತವ್ಯವಾಗಿದೆ. ತನ್ನ ತಾಯ್ನಾಡಿನ ಜೀವನವು ಶೋಭಾಯಮಾನವಾಗಿ ಪರಿಣಮಿಸುವ ಪರ್ಯಂತ ತನ್ನ ಸುಖ-ಸೌಕರ್ಯಗಳಿಗೆ ತಿಲಾಂಜಲಿಯನ್ನಿತ್ತು ಅವನ ನಾಡಿನ ಹಿತಕ್ಕಾಗಿ ಹೆಣಗಬೇಕಾಗಿದೆ. ಮನೆಗೆ ಬೆಂಕಿ ಹಿಡಿದಿದೆ! ಇದು ನಿದ್ರೆಗೂ ಉಲ್ಲಾಸಕ್ಕೂ ತಕ್ಕ ವೇಳೆಯಲ್ಲ!"

"ನೀವು ಇಂದು ಕೆಲವು ಕಷ್ಟಗಳನ್ನು ಅನುಭವಿಸಿದ ಮಾತ್ರದಿಂದ ನಾಡಿನ ದುರವಸ್ಥೆಯು ನಾಶವಾಗುವುದೇ?"

"ಅದೇನೂ ಇಲ್ಲ, ಆದರೆ ಲಘುಜೀವನ, ಕಷ್ಟಸಹಿಷ್ಣುತೆ ಇವುಗಳನ್ನು ನಾವು ಕಲಿಯಬೇಕಾಗಿದೆ! ನಮ್ಮಲ್ಲಿರುವ ಸಕಲ ಶಕ್ತಿಗಳನ್ನು ಸಂಗ್ರಹಿಸಿ ಅವುಗಳನ್ನು ನಾಡಿನ ಹಿತಕ್ಕಾಗಿ ವಿನಿಯೋಗಿಸಬೇಕಾದ ಕಾಲಘಟ್ಟವು ಬಂದಿರುವುದು. ವಿದ್ಯಾವಂತ ರೆನಿಸಿಕೊಳ್ಳುವ ನಾವಿಂದು ಜನಸಾಮಾನ್ಯರ ಸುಖ-ದುಃಖಗಳಲ್ಲಿ ಭಾಗವನ್ನು ವಹಿಸಿ, ಜನತೆಯ ಮಧ್ಯದಲ್ಲಿ ಹರಡಿರುವ ಅಜ್ಞಾನತೆಯನ್ನು ಹೋಗಲಾಡಿಸಿ ಸ್ವಾವಲಂಬನೆಯ ದಾರಿಯನ್ನು ತೋರಿಸಿಕೊಡಬೇಕಾಗಿದೆ. ಏನು ಹೇಳುತ್ತಿರುವೆ ರಂಗಾ, ಈಸಂಗತಿ ಯನ್ನು ಕುರಿತು?" ಎಂದು ನ್ಯಾಯವಾದಿಯ ಸ್ವಭಾವಕ್ಕೆ ಅನುಸಾರವಾಗಿ ಒಂದು ದೀರ್ಘವಾದ ಭಾಷಣವನ್ನು ಮಾಡಲು ಹೊರಟವನಂತೆ ಮಾಧವನು ನುಡಿದನು.

"ಹೌದು, ಮಿತವ್ಯಯ ಮತ್ತು ಲಘಜೀವನ ಇವುಗಳು ಅತ್ಯಾವಶ್ಯಕವು. ಈ ಎರಡು ಗುಣಗಳಿಲ್ಲದ ಮನುಷ್ಯನು ಯಾವುದನ್ನೂ ಸಾಧಿಸಲಾರನು."

"ಒಳ್ಳೇದು, ನೀವಿನ್ನೂ ತರುಣರು. ಈ ರೀತಿಯ ಹೊಸ ಹೊಸ ಸಿದ್ಧಾಂತಗಳು ನಿಮ್ಮ ಬುದ್ಧಿಗೆ ತೋಚುವದು ಸ್ವಾಭಾವಿಕವೇ ಆಗಿರುತ್ತದೆ. ಇರಲಿ. ಮಾಧೂ, ನೀನೊಬ್ಬ ನ್ಯಾಯವಾದಿಯಾಗಿ ಕೈತುಂಬ ಹಣವನ್ನು ಸಂಪಾದಿಸುತ್ತಿರುವಾಗ ಈ ನಿನ್ನ ಆದರ್ಶವು ಎಷ್ಟರವುಟ್ಟಿಗೆ ಕಂಗೊಳಿಸುತ್ತಿರುವದು, ಎಂಬುದನ್ನು ನಾನು ನೋಡು ತ್ತೇನೆ" ಮುದುಕ ಜಮೀನದಾರನು ಮಾಧವನ ಬೆನ್ನು ತಟ್ಟುತ್ತಾ ನುಡಿದನು.

"ರಾಯರೇ, ನನ್ನ ಕೈಲಾದಮಟ್ಟಿಗೆ ನಾಡಿನ ಅಭ್ಯುನ್ನತಿಗಾಗಿ ಉದ್ಯಮಿಸಬೇ ಕೆಂದು ನಾನು ಸಂಕಲ್ಪಿಸಿರುತ್ತೇನೆ."

"ಸಂಸಾರ ಚಕ್ರದಲ್ಲಿ ಸಿಲುಕಿನೊಡನೆಯೇ ನಿನ್ನ ಸಂಕಲ್ಪವು ಗಾಳಿಯ ಗೋಪುರ ವಾಗುವುದು!" "ಎಂದಿಗೂ ಇಲ್ಲ!"

ಈ ವೇಳೆಯಲ್ಲಿ ಗಾಡಿಯು ರಾಯರ ನಿಲಯದ ಮುಂದೆ ನಿಂತಿತು. ಮೂವರೂ ಗಾಡಿಯಿಂದಿಳಿದು ಮನೆಯೊಳಗೆ ಪ್ರವೇಶಿಸಿದರು. ರಂಗನ ದರ್ಶನದಿಂದ ಪದ್ಮಳ ಬಾಡಿದ್ದ ವದನಮಲ್ಲಿಗೆಯು ಅರಳಿತು!

---

# ೭ ಪ್ರೇಮ ಮೀಲನ.

ಅದೊಂದು ತಳಿರುಮನೆ, ಬೇಸಗೆ ಕಾಲದಲ್ಲಿ ತಳಿರುಮನೆಯ ನೆರಳಿನಲ್ಲಿ ಹೊತ್ತು ಕಳೆಯುವುದು ಅತ್ಯಂತ ಹರ್ಷದಾಯಕವು. ಹಲವು ವಿಧ ಹೂಗಿಡಗಳಿಂದ ಅಲಂಕೃತ ವಾದ ಆ ಪ್ರದೇಶವು ಪ್ರಕೃತಿದೇವತೆಯ ದೇಗುಲದಂತೆ ಪರಿಶೋಭಿಸುತ್ತಿದೆ. ಒಂದು ಲತಾಗೃಹದಲ್ಲಿ ಸುಂದರಿಯೊಬ್ಬಳು ಉಪವಿಷ್ಟಳಾಗಿರುವ ಚಿತ್ರವೊಂದು ಕಂಗೊಳಿಸು ತ್ತಿರುವುದು. ಸಂಧ್ಯಾಕಾಲದ ಸಮೀರನು ಲತಾಗ್ರಹದ ಸೊಬಗನ್ನು ನೋಡಿ ಆಸ್ವಾದಿ ಸುತ್ತಲಿರುವನು.

ಒಂದು ಶಿಲಾಸನದ ಮೇಲೆ ಕುಳಿತು ಸುಂದರಿಯೊಬ್ಬಳು ಹಾಡುತ್ತಿದ್ದಳು. ಅವಳ ಕಂಠದಿಂದ ಹೊರಸೂಸುತ್ತಿರುವ ಮೋಹನ ಗಾನವು ಸುತ್ತುಮುತ್ತಲಿನ ತರುಲತೆಗಳಿಗೆ ಆನಂದ ಸಂದೇಶವನ್ನು ಪ್ರದಾನಮಾಡುತ್ತಲಿತ್ತು. ಅವಳ ಆತ್ಮವು ಗಾನ ರಸದಲ್ಲಿ ತಲ್ಲೀನವಾಗಿ ಜೀವನದ ಸುಧೆಯನ್ನು ಈಂಟುತ್ತಿದ್ದಿತು. ಅವಳು ಈ ರೀತಿ ಸಂಗೀತದಲ್ಲಿ ತಲ್ಲೀನಳಾಗಿರುವಾಗ ಅವಳ ಹಿಂದೆ ಬಂದು ನಿಂತು ಒಬ್ಬ ತರುಣನು ತದೇಕ ಮಾನಸನಾಗಿ ಆ ಗಾನವಾಹಿನಿಯಲ್ಲಿ ಮುಳುಗಿ ಆನಂದ ಮಗ್ನನಾಗಿದ್ದನು. ಅವನ ಆತ್ಮಪಕ್ಷಿಯು ಸಂಗೀತ ಚೈತನ್ಯದಿಂದ ಅತ್ಯಂತ ಹಗುರಾಗಿ ಹಾರಾಡುತ್ತಿದ್ದಿತು.

ಹೀಗೆ ಕೆಲವು ನಿಮಿಷಗಳು ಗತಿಸಿದುವು, ಯುವತಿಯು ತನ್ನ ಹಾಡನ್ನು ನಿಲ್ಲಿಸಿದಳು. ಮೃದುವಾದ ಸ್ವರದಲ್ಲಿ ತರುಣನು ಅಂದನು:-"ಪದ್ಮಾ!"

ಇನಿಯನ ಚಿರಪರಿಚಿತ ಆ ಮೃದುಮಧುರ ನುಡಿಯನ್ನು ಆಸ್ವಾದಿಸಲು ಅವಳ ಮನಸ್ಸು ಆಶ್ಚರ್ಯಭರಿತವಾಯಿತು. ಅವಳು ತನ್ನ ಮೋರೆಯ ಮೇಲೆ ನಸುಗೆಂಪು ಬಣ್ಣವನ್ನು ಲೇಪಿಕೊಂಡು ತನ್ನ ಆಸನವನ್ನು ಬಿಟ್ಟು ಎದ್ದು ನಿಂತಳು. ಓರೆನೋಟದಿಂದ ತನ್ನ ಪತಿಯ ವದನವನ್ನು ವೀಕ್ಷಿಸಿದಳು.

"ಪದ್ಮಾ! ನೀನೇಕೆ ಹಾಡನ್ನು ನಿಲ್ಲಿಸಿದೆ? ಇನ್ನೊಮ್ಮೆ ಹಾಡಬಾರದೇ? ಆ ನಿನ್ನ ಸಂಗೀತವನ್ನು ಕೇಳುತ್ತಿರುವಾಗ ಸಂತೋಷದಿಂದ ನನ್ನ ಎದೆಯು ಹಿಗ್ಗುತ್ತಿದೆ. ಸಂಗೀತ ಕಲೆಯು ನಿಜವಾಗಿಯೂ ನಿನ್ನಲ್ಲಿ ಶೋಭಿಸುತ್ತಲಿದೆ."

"ಏನೋ ಸ್ವಲ್ಪ ಹಾಡುವುದಕ್ಕೆ ಬರುತ್ತದೆ, ನನ್ನ ಹಾಡು ತಮ್ಮ ಮನಸ್ಸನ್ನು ಸಂತೋಷಪಡಿಸುವದಾದರ, ನನ್ನಿಂದ ತಮಗೆ ಅಲ್ಪಸೇವೆಯು ಲಭಿಸಿತೆಂದು ಹೆಮ್ಮೆಪಡುತ್ತೇನೆ."

"ಹೌದು. ನೀನು ಓರ್ವ ದೇವಿಯೇ ಸರಿ; ಈ ನಿನ್ನ ನುಡಿಗಳು ನೀನೆಷ್ಟರಮಟ್ಟಿಗೆ ವಿನಯಶಾಲಿನಿಯಿರುವೆ, ಎಂಬುದನ್ನು ಸೂಚಿಸುತ್ತಲಿರುವುವು. ಪದ್ಮಾ, ನಾವಿಂದು ಒಂದು ಹೊಸ ಲೋಕದಲ್ಲಿ ಪ್ರವೇಶಿಸಿರುತ್ತೇವೆ. ಈ ಜಗತ್ತಿನಲ್ಲಿ ನಾವು ನಮ್ಮ ಮುಂದಿನ ಪ್ರಯಾಣವನ್ನು ಮಾಡಬೇಕಾಗಿದೆ!"

"ಸೇವೆಯೇ ನನ್ನ ಕರ್ತವ್ಯವೆಂದು ನಾನು ನಂಬಿರುತ್ತೇನೆ; ತಮ್ಮ ಚರಣ ಸೇವೆಯೇ ನನ್ನ ಗುರಿಯು!"

"ಸೇವೆಯಲ್ಲಿ ನಮಗೆ ಬೇಕಾದದ್ದು; ಸಾಧನೆಯಾಗಿದೆ! ಜೀವನವನ್ನು ಪರಿಪೂರ್ಣತೆಗೆ ಒಯ್ಯುವುದಾಗಿದೆ ದಾಂಪತ್ಯಜೀವನದ ಗುರಿಯು! ಹಲವು ಮಹತ್ಕಾರ್ಯಗಳನ್ನು ನಾವಿಂದು ಸಾಧಿಸಬೇಕು. ವಿಪತ್ತುಗಳಿಂದ ನಿಬಿಡವಾದ ಈ ಕಡಲಿನಲ್ಲಿ ಕೈಗಳನ್ನು ಹಿಡಿದು, ಬರುತ್ತಿರುವ ಪ್ರತಿಯೊಂದು ತರಂಗವನ್ನು ಸಧೈರ್ಯವಾಗಿ ಎದುರಿಸಬೇಕಾಗಿದೆ!"

ಈ ದಂಪತಿಗಳು ನಮಗೆ ಅಪರಿಚಿತರೇನೂ ಅಲ್ಲ; ಅವರಿಬ್ಬರು ನಮಗೆ ಚಿರಪರಿಚಿತರಾದ ರಂಗನಾಥ ಮತ್ತು ಪದ್ಮಾ ಇವರಾಗಿರುತ್ತಾರ. ಪದ್ಮಳು ರಂಗನಿಗೆ ಪ್ರೇಮ

ಕಾಣಿಕೆಯನ್ನರ್ಪಿಸಿದ ಸಂಗತಿಯನ್ನು ವಾಚಕರು ಕಳೆದ ಅಧ್ಯಾಯದಲ್ಲಿ ವಾಚಿಸಿರ ಬಹುದು ರಂಗನಾದರೂ ತನ್ನ ಬಾಲ್ಯದ ಗೆಳತಿಯಲ್ಲಿ ಅನುರಕ್ತನಾಗಿದ್ದನು. ಆ ಪ್ರಣಯಲತೆಯು ಕ್ರಮೇಣ ಬಳೆದು ಅವರಿಬ್ಬರ ಹೃದಯಗಳು ಪರಸ್ಪರರ ಸಂಗಮ ವನ್ನು ಹೊಂದುವಂತೆ ಪ್ರೇರಿಸಿತು ಏಕಾಂಗಿಯಾಗಿ ತನ್ನ ಜೀವನದ ಪ್ರವಾಸವನ್ನು ಮುಂದುವರಿಸಲು ಸಾಧ್ಯವಿಲ್ಲವೆಂಬುದನ್ನು ರಂಗನು ತಿಳಿದುಕೊಂಡನು ತನ್ನ ಬಾಳಿನ ದೋಣಿಯಲ್ಲಿ ತನ್ನೊಡನೆ ಪಯಣ ಮಾಡಲಿರುವ ಅಂಬಿಗಳನ್ನು ಅವನು ಶೋಧಿಸಿದನು. ಅವಳು ಅವನ ಬಾಲ್ಯದ ಗೆಳತಿಯಾದ ಪದ್ಮಳಾಗಿದ್ದಳು.

ರಾಯರ ಇಚ್ಛೆಯಾದರೂ ರಂಗನಾಥನಿಗೆ ತಮ್ಮ ಪುತ್ರಿಯನ್ನು ನೀಡಿ ಅವ ರನ್ನು, ದಾಂಪತ್ಯಜೀವನವನ್ನು ಸ್ವೀಕರಿಸುವಂತೆ ಮಾಡಬೇಕೆಂಬುದಾಗಿದ್ದಿತು. ಅವ ರಿಗೆ ಗಂಡುಮಕ್ಕಳಿಲ್ಲದುದರಿಂದ. ಅವರ ಅಪಾರವಾದ ಸಂಪತ್ತಿಗೆ ಪದ್ಮಳೇ ಉತ್ತರಾಧಿ ಕಾರಿಯಾಗಿದ್ದಳು ಅವರಿಗಾದರೂ ಪ್ರಾಯವು ಹೆಚ್ಚಾಯಿತು; ಹಲವು ಪ್ರಭಾತ ಗಳು ಮಾತ್ರ ತಮ್ಮ ಜೀವನದಲ್ಲಿ ಅವಶೇಷಿಸಿವೆ ಎಂಬುದನ್ನು ಅವರು ತಿಳಿದಿದ್ದರು. ದೂರದ ಕಡಲ ತೀರದಿಂದ ಮೃತ್ಯುವಿನ ಅಟ್ಟಹಾಸದ ಪ್ರತಿಧ್ವನಿಯು ಬಂದು ಅವರ ಶ್ರೋತ್ರೇಂದ್ರಿಯಗಳಲ್ಲಿ ಪತಿಸುತ್ತಿದ್ದಿತು. ತಮ್ಮ ಅನಂತರ ತಮ್ಮ ಏಕಮಾತ್ರ ಪುತ್ರಿ ಯಾದ ಪದ್ಮಳ ಗತಿಯೇನು; ಈ ಜಗತ್ತಿನಲ್ಲಿ ಅವಳನ್ನು ಪರಿಪಾಲಿಸುವವರು ಯಾರು ಎಂಬಿತ್ಯಾದಿ ವಿವಿಧ ಚಿಂತೆಗಳು ಅವರ ಮನಸ್ಸನ್ನು ಆವರಿಸದೆ ಇರಲಿಲ್ಲ. ಅಂತ್ಯದಲ್ಲಿ ಅನುರೂಪನಾದ ಒಬ್ಬ ತರುಣನಿಗೆ ಪುತ್ರಿಯನ್ನು ವಿವಾಹ ಮಾಡಿಕೊಟ್ಟು ಅವನ ಪರಿಪೋಷಣೆಗೆ ಅವಳನ್ನು ಒಪ್ಪಿಸುವದು ಉಚಿತವೆಂದು ರಾಯರು ಬಗೆದರು. ಹಾಗೆ ವರ್ತಿಸುವದಾದರೆ, ತಮ್ಮ ಜೀವನದಲ್ಲಿ ಮಿಕ್ಕಿರುವ ಕೆಲವು ದಿನಗಳನ್ನು ಯಾವ ಚಿಂತೆಯೂ ಇಲ್ಲದೆ ವ್ಯಯಗೊಳಿಸಬಹುದೆಂದು ಅವರು ತಿಳಿದುಕೊಂಡರು.

ಆದರೆ ಅನುರೂಪನಾದ ವರನು ಯಾರು? ಸಂಕುಚಿತ ಬುದ್ಧಿಯೆಂಬ ಬಣ್ಣದ ಕನ್ನಡಕವನ್ನು ಅವರು ಮೂಗಿನ ಮೇಲೆ ಇಟ್ಟುಕೊಂಡಿರಲಿಲ್ಲವೆಂಬ ಸಂಗತಿಯನ್ನು ವಾಚಕರು ಈ ಮೊದಲೇ ತಿಳಿದುಕೊಂಡಿರಬಹುದು. ಅವರ ಕುಮಾರ್ತಿಯನ್ನು ಮದುವೆಯಾಗಲು ಹಲವು ಮಂದಿ ತರುಣರು ಸಿದ್ಧರಿದ್ದರು; ಆದರೆ ಅದು ಅವಳ ಮೇಲಿರುವ ಪ್ರೇಮದಿಂದಲ್ಲ; ಅವಳನ್ನು ಪಾಣಿಗ್ರಹಣ ಮಾಡಿಕೊಳ್ಳುವುದರಿಂದ ತಮಗೆ ಸಿದ್ಧಿಸಬಹುದಾದ ಧನದಾಶೆಯಿಂದ; ಆದರೆ ರಾಯರು ತಮ್ಮ ಧನವನ್ನು ಮಾತ್ರ ನಿಗ್ರಹಿಸುತ್ತಿರುವ ಅಳಿಯನನ್ನು ಬಯಸಲಿಲ್ಲ. ಅವರಿಗೆ ಬೇಕಾದ ಅಳಿ ಯನು ದರಿದ್ರನಾದರೂ ಚಿಂತೆಯಿಲ್ಲ, ಸತ್ಸ್ವಭಾವಿಯಾಗಿರಬೇಕು; ಬಡತನದಲ್ಲಿ ಬಳಲುತ್ತಿದ್ದರೂ ಚಿಂತೆಯಿಲ್ಲ, ವಿದ್ಯಾವಂತನಾಗಿರಬೇಕು. ರಾಯರು ಈ ತರಗತಿಯ ಒಬ್ಬ ಅಳಿಯನನ್ನು ಶೋಧಿಸುವದಕ್ಕೆ ಯತ್ನಿಸಿದರು. ಅವರು ಹುಡುಕುತ್ತಲಿರುವ ರತ್ನವು ಅವರ ಕಾಲಡಿಯಲ್ಲಿಯೇ ಬೆಳಗುತ್ತಿದೆ ಎಂಬುದು ಪ್ರಾರಂಭದಲ್ಲಿ ತಿಳಿಯ ಲಿಲ್ಲ. ಅವರು ಕಲ್ಪವೃಕ್ಷವನ್ನು ಹುಡುಕುತ್ತಾ ವಿಪಿನಾಂತರಗಳಲ್ಲಿ ಸಂಚರಿಸುತ್ತಿ

ದ್ದರು; ಆದರೆ ಆ ಕಲ್ಪತರುವು ಅವರ ಮನೆಯ ಅಂಗಣದಲ್ಲಿಯೇ ಇದ್ದಿತು.

ಒಂದು ದಿನ ರಾಯರು ಮಗಳ ಕೊಠಡಿಗೆ ತೆರಳಿದರು; ಅಲ್ಲಿ ಪದ್ಮಳಿರಲಿಲ್ಲ; ಆದರೆ ಅವಳು ತಾನು ಓದುತ್ತಲಿದ್ದ ಒಂದು ಪತ್ರವನ್ನು ಮರೆತು ಹಾಗೆಯೇ ಹೊರಟು ಹೋಗಿದ್ದಳು. ಓಲೆಯ ಮೇಲೆ ಕಂಗೊಳಿಸುತ್ತಿರುವ ಹಸ್ತಾಕ್ಷರವನ್ನು ನೋಡಿದೊಡನೆಯೇ ಅದು ಯಾರದೆಂಬುದನ್ನು ಅವರು ತಿಳಿದುಕೊಂಡರು. ಅದು ಅವರ ಆಶ್ರಯದಲ್ಲಿ ಬೆಳೆದು ಪ್ರಬುದ್ಧನಾದ ರಂಗನಾಥನದಾಗಿದ್ದಿತು. ಅವನು ಕ್ರಿ. ಶ. ೧೯೦೧ರಲ್ಲಿ ಜರುಗಿದ ಕಲ್ಕತ್ತಾ ರಾಷ್ಟ್ರಸಭೆಯ ಅಧಿವೇಶನಕ್ಕೆ ತೆರಳಿದ್ದನು. ಅವನು ಕಲ್ಕತ್ತದಿಂದ ಆ ಪತ್ರವನ್ನು ಪದ್ಮಳಿಗೆ ಬರೆದಿದ್ದನು. ರಾಯರು ಹಾಗೆಯೇ ಪತ್ರವನ್ನು ತೆಗೆದುಕೊಂಡು ಓದಿ ನೋಡಿದರು. ಅದರಲ್ಲಿ ಬರೆದಿರುವ ಸಂಗತಿಯು ಈಪ್ರಕಾರವಿತ್ತು.

"ಪದ್ಮಾ, ನಾನಿಲ್ಲಿಗೆ ಬಂದು ತಲುಪಿದೆನು; ಆದರೆ ನಿನ್ನನ್ನು ಮರೆಯಲು ಸಾಧ್ಯವಾಗುವದಿಲ್ಲ. ಆ ನಿನ್ನ ಮನೋಹರ ಚಿತ್ರವು ನನ್ನ ಕಣ್ಣಮುಂದೆ ನರ್ತಿಸುತ್ತಿರುವುದು. ನಿಜವಾಗಿಯೂ ಹೇಳುವುದಾದರೆ, ನನ್ನ ಪದ್ಮಾ-ಆ ರೀತಿ ಸಂಬೋಧಿಸಿದುದಕ್ಕೆ ನನ್ನನ್ನು ಕ್ಷಮಿಸು! -ನಾನು ತಿಳಿಯದಂತೆಯೇ ನನ್ನ ಅಂತರಂಗದಲ್ಲಿ ನಿನ್ನ ಮೂರ್ತಿಯು ಬಂಸು ರಾಜಿಸುತ್ತಲಿದೆ. ನನ್ನ ಜೀವನದಲ್ಲಿ ನೀನು ಒಂದು ಪ್ರಧಾನ ಭಾಗವನ್ನು ವಹಿಸಿರುತ್ತೀಯೆ!

ಹಲವು ದಿನಗಳಿಂದ ನನ್ನ ಎದೆಯನ್ನು ಬಿಚ್ಚಿ ಒಂದು ಸಂಗತಿಯನ್ನು ನಿನಗೆ ನುಡಿಯಬೇಕೆಂದಿದ್ದೆನು; ಅದನ್ನು ಕೇಳಿ ನೀನು ಬೆಚ್ಚದಿರು. ನಾನು ನಿನ್ನಲ್ಲಿ ಅನುರಕ್ತನಾಗಿದ್ದೇನೆ. ನಾನು ನಿನ್ನಲ್ಲಿ ಒಂದು ಭಿಕ್ಷೆಯನ್ನು ಯಾಚಿಸುತ್ತಿದ್ದೇನೆ. ಅದನ್ನು ನೀನು ನನಗೆ ದಯಪಾಲಿಸುವೆಯಾ?

ನಿನ್ನ ನಚ್ಚಿನ
ರಂಗ''

ಈ ಪತ್ರವನ್ನು ಓದಿದೊಡನೆಯೇ ರಾಯರ ಮನಸ್ಸಿನಲ್ಲಿ ಯಾವ ಯಾವ ಭಾವನೆಗಳು ಹೊಳೆದುವೆಂಬುದನ್ನು ವಿವರಿಸಲಾಗದು; ಆದರೂ ಆ ವದನ ಮಂಡಲದಲ್ಲಿ ಕಳೆಗೊಂಡ ಒಂದು ನಗೆಯ ಮಲ್ಲಿಗೆಯು ಅವರ ಮನಸ್ಸನ್ನು ಈ ಕಾಗದವು ನೋವು ಮಾಡಲಿಲ್ಲವೆಂಬುದನ್ನು ವ್ಯಕ್ತಪಡಿಸುತ್ತಿತ್ತು. ಹಾಗೆಯೇ ಅವರ ದೃಷ್ಟಿಯು ಮೇಜದ ಮೇಲೆ ವಿಳಾಸವನ್ನು ಬರೆದಿಟ್ಟಿರುವ ಒಂದು ಲಕ್ಕೋಟೆಯ ಮೇಲೆ ಪತಿಸಿತು. ಅದು ರಂಗನಿಗೆ ಪದ್ಮಳು ಬರೆದ ಕಾಗದವು; ರಂಗನ ಕಾಗದಕ್ಕೆ ತಮ್ಮ ಮಗಳು ಯಾವ ಪ್ರತ್ಯುತ್ತರವನ್ನು ಬರೆದಿರುವಳೆಂಬದನ್ನು ತಿಳಿಯಲು ಉತ್ಸುಕರಾದ ರಾಯರು ಲಕ್ಕೋಟೆಗೆ ಯಾವ ಕೇಡೂ ಸಂಭವಿಸದಂತೆ ಜಾಗರೂಕತೆಯಿಂದ ಅದರೊಳಗೆ ಇರುವ ಕಾಗದವನ್ನು ತೆಗೆದು ಓದಿ ನೋಡಿದರು. ವಾಚಕರ ಅವಗಾಹನೆಗಾಗಿ ನಾನು ಆ ಕಾಗದವನ್ನು ಇಲ್ಲಿ ಕೊಡುತ್ತೇನೆ.

"ನನ್ನ ಒಲವಿನ ರಂಗ,

ನಿನ್ನ ಓಲೆಯನ್ನು ಓದಿದೆನು; ನಾನು ನಿನ್ನ ಯಾಚನೆಯನ್ನು ಪೂರ್ತಿಗೊಳಿಸಲು ನನ್ನ ಬಳಿಯಲ್ಲಿ ನನ್ನದೆಂದು ಹೇಳತಕ್ಕ ಯಾವ ವಸ್ತುವೂ ಇರುವದಿಲ್ಲ. ಏಕೆಂದರೆ, ನೀನು ಯಾಚಿಸುವ ಮುನ್ನ ನನ್ನ ಸರ್ವಸ್ವವನ್ನೂ ನಿನ್ನ ಚರಣತಲಗಳಲ್ಲಿ ಅರ್ಪಿಸಿರುತ್ತೇನೆ.

ನಿನ್ನವಳಾಗಲು ಬಯಸುವ

ಪದ್ಮಾ"

ಈ ಓಲೆಯನ್ನು ಓದಿದೊಡನೆಯೇ ಅನಂತರಾಯರಿಗೆ ತಮ್ಮ ಮಗಳು ರಂಗನಾಥನಲ್ಲಿ ಅನುರಕ್ತಳಾಗಿರುವ ಸಂಗತಿಯು ಮನನವಾಯಿತು. ಮಗಳ ಹೃದಯವು ಪ್ರೇಮಪಾಶಕ್ಕೆ ಸಿಲುಕಿದೆ ಎಂಬುದನ್ನು ತಿಳಿದೊಡನೆಯೇ ತಾವು ಯಾವ ದಾರಿಯನ್ನು ಸ್ವೀಕರಿಸಬೇಕೆಂಬುದನ್ನು ಕುರಿತು ಅವರ ಚಿತ್ತವು ವಿಚಾರಮಗ್ನವಾಯಿತು. ಮಗಳ ಅಭ್ಯುದಯಕ್ಕೆ ಹಾನಿಕರವಾದ ಯಾವ ದಾರಿಯನ್ನು ಸ್ವೀಕರಿಸಲೂ ಅವರ ಮನವು ಒಡಂಬಡಲಿಲ್ಲ. ಪ್ರೇಮಶೂನ್ಯವಾದ ಒಂದು ದಾಂಪತ್ಯಜೀವನವನ್ನು ಸ್ವೀಕರಿಸುವಂತೆ ತಾವು ಮಗಳನ್ನು ನಿರ್ಬಂಧಿಸುವುದಾದರೆ, ಆ ಉದ್ಯಮವು ಅವರ ಭಾವೀ ಬಾಳನ್ನು ಮಸಣದ ಬೀಡನ್ನಾಗಿ ಮಾಡುತ್ತದೆ ಎಂಬುದನ್ನು ರಾಯರು ಅರಿತುಕೊಂಡಿದ್ದರು. ರಂಗನಾಥ,-ಆ ಕುಶಾಗ್ರಬುದ್ಧಿಯ ತರುಣ,-ಅವರ ಸ್ಮೃತಿಪಥದಲ್ಲಿ ಪ್ರವೇಸಿಶಿದನು. ಸತ್ಸ್ವಭಾವ, ವಿದ್ಯೆ, ವಿನಯ, ಪರಹಿತಕಾಂಕ್ಷೆ ಎಂಬಿತ್ಯಾದಿ ಹಲವು ರತ್ನಗಳು ಅವನಲ್ಲಿ ಬೆಳಗುತ್ತಿದ್ದುವು; ಆದರೆ ಅವನು ಧನಶೂನ್ಯನು ಅವನ ಭಾವೀ ಜೀವನದ ಕಾರ್ಯವು ತಮ್ಮನ್ನು ಅವಲಂಬಿಸಿದೆ! ಆದರೆ ಧನವಿಲ್ಲದೆ ಈ ಲೋಕದಲ್ಲಿ ಮನುಷ್ಯನ ಯೋಗ್ಯತೆಯನ್ನು ಅಳೆಯಲು ಬೇರೆ ಮಾನದಂಡವಿಲ್ಲವೆ? ದಾಂಪತ್ಯಜೀವನವು ಸುಖಕರವಾಗಬೇಕಾದರೆ ಹಣವಿಲ್ಲದೆ ಸಾಧ್ಯವಿಲ್ಲವೇ? ಪ್ರೇಮ ಮತ್ತು ದೇಹ ಇವುಗಳು ಮಾತ್ರ ಬೇಕಾದುದು; ಈ ಪ್ರೇಮನದಿಯೇ ಈ ತರುಣ ತರುಣಿಯರ ನಡುವೆ ಪ್ರವಹಿಸುತ್ತಲಿವೆ. ಈ ಎರಡು ಹೃದಯುಗಳಲ್ಲಿ ಮಿಡಿಯುತ್ತಿರುವ ಪ್ರೇಮಗಾನಕ್ಕೆ ತಾವು ಒಂದು ಪ್ರತಿಕೂಲಶಕ್ತಿಯಾಗಿ ನಿಲ್ಲಬೇಕೇ? ಪ್ರೇಮಸ್ವರೂಪನಾದ ಭಗವಂತನು ಈ ಎರಡು ಜೀವಗಳಿಂದ ಸೂಸುತ್ತಿರುವ ಪ್ರೇಮಸಂಗೀತಕ್ಕೆ ವಿಘ್ನವನ್ನು ತಂದೊಡ್ಡುವ ಕೃತ್ಯವನ್ನು ಎಂದಿಗಾದರೂ ಒಪ್ಪುವನೇ? ತಮ್ಮ ಕಾಲವು ಹೆಚ್ಚಿಲ್ಲಿ; ತಮ್ಮ ನೌಕೆಯು ಆ ಕಡಲಿನಲ್ಲಿ ಯಾವಾಗ ಮುಳುಗುವುದೆಂಬುದು ತಿಳಿಯದು. ಹೀಗಿರಲು ಈ ಕಾಮುಕ-ಕಾಮುಕಿಯರ ಸುಖದ ಪಥದಲ್ಲಿ ತಾವೇಕೆ ಒಂದು ಗೋಡೆಯಾಗಿ ನಿಲ್ಲಬೇಕು?

ಎಂಬಿತ್ಯಾದಿ ವಿವಿಧ ವಿಚಾರಕಿರಣಗಳು ಅವರ ಮೆದುಳಿನಲ್ಲಿ ಪ್ರಕಾಶಿಸಿದುವು. ಪ್ರೇಮವೇ ದಾಂಪತ್ಯಜೀವನದ ಜೀವಾಳವೆಂಬ ತತ್ವವನ್ನು ಅವರು ಬಲ್ಲವರಾದುದರಿಂದ, ಸಮುಚಿತವಲ್ಲದ ಅವರ ಬುದ್ಧಿಯು ಈ ಕಾಮುಕ ಕಾಮುಕಿಯರ ಪ್ರೇಮದಲ್ಲಿ

ಉಪ್ಪನ್ನು ಬೆರಸಲು ಎಂದಿಗೂ ಒಪ್ಪಲಿಲ್ಲ. "ಅವರವರಿಗೆ ತಮ್ಮ ಭಾವೀ ಬದುಕುಗಳನ್ನು ರೂಪೀಕರಿಸಲಿರುವ ಸ್ವಾತಂತ್ರ್ಯವು ಇದ್ದೇ ಇರಬೇಕು. ಏಕೆಂದರೆ ಅನ್ಯರಿಗಿಂತ ಹೆಚ್ಚಾಗಿ ತನ್ನ ಮುಂದಿನ ದಾರಿ ಯಾವುವೆಂಬುದನ್ನು ಮನುಷ್ಯನು ಬಲ್ಲನು. ಅವನನ್ನು ಎಚ್ಚರಿಸಿ ಸರಿಯಾದ ದಾರಿ ಯಾವುದೆಂಬುದನ್ನು ಉಪದೇಶಿಸುವುದು ಹಿರಿಯರ ಕರ್ತವ್ಯವಲ್ಲದೆ, ಆವನ ವಾಸನೆ, ಸಂಸ್ಕಾರ ಇವುಗಳಿಗೆ ವಿಪರೀತವಾದ ಒಂದು ಮಾರ್ಗವನ್ನು ಅವಲಂಬಿಸುವಂತೆ ಅವನನ್ನು ನಿರ್ಬಂಧಿಸುವುದು ವಿಹಿತವಲ್ಲ." ಇದಾಗಿತ್ತು ರಾಯರ ಅಭಿಪ್ರಾಯವು. ಅವರ ಉದ್ದೇಶವು ಈ ತರುಣ-ತರುಣಿಯರ ಜೀವನವನ್ನು ವಿಜಯಪ್ರದವಾಗುವಂತೆ ಮಾಡುವುದಾಗಿದ್ದಿತು. ಆದುದರಿಂದ ಅವರು ನಿರ್ಧರಿಸಿದರು ಈ ಕಾಮುಕ ಕಾಮುಕಿಯರ ಪ್ರೇಮವನ್ನು ಸಫಲವಾಗುವಂತೆ ಮಾಡಬೇಕೆಂಬುದಾಗಿ. ರಂಗ ಮತ್ತು ಪದ್ಮ ಇವರಿಬ್ಬರು ಪತಿಪತ್ನಿಯರಾಗಿ ಜೀವಿಸುವ ಚಿತ್ರವನ್ನು ಅವರು ಕಾಣಬಯಸಿದರು

ಕೆಲವು ದಿನಗಳಲ್ಲಿಯೇ ಕಲ್ಕತ್ತೆಗೆ ನಿರ್ಗಮಿಸಿದ್ದ ರಂಗನು ಸ್ವದೇಶಕ್ಕೆ ಹಿಂದಿರುಗಿ ಬಂದನು. ರಾಯರಾದರೂ ರಂಗನು ಬಂದೊಡನೆಯೇ ಈ ಸಂಗತಿಯನ್ನು ಕುರಿತು ಅವನೊಡನೆ ಆಲೋಚಿಸಬೇಕೆಂದು ನಿಶ್ಚಯಿಸಿದ್ದರು. ರಂಗನು ಹಿಂದಿರುಗಿ ಬಂದನಂತರ ಒಂದು ದಿನ ಅವರು ರಂಗನನ್ನು ತಮ್ಮ ಕೋಣೆಗೆ ಕರೆದುಕೊಂಡು ಹೋದರು.

"ರಂಗಾ, ಒಂದು ಪ್ರಧಾನಸಂಗತಿಯನ್ನು ನಾವೀಗ ಆಲೋಚಿಸಬೇಕಾಗಿದೆ."

"ಆ ಕಾರ್ಯದಲ್ಲಿ ನನ್ನಿಂದಾಗಬಹುದಾದ ಸಹಾಯವನ್ನು ನೀಡಲು ಸಿದ್ಧನಿದ್ದೇನೆ."

"ನಾನೀಗ ಮಾತಾಡಬೇಕೆಂದಿರುವುದು. ನಿನಗೆ ಸಂಬಂಧಿಸಿದ ಒಂದು ಸಂಗತಿಯನ್ನು ಕುರಿತಾಗಿದೆ."

"ಏನದು?"

"ಈಗ ನೀನು ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿರುತ್ತೀಯೆ, ನಾನು ನನ್ನ ಗೆಳೆಯ ಶಾಮಾಶಾಸ್ತ್ರಿಗಳಿಗೆ,-ನಿನ್ನ ವೃದ್ಧಪಿತಾಮಹನಿಗೆ; ನಿನ್ನನ್ನು,-ಪುತ್ರನಂತೆ ಪೋಷಿಸುವೆನೆಂದು ವಚನವನ್ನು ಕೊಟ್ಟಿದ್ದೆನು. ಆ ನನ್ನ ಪ್ರತಿಜ್ಞೆಯಂತೆ ನಾನು ಮಾಡಬೇಕಾಗಿರುವ ಕೆಲಸಗಳಲ್ಲಿ ಒಂದು ಉಳಿದಿದೆ."

"ತಾವು ತೋರಿಸಿದ ಔದಾರ್ಯವು ಪುತ್ರಪ್ರೇಮಕ್ಕಿಂತಲೂ ಮಿಗಿಲಾದುದು."

"ಅದೇನೇ ಇರಲಿ; ಒಂದು ಕೆಲಸ ಮಾತ್ರ ಬಾಕಿಯಿದೆ; ಅದನ್ನು ಆದಷ್ಟು ಬೇಗ ನೆರವೇರಿಸಬೇಕೆಂದಿದ್ದೇನೆ."

"ಯಾವುದು ಅದು?"

"ಅದೇ ನಿನ್ನ ವಿವಾಹವು!"

"ನನ್ನ ವಿವಾಹ?"

"ಹೌದು, ಏಕೆ ರಂಗ, ಆಶ್ಚರ್ಯದಿಂದ ಮೋರೆಯನ್ನು ನೋಡುತ್ತಿರುವೆ? ಇದುವರೆಗೆ ಪುತ್ರಪ್ರೇಮದಿಂದ ಸಲಹಿದ ನಾನು, ದಾಂಪತ್ಯ ಜೀವನದಲ್ಲಿ ನೀನು ಪ್ರವೇಶಿಸುತ್ತಿರುವುದನ್ನು ನೋಡ ಬಯಸುವದು ಸ್ವಾಭಾವಿಕವಲ್ಲವೆ?"

"ಅದಕ್ಕೇನು ಅವಸರ?"

"ನಿನಗನುರೂಪಳಾದ ಕನ್ಯೆಯನ್ನೇ ನೋಡಿರುತ್ತೇನೆ."

"ನನಗನುರೂಪಳಾದ ಕನ್ಯೆಯನ್ನೇ! ಯಾರವಳು?"

"ಮಗೂ, ಭಯಪಡಬೇಡ; ನೀನು ಯಾರಿಗೆ ನಿನ್ನ ಪ್ರೇಮವನ್ನು ಅರ್ಪಿಸಿರುವೆ ಎಂಬುದನ್ನು ನಾನು ಬಲ್ಲೆನು. ನಿನ್ನ ದಾರಿಯಲ್ಲಿರುವ ಒಂದು ಮುಳ್ಳು ನಾನಲ್ಲವೆಂಬುನನ್ನು ತಿಳಿದುಕೊ! ರಂಗಾ, ನೀನು ಪದ್ಮಳಲ್ಲಿ ಅನುರಕ್ತನಾಗಿರುವಿಯೆಂಬುದನ್ನು ನಾನು ಬಲ್ಲೆನು. ಆದರಂತೆಯೇ ಅವಳಾದರೂ ನಿನಗೆ ತನ್ನ ಹೃದಯವನ್ನು ಅರ್ಪಿಸಿರುತ್ತಾಳೆ. ಈ ಪ್ರೇಮಮೀಲನದ ಹಾಲಿನಲ್ಲಿ ನಾನೇಕೆ ಉಪ್ಪನ್ನು ಬೆರೆಸಬೇಕು? ಆದುದರಿಂದ ನೀವಿಬ್ಬರೂ ದಾಂಪತ್ಯ ಜೀವನವನ್ನು ಕೈಗೊಳ್ಳುವುದನ್ನು ನೋಡಬೇಕೆಂದಿದ್ದೇನೆ."

ಮುದುಕನ ಈ ಮಾತುಗಳಿಂದ ರಂಗನು. ಯಾವ ಪ್ರತ್ಯುತ್ತರವನ್ನು ನೀಡಬಲ್ಲನು? ಏನೇ ಇರಲಿ, ಈ ನುಡಿಗಳು ಆ ನಲ್ಲ-ನಲ್ಲೆಯರ ಹರ್ಷವನ್ನು ಹೆಚ್ಚಿಸಿತೆಂದರೆ ಸಾಕಾಗಿದೆ.

ರಂಗನಾಥ-ಪದ್ಮಾ, ಇವರ ವಿವಾಹವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಅದನ್ನು ವಿವರಿಸುವ ಹವ್ಯಾಸಕ್ಕೆ ನಾನು ಬೀಳುವುದಿಲ್ಲ. ಏಕೆಂದರೆ ಆ ದಂಪತಿಗಳ ಭಾವೀ ಜೀವನವು ಪ್ರಾಮುಖ್ಯವಲ್ಲದೆ, ಅವರ ಮದುವೆಯ ಸಂಭ್ರಮವಲ್ಲ. ಈ ತರುಣ-ತರುಣಿಯರ ಹೃದಯಗಳಲ್ಲಿ ಹರಿಯುತ್ತಿದ್ದ ಪ್ರೇಮನದಿಗಳು ಪರಸ್ಪರ ಮೀಲನವನ್ನು ಹೊಂದಿದುವು. ಎರಡು ಹೃದಯಗಳು ಪರಸ್ಪರ ತಿಳಿದುಕೊಳ್ಳುವುದಕ್ಕಾಗಿ ಒಂದುಗೂಡಿದುವು. ಪ್ರೇಮವು ಪ್ರೇಮದಲ್ಲಿ ಮೀಲನವಾಯಿತು!

---

## ೮ ವಿಷ—ಬೀಜ.

ರಾಮನಗರದಲ್ಲಿ ದಂಡಿನ ಬೀದಿಯೆಂದರೆ ಅತ್ಯಂತ ಸುಪ್ರಸಿದ್ಧವಾದದ್ದು. ಭಯಂಕರವಾದ ಹಲವು ದುಷ್ಕೃತ್ಯಗಳಿಗೆ ಅದು ನಿವಾಸಸ್ಥಾನವಾಗಿದ್ದಿತು. ಆ ಬೀದಿಯಲ್ಲಿ ವಾಸಿಸುವದು ತಮ್ಮ ಗೌರವಕ್ಕೆ ಕುಂದಕವೆಂದು ಭಾವಿಸಿ ಮರ್ಯಾದಶೀಲರಾದ ನಾಗರಿಕರು ಅಲ್ಲಿ ವಾಸಿಸುತ್ತಿರಲಿಲ್ಲ. ಸಾಮಾನ್ಯ ಜನರು ಅಗತ್ಯವಿರುವ ಕೆಲಸಗಳಗಲ್ಲದೆ ಇತರ ಕೆಲಸಗಳಿಗೆ ದಂಡಿನ ಬೀದಿಗೆ ತೆರಳಲು ಹಿಂಜರಿಯುತ್ತಿದ್ದರು. ಇದಕ್ಕೆ ಕಾರಣವೇನಂದರೆ, ಆ ಕಾಲದಲ್ಲಿ ಜನತೆಯ ದೃಷ್ಟಿಯಲ್ಲಿ ದಂಡಿನ ಬೀದಿಯೊಡನೆ ನಿಕಟ ಸಂಬಂಧವಿರುವರು ದುರಾಚಾರಸಂಪನ್ನರಾಗಿ ಕಂಡುಬರುತ್ತಿದ್ದರು.

ಜನತೆಯ ಈ ಧಾರಣೆಯಾದರೂ ಅಸತ್ಯವಾಗಿರಲಿಲ್ಲ. ಇರುಳಿನಲ್ಲಿ ದಂಡಿನಬೀದಿಯ ಚಿತ್ರವನ್ನು ಒಮ್ಮೆ ವೀಕ್ಷಿಸಿದರೆ, ಸಾಧಾರಣ ಮನುಷ್ಯರ ನೆತ್ತರು ಹೆಪ್ಪುಗಟ್ಟುವಷ್ಟು ಭಯಂಕರವಾದುದಾಗಿದೆ.

ದಂಡಿನಬೀದಿಯು ನಗರದ ತೆಂಕಣಭಾಗದಲ್ಲಿದ್ದು ಹೆಚ್ಚಿಗೆ ಜನಸಂಚಾರವಿಲ್ಲದ ಒಂದು ಪ್ರದೇಶವಾಗಿದ್ದಿತು. ಅಲ್ಲಿಯ ನಿವಾಸಿಗಳೆಂದರೆ ದೇಹವಿಕ್ರಯದಿಂದ ಉಪ ಜೀವನವನ್ನು ಮಾಡುತ್ತಿರುವ ಬೆಲೆವೆಣ್ಣುಗಳು, ಕಳವು-ವಂಚನೆ ಇವುಗಳಿಂದ ಜೀವಿ ಸುತ್ತಿರುವ ನ್ಯಾಯಬಾಹಿರರು ಇವರಾಗಿದ್ದರು. ಇದಲ್ಲದೆ ಈ ಬೆಲೆವೆಣ್ಣುಗಳಿಗೆ ಗಿರಾಕಿಗಳನ್ನು ಕಂಡು ಹಿಡಿಯುವ ದಳ್ಳಾಳಿಗಳೂ ಕಳ್ಳಕಾಕರ ಏಜಂಟರುಗಳೂ ಈ ಬೀದಿಯಲ್ಲಿಯೇ-ವಾಸವಾಗಿದ್ದರು. ಒಂದು ಮಾತಿನಲ್ಲಿ ಹೇಳುತ್ತಿರುವ ದಾದರೆ, ರಾಮ ನಗರದಲ್ಲಿರುವ ದುರ್ಜನರ ನಿಕೇತನವು ದಂಡಿನಬೀದಿಯಾಗಿದ್ದಿತು. ಮನುಷ್ಯನಲ್ಲಿ ತೋರುತ್ತಿರುವ ಪೈಶಾಚಿಕತೆಯ ಭಯಂಕರ ರೂಪವು ಇಲ್ಲಿ ನರ್ತಿಸುತ್ತಲಿದ್ದಿತು.

ನಾಗರಿಕತೆಯು ಮನುಷ್ಯನನ್ನು ಉನ್ನತಿಯ ದಾರಿಯಲ್ಲಿ ಒಯ್ಯುತ್ತಿದೆ ಯೆಂದೂ ತಿಳುವು ಮನುಷ್ಯನ ಆತ್ಮವಿಕಾಸಕಾರಕವೆಂದೂ ಒಲ್ಲವರು ಹೇಳುತ್ತಾರೆ; ಆದರೆ ನಾಗರಿಕತೆಯು ಅತ್ಯಂತ ಹೆಚ್ಚಿರುವ ಈ ಇಪ್ಪತ್ತನೆಯ ಶತಮಾನದಲ್ಲಿ ಮನುಷ್ಯನಲ್ಲಿರುವ ಮೃಗೀಯತೆಯೂ, ಅವನ ರಾಕ್ಷಸೀ ವಾಸನೆಯೂ ಅತ್ಯಂತ ನಗ್ನ ರೂಪದಲ್ಲಿ ತಾಂಡವವಾಡುತ್ತಿರುವವು! ಮನುಷ್ಯ ಸಮುದಾಯದಲ್ಲಿರುವ ದುರಾಚಾರ ಗಳು ಹೊಸ ರೂಪವನ್ನು ತಾಳಿ, ಮಾನವರನ್ನು ಕೆಸರಿನ ಕೂಪದಲ್ಲಿ ಕರುಣೆಯಿಲ್ಲದೆ ತಳ್ಳುತ್ತಲಿವೆ! ಮನುಷ್ಯನು ನಾಗರಿಕನಾದಂತೆಯೇ ಅವನಲ್ಲಿರುವ ವಿಷಯವಾಸನೆ ಯಾದರೂ ಮಾರ್ಪನ್ನು ಹೊಂದಿ "ರಸಿಕತೆ"ಯೆಂಬ ಹೆಸರಿನಲ್ಲಿ ರಾಜಿಸುತ್ತಲಿದೆ! ಅವನ ಹೃದಯದಲ್ಲಿ ಉದ್ಭೂತವಾಗುತ್ತಿರುವ ವಿಕಾರಗಳನ್ನು ಸಂತೃಪ್ತಿಗೊಳಿಸುವ ದಕ್ಕಾಗಿ, ಇಂದಿನ ವಿಜ್ಞಾನವು ಹೊಸ ಹೊಸ ಉಪಾಯಗಳನ್ನು ಕಲ್ಪಿಸಿಕೊಡುತ್ತ ಲಿದೆ. ಮನುಷ್ಯನು ತನ್ನ ತಿಳುವನ್ನೂ, ತನ್ನ ವಿಷಯೇಚ್ಛೆಯನ್ನೂ ಪೂರ್ತಿಗೊಳಿ ಸುವದಕ್ಕಾಗಿ ವಿಜ್ಞಾನರಂಗದಲ್ಲಿ ಪ್ರವೇಶಿಸಿ ಹೊಸ ಹೊಸ ಶೋಧನೆಗಳನ್ನು ನಡೆಯಿ ಸುತ್ತಲಿದ್ದಾನೆ. ಉದಾಹರಣೆಗಾಗಿ, ಚಲಚ್ಚಿತ್ರಗಳನ್ನೇ ತೆಗೆದುಕೊಳ್ಳೋಣ. ಆ ಚಲಚ್ಚಿತ್ರಗಳಲ್ಲಿ ದೃಗ್ಗೋಚರವಾಗುತ್ತಿರುವ ನಾರಿಯರ ಅರ್ಧನಗ್ನಚಿತ್ರಗಳು, ಅಶ್ಲೀಲವಾದ ಶೃಂಗಾರ ದೃಶ್ಯಗಳು, ಮನುಷ್ಯನ ಹೃದಯದಲ್ಲಿ ವಿಷಯವಾಸನೆಯನ್ನು ಆವಿರ್ಭವಿಸುವಂತೆ ಮಾಡಲಿರುವ ಉಪಕರಣಗಳಲ್ಲದಿನ್ನೇನು? ಕಲೆಯ ಹೆಸರಿನಲ್ಲಿ ಮನುಷ್ಯನ ಮೃಗೀಯವಾಸನೆಯನ್ನು ಹೆಚ್ಚಿಸಲಿರುವ ಒಂದು ಆಂದೋಲನವೇ ಇಂದಿನ ಜನರ ಮಧ್ಯದಲ್ಲಿ ನಡೆಯುತ್ತಲಿದೆ.

ಆದರೆ ಇದು ಕಲೆಯಲ್ಲ; ಕಲೆಯ ಕೊನೆಯಾಗಿದೆ! ಪ್ರತಿನಿಮಿಷದಲ್ಲಿಯೂ ಈ ರೀತಿ ವರ್ಧಿಸುತ್ತಲಿರುವ ವಿಷಯವಾಸನೆಯನ್ನು ಪೂರ್ತಿಗೊಳಿಸಲು ವ್ಯಭಿಚಾರ ಶಾಲೆಗಳು ನಗರಗಳಲ್ಲಿ ಜನ್ಮವನ್ನು ತಾಳಿದುವು ಮನುಷ್ಯನ ಪೈಶಾಚಿಕತೆಯನ್ನು

ಸಂತುಷ್ಟಗೊಳಿಸುವದಕ್ಕಾಗಿ, ನಮ್ಮ ಶರೀರಗಳನ್ನು ವಿಕ್ರಯಿಸಲು ಸನ್ನದ್ಧರಾಗಿರುವ ಒಂದು ಹೆಂಗಸರ ದಂಡನ್ನೇ ಇಂದಿನ ನಾಗರಿಕತೆಯು ನಿರ್ಮಿಸಿತು. ನಾನು ಪ್ರಾಚೀನ ಕಾಲದಲ್ಲಿ ವ್ಯಭಿಚಾರವೇ ಇರಲಿಲ್ಲವೆಂದು ಹೇಳುವವನಲ್ಲ; ಆದರೆ ಇಂದಿನಂತೆ ಇಷ್ಟು ಬಹಿರಂಗವಾಗಿರಲಿಲ್ಲವೆಂಬುದು ನಿಜವು. ಈಗ ನಮ್ಮ ನಗರಗಳಲ್ಲಿ ಕಂಡುಬರುತ್ತಿರುವ ವ್ಯಭಿಚಾರವು ಒಂದು ವಾಣಿಜ್ಯವಾಗಿ ಹೋಗಿದೆ. ಪಾಪದ ಭೀತಿಯಿಲ್ಲ; ನೈತಿಕ ಅಧಃಪತನದ ಚಿಂತನೆಯಿಲ್ಲ! ಅದೊಂದು ವ್ಯಾಪಾರ; ತನ್ನ ಶರೀರವನ್ನು ವಿಕ್ರಯಿಸಲು ಹೊರಟ ಹೆಂಗಸು, ತನ್ನ ರೂಪವನ್ನು ಕೊಳ್ಳಲು ಬರುವ ಪುರುಷನನ್ನು ಆಕರ್ಷಿಸುತ್ತಾಳೆ. ಅವನು ಕೆಲವು ನಾಣ್ಯಗಳ ಬೆಲೆಯನ್ನು ಕೊಟ್ಟು ವಿಷಯಸಂತೃಪ್ತಿಯನ್ನು ಹೊಂದುತ್ತಾನೆ; ಆದರೆ ಅವನು ತಾನು ಗೈಯುತ್ತಿರುವ ಮಹಾಪಾಪವನ್ನು ತಿಳಿದುಕೊಳ್ಳುವದಿಲ್ಲ.

ಆ ಪತಿತೆಯರನ್ನು ದೂಷಿಸಿ ಪ್ರಯೋಜನವಿಲ್ಲ. ಪುರುಷಸಮುದಾಯದಲ್ಲಿ ಈ ವ್ಯಭಿಚಾರವು ಎಂದಿನವರೆಗೆ ನೆಲೆನಿಂತಿರುವವೋ, ಅಲ್ಲಿಯ ವರೆಗೆ ವೇಶ್ಯಾಗೃಹಗಳು ಮಾಯವಾಗಲಾರವು. ನಿಯಮವು ಅದನ್ನು ತಡೆಯಲು ಯತ್ನಿಸಿದರೆ ಹೊಸದೊಂದು ರೂಪವನ್ನು ಅದು ಹೊಂದುತ್ತದೆ. ಸಮುದಾಯದಲ್ಲಿ ನೆಲೆನಿಂತಿರುವ ಅನಾಚಾರಗಳನ್ನು ದೂರ ಮಾಡಬೇಕಾದರೆ, ಮೊದಲು ಮನುಷ್ಯನು ತನ್ನ ಆತ್ಮದೇಗುಲವನ್ನು ಪರಿಶುದ್ಧಗೊಳಿಸಬೇಕು. ಎಂದಿನವರೆಗೆ ನಮ್ಮ ಮನೆಯು ಕೊಳಕಾಗಿರುವದೋ, ಆ ದಿನದ ವರೆಗೆ ಊರನ್ನು ಶುದ್ಧಗೊಳಿಸಲು ಜರುಗಿಸುತ್ತಲಿರುವ ಉದ್ಯಮವು ಫಲಕಾರಿಯಾಗಲಾರದು. ಎಂದಿನವರೆಗೆ ಮನುಷ್ಯಸಮುದಾಯದಲ್ಲಿ ವ್ಯಭಿಚಾರವು ನೆಲೆನಿಂತಿರುವದೋ, ಆ ದಿನದ ವರೆಗೆ ಪೂರ್ಣತೆಯನ್ನು ಹೊಂದಲು ಮಾನುಷ ಸಮಾಜವು ವಿಚಾರಿಸುವದು ಗಗನಕುಸುಮವೇ ಸರಿ!

ರಾಮನಗರವು ಒಂದು ನಗರವಾದುದರಿಂದ, ನಗರದಲ್ಲಿ ಹೊರಸೂಸುತ್ತಿರುವ ಪೈಶಾಚಿಕ ವಾಸನೆಯನ್ನು ಸಂತೃಪ್ತಿಗೊಳಿಸಲು ವೇಶ್ಯೆಯರ ಬೀದಿಯು ಅದಕ್ಕೆ ಅತ್ಯಾವಶ್ಯಕವಾಗಿದ್ದಿತು ಆ ಬೀದಿಯಲ್ಲಿ ಸಂಚರಿಸಿ ಬೆಲೆವೆಣ್ಣುಗಳಿಗೆ ತಮ್ಮ ದ್ರವ್ಯವನ್ನು ನೀಡಿ, ರೂಪವನ್ನು ಕೊಳ್ಳಲು ಯತ್ನಿಸುತ್ತಲಿರುವ ಜನರಿಗೆ ಯಾವ ಲೋಪವೂ ಇರಲಿಲ್ಲ. ಆಸುರೀ ಸ್ವಭಾವದ ಜನರ ದರ್ಶನವನ್ನು ಪಡೆಯಬೇಕಾದರೆ ಒಮ್ಮೆ ಸಂಜೀ ಸಮಯದಲ್ಲಿ ದಂಡಿನಬೀದಿಗೆ ಹೋದರೆ ಸಾಕು! ಅತ್ಯಂತ ಗೌರವಶಾಲಿಗಳೆಂದೂ ಮಾನ್ಯರೆಂದೂ ಹೇಳಿಕೊಂಡು ಅಭಿಮಾನಿಸುತ್ತಿರುವ ಹದ್ದುಗಳನ್ನು ನಾವು ಅಲ್ಲಿ ನೋಡಬಹುದು.

ಭೀಭತ್ಸವಾದ ಬೀದಿಯು! ರಾತ್ರಿ ಹತ್ತುತಾಸಿನ ಸಮಯವಾಗಿರಬಹುದು. ನಗರದ ಇತರ ಬೀದಿಗಳನ್ನು ನಿಃಶಬ್ಧತೆಯು ಆವರಿಸಿದ್ದರೆ, ದಂಡಿನಬೀದಿಯು ಅತ್ಯಂತ ಕೋಲಾಹಲಮಯವಾಗಿಪ. ಅಲ್ಲಲ್ಲಿ ನಿಂತಿರುವ ಕಟ್ಟಡಗಳಲ್ಲಿ ಉರಿಯುತ್ತಿರುವ ಬೆಳಕುಗಳು ಅವುಗಳಲ್ಲಿರುವ ನಿವಾಸಿಗಳು ಇನ್ನೂ ನಿದ್ರಾಪರವಶರಾಗಿಲ್ಲವೆಂಬು

ದನ್ನು ಸೂಚಿಸುತ್ತಲಿರುವುವು. ಒಂದು ಮನೆಯ ಮಹಡಿಯಿಂದ ಕೆಲವು ಜನರು ಸುರಾಪಾನ ಮಾಡಿ ಕಲಹ ಮಾಡುತ್ತಿರುವ ಸಪ್ಪಳವು ಕೇಳಬರುತ್ತಿದ್ದರೆ, ಇನ್ನೊಂದು ಕಟ್ಟಡದಿಂದ ಒಬ್ಬ ವೇಶ್ಯೆಯು ಕಾಮಜೀವನವನ್ನು ಸಂಬಂಧಿಸಿದ ಒಂದು ಅಶ್ಲೀಲ ಗೀತೆಯು ಕೇಳಿಬರುತ್ತಿದೆ! ಜಗಕ್ಕೆ ತಂಪನ್ನು ನೀಡಬೇಕೆಂಬ ಇಚ್ಛೆಯಿಂದ ಸುಧಾಂಶುವು ಬೆಳದಿಂಗಳನ್ನು ಚೆಲ್ಲುತ್ತಿದ್ದನು. ಆದರೆ ಆ ಬೀದಿಯ ವಾಯುಮಂಡಲವು ವಿಷಯವಾಸನೆ, ಕಾಮಲಾಲಸೆ ಎಂಬ ಬಿಸಿಯುಸಿರಿನಿಂದ ವಿಷಪರಿಪೂರ್ಣವಾಗಿದೆ. ಆ ಬೆಳದಿಂಗಳಿನಲ್ಲಿ ಕೆಲವು ಮಂದಿ ಪಾಪಕರ್ಮಗಳಿಂದ ತಮ್ಮ ಆತ್ಮಗಳನ್ನು ಮಲಿನ ಪಡಿಸಿಕೊಂಡು ಹಿಂದಿರುಗುತ್ತಿದ್ದರೆ, ಇನ್ನು ಕೆಲವರು ತಮ್ಮ ನಿಷ್ಕಲಂಕವಾದ ಹೃದ-ಯಗಳನ್ನು ಕಪ್ಪು ಬಣ್ಣದಲ್ಲಿ ಅದ್ದುವುದಕ್ಕಾಗಿ ಆ ಪಾಪಮಯವಾದ ಮನೆಗಳ ಕದಗಳನ್ನು ದಾಟಿ ಒಳಗೆ ಪ್ರವೇಶಿಸುತ್ತಲಿದ್ದರು! ಹಲವರು ಕ್ಷಣಿಕವಾದ ವಿಕಾರ ಸಂತೃಪ್ತಿಯನ್ನು ಹೊಂದಿ ದಾರಿ ತಪ್ಪಿ ಬಂದ ಪ್ರೇತಗಳಂತೆ ಹಿಂದಿರುಗುತ್ತಿದ್ದರು. ಇನ್ನು ಕೆಲವರು ಪ್ರೇತಗಳಾಗಲು ಬಯಸುತ್ತ ನರಕಕೂಪಕ್ಕೆ ತೆರಳುತ್ತಿದ್ದರು!

ದಂಡಿನ ಬೀದಿಯಲ್ಲಿ ಈ ರಾತ್ರಿಯ ಸಮಯದಲ್ಲಿ ಒಬ್ಬ ತರುಣನು ಏಕಾಂಗಿಯಾಗಿ ತೆರಳುತ್ತಿದ್ದನು. ಅವನ ಪ್ರಾಯವು ೨೩-೨೪ ಇರಬಹುದು. ನೋಡುವುದಕ್ಕೆ ಸುಂದರನಾಗಿದ್ದರೂ ಅವನು ಗೈದ ಹಲವು ಪಾಪಕೃತ್ಯಗಳ ಪರಿಣಾಮವಾಗಿ ಅವನ ಮೋರೆಯು ಕಾಂತಿಶೂನ್ಯವಾಗಿದ್ದಿತು. ಅವನ ವದನದಲ್ಲಿ ಅವನನ್ನು ಆವರಿಸಿಕೊಂಡಿರುವ ಪಾಪರಾಶಿಯಲ್ಲದೆ ಇನ್ನಾವುದೂ ಗೋಚರವಾಗುತ್ತಿರಲಿಲ್ಲ. ಅವನು ಧರಿಸಿರುವ ಆಡಂಬರದ ವಸ್ತ್ರಗಳು ಅವನೊಬ್ಬ ಶ್ರೀಮಂತ ಕುಟುಂಬದವನೆಂದು ನುಡಿಯುತ್ತಿದ್ದುವು. ಅವನು ಏಕಾಂಗಿಯಾಗಿ ಆ ರಾತ್ರಿ ಏನನ್ನೋ ಆಲೋಚಿಸುತ್ತ ದಂಡಿನಬೀದಿಯಲ್ಲಿ ತೆರಳುತ್ತಿದ್ದನು.

ಹಲವು ಮಾರುಗಳಷ್ಟು ದೂರ ತೆರಳಲು, ಅವನು ಒಂದು ಚಿಕ್ಕ ಮನೆಯ ಸಮೀಪಕ್ಕೆ ಬಂದು ತಲುಪಿದನು. ಅವನು ನಾಲ್ಕು ಭಾಗಗಳಿಗೂ ತನ್ನ ದೃಷ್ಟಿಯನ್ನು ಬೀರಿದನು ಅವನು ಸಮೀಪದಲ್ಲಿ ಯಾರೂ ಇಲ್ಲವೆಂಬುದನ್ನು ತಿಳಿದುಕೊಂಡ ಮೇಲೆ ನಿಲಯದ ಬಾಗಿಲುಗಳ ಬಳಿಗೆ ತೆರಳಿದನು. ಅವನ ಎದೆಯು ಆಗ 'ಢಭಢಭ' ಅನ್ನುತ್ತಲಿದ್ದಿತು. ಹೇಳಲಾಗದ ಯಾವುದೋ ಒಂದು ಕಾರಣದಿಂದ ಅವನ ಮನಸ್ಸು ಭಯಪೀಡಿತವಾಗಿದ್ದಿತು. ಅವನ ಆಗಲಿನ ವರ್ತನೆಯನ್ನೂ ಮುಖಭಾವವನ್ನೂ ನೋಡಿದರೆ, ಯಾವುದೋ ಒಂದು ಕೆಟ್ಟ ಕೆಲಸದಲ್ಲಿ ಅವನು ಉದ್ಯುಕ್ತನಾಗಿರುವನೆಂಬುದು ತಿಳಿದು ಬರುತ್ತಿತ್ತು. ತರುಣನು ಆ ಕಿರುಮನೆಯ ಕದಗಳನ್ನು ತಟ್ಟಿದನು; ಎರಡು ಮೂರು ಬಾರಿ ಅವನು ಈ ರೀತಿ ಕದಗಳನ್ನು ತಟ್ಟಿ ಸಪ್ಪಳ ಮಾಡಲು ಮನೆಯೊಳಗಿನಿಂದ ಒಂದು ವ್ಯಕ್ತಿಯು ಕೆಮ್ಮುತ್ತ ಕದಗಳನ್ನು ತೆರೆದಿತು.

ಆ ವ್ಯಕ್ತಿಯು ಕರಗಳಲ್ಲಿ ಒಂದು ಹಣತಿಯನ್ನು ಹಿಡಿದಿತ್ತು; ಆ ದೀಪದ

ಬೆಳಕಿನಲ್ಲಿ ಅದರ ಮುಖವು ತುಸ ಗೋಚರವಾಗುತ್ತಿತ್ತು. ನಲವತ್ತು ವರ್ಷ ಪ್ರಾಯದ ಪುರುಷವ್ಯಕ್ತಿಯದು. ಮುಖವು ಅತ್ಯಂತ ಉಗ್ರವಾಗಿದ್ದು ನೋಡುವವರ ಹೃದಯಗಳಲ್ಲಿ ಭೀತಿ ಹುಟ್ಟಿಸುತ್ತಿತ್ತು. ರಾಕ್ಷಸೀ ಸ್ವಭಾವದ ಲಾಂಛನಗಳನ್ನಲ್ಲದೆ, ಬೇರೆ ಯಾವ ಬಣ್ಣವನ್ನೂ ಆ ನೇತ್ರಗಳು ಚಲ್ಲುತ್ತಿರಲಿಲ್ಲ. ಆ ಪುರುಷನು ತರುಣನನ್ನು ನೋಡಿ, "ಒಳಗೆ ಬಾ!" ಎಂದನು.

ತರುಣನು ಮನೆಯೊಳಗೆ ಪ್ರವೇಶಿಸಿದನು. ತನ್ನೊಡನೆ ಯುವಕನು ಒಳಗೆ ಪ್ರವೇಶಿಸಿದೊಡನೆಯೇ ಆ ಭಯಂಕರ ಸ್ವರೂಪಿಯು ಕದಗಳನ್ನು ಮುಚ್ಚಿ ಅಗುಣಿಯನ್ನು ಹಾಕಿದನು. ಇವರಿಬ್ಬರೂ ಮನೆಯೊಳಗೆ ನಡೆದು ಒಂದು ಕೊಠಡಿಯೊಳಗೆ ಪ್ರವೇಶಿಸಿದರು. ಆ ಕೋಣೆಯಲ್ಲಿ ಅತ್ಯಂತ ಮಲಿನವಾದ ಒಂದು ಚಾಪೆಯಿದ್ದಿತು. ಒಂದು ಮೂಲೆಯಲ್ಲಿ ಮುರಿದು ಹೋದ ಒಂದು ಪೆಟ್ಟಿಗೆ. ಅದರ ಮೇಲೆ ನಾಲ್ಕಾರು ಕಾಗದಗಳ ತುಂಡುಗಳು. ಒಂದು ಮಸಿ ದೌತಿ ಹಾಗು ಒಂದೆರಡು ಲೇಖನಿಗಳು ಕಂಗೊಳಿಸುತ್ತಲಿದ್ದುವು.

ಮನೆಯ ಯಜಮಾನನು ತಾನು ಹಿಡಿದಿದ್ದ ಹಣತೆಯನ್ನು ನೆಲದ ಮೇಲಿಟ್ಟು ತರುಣನಿಗೆ ಕುಳಿತುಕೊಳ್ಳ ಹೇಳಿದನು ತರುಣನು ಆತನ ಸಂಜ್ಞೆಯಂತೆ ಚಾಪೆಯ ಮೇಲೆ ಆಸೀನನಾಗಿ ಹೀಗೆ ಹೇಳಿದನು.—"ನಾನು ಬಂದಿರುವುದೇಕೆಂಬುದನ್ನು ನೀವು ಬಲ್ಲಿರಷ್ಟೆ?"

ಆ ಮನೆಯ ಯಜಮಾನನ ಹೆಸರು ಕೋರಪ್ಪನಾಯರ ಎಂದಾಗಿದ್ದಿತು. ಅವನ ದೇಶವು ಮಲಯಾಳವಾಗಿದ್ದಿತೆಂದು ಹೇಳಿದರೆ ಸಾಕು. ಏಕೆಂದರೆ, ಕೋರಪ್ಪನಾಯರನ ಕುಲ-ಗೋತ್ರಗಳ ಪರಿಚಯವು ನನಗಿರುವದಿಲ್ಲ.

"ಹೂಂ, ತಿಳಿಯಿತು, ಆದರೆ ಅದು ಬಹು ತೊಂದರೆಯ ಕೆಲಸ, ಸಿಕ್ಕಿ ಬಿದ್ದರೆ ಏಳು ವರ್ಷಕಾಲ ರಾಗಿಮುದ್ದೆ ತಿನ್ನಬೇಕಾಗಿ ಬಂದೀತು."

"ಅದಕ್ಕೆ ಹೆದರಬೇಕಾಗಿಲ್ಲ, ಅದರ ಕರ್ತೃವು ನೀವೇ ಎಂಬುದಕ್ಕೆ ರುಜುವಾತು ಸಿಗಬೇಡವೆ? ನೀವು ಬರೆದು ಕೊಟ್ಟರೆ ಸಾಕು. ಇತರ ಎಲ್ಲ ಕೆಲಸಗಳನ್ನು ನಾನೇ ನಿರ್ವಹಿಸುತ್ತೇನೆ!"

"ನನ್ನ ಪ್ರಯತ್ನಕ್ಕೆ ಸರಿಯಾದ ಪ್ರತಿಫಲವು ಸಿಗಬೇಕು."

"ಅದನ್ನು ಕೊಡುವದಿಲ್ಲವೆಂದು ನಾನು ಹೇಳಿದೆನೆ? ನೀವು ಮಾಡುವುದಕ್ಕೆ ಯೋಗ್ಯವಾದ ಪ್ರತಿಫಲವನ್ನು ಕೊಡಲು ನಾನು ಸನ್ನದ್ಧನಾಗಿರುತ್ತೇನೆ!"

"ಎಷ್ಟು" ಎಂದು ತನ್ನ ಕಣ್ಣುಗಳನ್ನು ಅಗಲವಾಗಿ ಹೊರಳಿಸುತ್ತಾ ನಾಯರ ಪ್ರಶ್ನಿಸಿದನು.

"ನೂರು ರೂಪಾಯಿ!"

"ಹಾಗಾದರೆ ಬೇರೊಬ್ಬನ ಬಳಿಗೆ ನೀವು ತೆರಳಬಹುದು."

"[illegible]"

'ಸಾವಿರ!'

'ಸಾವಿರ?'

'ಹೌದು, ಏಕೆ ರಾಯರೆ, ಬೆರಗಾಗಿದ್ದೀರಿ? ಇದು ಕರಾರುಗಳನ್ನು ನಕಲು ಮಾಡುವ ಕೆಲಸವಲ್ಲ; ಫೋರ್ಜರಿ! ಪೋಲೀಸರ ಕೈಗೆ ಸಿಕ್ಕಿಬಿದ್ದರೆ ಏಳುವರ್ಷ ಜೇಲು! ಸರಿಯಾದ ಬೆಲೆಯು ಸಿಗಲೇಬೇಕು. ಒಂದು ಸಾವಿರಕ್ಕೆ ಒಂದು ದಮ್ಮಡಿಯು ಕಡಿಮೆಯಾಗಕೂಡದು. ಅಷ್ಟು ಹಣವನ್ನು ಕೊಡಲು ನಿಮಗೆ ಇಷ್ಟವಿಲ್ಲದಿದ್ದರೆ ನಿಮ್ಮ ಕೆಲಸವನ್ನು ನೆರವೇರಿಸಲು ಬೇರೊಬ್ಬರನ್ನು ಹುಡುಕಿಕೊಂಡು ಹೋಗಬಹುದು ನನ್ನ ವ್ಯವಹಾರವು ಸ್ಪಷ್ಟ! ಕೆಲಸವು ಕಡ್ಲೆಪುರಿ ತಿಂದು ಕೈ ತೊಳೆದ ಹಾಗಿರಬೇಕು!

ಕೋರಪ್ಪನ ನಿರ್ದಾಕ್ಷಣ್ಯವಾದ ಸ್ಪಷ್ಟೋಕ್ತಿಯನ್ನು ಆಶ್ರಾವಿಸಿ ತರುಣನ ಮನಸ್ಸು ಚಂಚಲವಾಯಿತು. ಅವನು ಸಾವಿರರೂಪಾಯಿ ಎಂದು ಅವನು ತನ್ನೊಳಗೆ ನುಡಿದುಕೊಂಡನು; ಆದರೆ ಕೋರಪ್ಪನಲ್ಲದೆ ಬೇರೊಬ್ಬರಿಂದ ತನ್ನ ಕೆಲಸವನ್ನು ಮಾಡಿ ಕೊಡಲು ಸಾಧ್ಯವಿಲ್ಲವೆಂಬದನ್ನು ತರುಣನು ತಿಳಿದಿದ್ದನು. ಕೆಲಸವಾಗಬೇಕಾದರೆ ನಾಯರು ಕೇಳಿದುದನ್ನು ಕೊಡಲೇಬೇಕು.

"ಆಗಲಿ ಸಾವಿರವಾದರೆ ಅಷ್ಟನ್ನೇ ಕೊಡುತ್ತೇನೆ. ನನ್ನ ಕೆಲಸವನ್ನು ಬೇಗನೆ ಮಾಡಿಕೊಡಿ."

"ಅಡ್ಡಿಯಿಲ್ಲ, ತೆಗೆಯಿರಿ ಹಣವನ್ನು. ಕೋರಪ್ಪನು ನಿಮ್ಮ ಮಾತನ್ನು ಅನುಸರಿಸಬೇಕಾದರೆ ಅವನ ಕೈಯಲ್ಲಿ ಹಣಬೀಳಬೇಕು ತಿಳಿಯಿತೇ!"

ಮರುಮಾತಾಡದೆ ತರುಣನು ತನ್ನ ಜೇಬಿನಿಂದ ನೂರು ರೂಪಾಯಿಗಳ ಹತ್ತು ನೋಟುಗಳನ್ನು ತೆಗೆದು ಕೋರಪ್ಪನ ಕೈಗಳಲ್ಲಿ ಮಡಗಿದನು. ವಿವಿಧ ಬಣ್ಣಗಳಿಂದ ಕೂಡಿದ ಆ ಕಾಗದಗಳನ್ನು ನೋಡುತ್ತಲೆ ಕೋರಪ್ಪನ ಮುಖವು ಹರ್ಷದಿಂದ ಪ್ರಫುಲ್ಲಿತವಾಯಿತು. ಅವನು ಒಂದೊಂದು ನೋಟನ್ನು ತೆಗೆದು ಚನ್ನಾಗಿ ಪರೀಕ್ಷೆ ಮಾಡಿದ ಮೇಲೆ ಅವುಗಳನ್ನು ತನ್ನ ಅಂಗಿಯ ಒಳ ಜೇಬಿಗೆ ಸೇರಿಸಿದನು.

"ನೀವು ಆ ಆಸಾಮಿಯ ಹಸ್ತಾಕ್ಷರವನ್ನು ಮಾದರಿಗಾಗಿ ತಂದಿರುವಿರಾ?" ಎಂದು ನೋಟುಗಳನ್ನು ತನ್ನ ಜೇಬಿಗೆ ಸೇರಿಸಿಕೊಂಡ ಅನಂತರ ಕೋರಪ್ಪನು ತರುಣನನ್ನು ಪ್ರಶ್ನಿಸಿದನು.

"ಓಹೋ! ತಂದಿದ್ದೇನೆ; ಇಗೋ ನೋಡಿ!" ಎಂದು ಹೇಳಿ ಒಂದು ಕಾಗದದ ತುಂಡನ್ನು ತನ್ನ ಜೇಬಿನಿಂದ ತೆಗೆದು ತರುಣನು ಕೋರಪ್ಪನಿಗಿತ್ತನು. ಕೋರಪ್ಪನು ಆ ಕಾಗದದ ಮೇಲೆ ಮೂಡಿರುವ ಅಕ್ಷರಗಳನ್ನು ಬಹು ಸೂಕ್ಷ್ಮವಾಗಿ ಪರಿಶೋಧಿಸಿದನು. ಆ ಮೇಲೆ ಅವನು ಒಡಕು ಪೆಟ್ಟಿಗೆಯ ಮೇಲಿರುವ ಕಾಗದವನ್ನೂ ಮಸಿದೌತಿ ಲೇಖನಿ ಗಳನ್ನೂ ತೆಗೆದುಕೊಂಡನು. ತಾನು ಬರೆಯಲಿರುವ ಕಾಗದವನ್ನು ಸರಿಪಡಿಸಿಕೊಂಡನಂತರ ಕೋರಪ್ಪನು "ರಾಯರೆ, ನಿಮಗೆ ಬರೆಯಬೇಕಾದ ಕಾಗದದ ಪ್ರತಿಯನ್ನು ಇತ್ತ ಕೊಡಿ." ಎಂದನು.

ತರುಣನು ಇನ್ನೊಂದು ಪತ್ರವನ್ನು ತೆಗೆದು ಕೋರಪ್ಪನ ಕೈಗೆ ಕೊಟ್ಟನು; ಕೋರಪ್ಪನು ಅದನ್ನು ತೆಗೆದು ಓದಿ ನೋಡಿದ ಅನಂತರ ಕಾಗದದ ಮೇಲೆ ಬರೆಯ ಲಾರಂಭಿಸಿದನು. ಹತ್ತು ನಿಮಿಷಗಳು ಗತಿಸಲು ಬರವಣಿಗೆಯು ಪೂರೈಸಿತು. ಅವನು ಬರೆದಾದ ಮೇಲೆ ಅವನು ಬರೆದುದನ್ನು ಮಾದರಿಗಾಗಿ ತಂದ ಹಸ್ತಾಕ್ಷರಗಳೊಡನೆ ಹೋಲಿಸಿ ನೋಡಲು, ಆ ಎರಡು ಕಾಗದಗಳೂ ಒಬ್ಬನ ಹಸ್ತಾಕ್ಷರಗಳಂತಿದ್ದುವು. ಕೋರಪ್ಪನು ಬರೆದದ್ದು ಬೇರೆ, ಮಾದರಿಗಾಗಿ ತರುಣನು ಕೋರಪ್ಪನ ಕೈಗೆ ಕೊಟ್ಟ ಕಾಗದವು ಬೇರೆ, ಎಂದು ನಿರ್ಧರಿಸುವದು ಯಾರಿಗೂ ಸಾಧ್ಯವಾಗುವಂತಿರಲಿಲ್ಲ. ಕಾಗದವನ್ನು ಕೋರಪ್ಪನು ತರುಣನ ಕೈಗೆ ಕೊಟ್ಟು "ಪರೀಕ್ಷಿಸಿ ನೋಡಿ ರಾಯರೆ!" ಎಂದನು.

ತರುಣನು ಬಹು ಸೂಕ್ಷ್ಮದೃಷ್ಟಿಯಲ್ಲಿ ಪರಿಶೋಧಿಸಿದನು, ಅವನ ಆಗ್ರಹದಂತೆ ಆ ಹಸ್ತಾಕ್ಷರವಿದ್ದಿತು. ಹರ್ಷವು ಅವನ ನೇತ್ರಗಳಲ್ಲಿ ಹೊಳೆದಿತು.

"ನಾಯರ, ತೆರಳುತ್ತೇನೆ. ಈ ಉಪಕಾರಕ್ಕೆ ವಂದನೆಗಳು!" ಎಂದು ನುಡಿದು ತರುಣನು ಅಲ್ಲಿಂದ ಹೊರಟನು. ನಾಯರನು ತರುಣನನ್ನು ಬಾಗಿಲ ವರೆಗೆ ಕಳುಹಿ ಹಿಸಿ ಕೊಟ್ಟನು. ಕೋರಪ್ಪನ ಹತ್ತುನಿಮಿಷಗಳ ಪ್ರಯತ್ನಕ್ಕೆ ಒಂದು ಸಾವಿರ ರೂಪಾ ಯಿಗಳ ಬೆಲೆಯು ದೊರೆತಿದ್ದಿತು.

ತರುಣನು ಅದೇ ಬೀದಿಯಲ್ಲಿ ಸ್ವಲ್ಪ ಮುಂದಕ್ಕೆ ಗಮಿಸಿದನು; ಅಲ್ಲಿ ಒಂದು ಸದನವು ನಿಂತಿದ್ದಿತು. ಆ ಮನೆಯೊಳಗೆ ಉರಿಯುತ್ತಲಿರುವ ಬೆಳಕು ಆ ಗೃಹದ ನಿವಾಸಿಗಳು ಇನ್ನೂ ಜಾಗ್ರತರಾಗಿರುವರು, ಎಂಬುದನ್ನು ವ್ಯಕ್ತಪಡಿಸುತ್ತಿದ್ದಿತು. ತರುಣನು ಆ ಮನೆಯ ಬಳಿಗೆ ಗಮಿಸಿ ಕದಗಳನ್ನು ತಟ್ಟಿದನು. ಒಡನೆಯೇ ಬಾಗಿಲು ಗಳು ತೆರೆಯಲ್ಪಟ್ಟುವು. ತರುಣನು ಮನೆಯೊಳಗೆ ಪ್ರವೇಶಿಸಿದನು. ಎರಡು ನಿಮಿಷ ಗಳಲ್ಲಿಯೇ ಒಂದು ಕೊಠಡಿಗೆ ತಲುಪಿದನು. ಆ ಸ್ಥಳವು ಅವನಿಗೆ ಚಿರಪರಿಚಿತವಾದ ಪ್ರದೇಶವಾಗಿದ್ದುದರಿಂದ ದೀಪವಿಲ್ಲದಿದ್ದರೂ ಕತ್ತಲೆಯಲ್ಲಿ ಮುಂದೆ ತೆರಳಲು ಅವನಿಗೆ ಯಾವ ಪ್ರಯಾಸವೂ ಆಗಲಿಲ್ಲ. ಅವನು ಪ್ರವೇಶಿಸಿದ ಕೊಠಡಿಯು ಒಂದು ಶಯನ ಗೃಹವಾಗಿದ್ದಿತು. ಒಂದು ಬದಿಗೆ ಒಂದು ಪರ್ಯಂಕವಿದ್ದು ಅದರ ಮೇಲೆ ಒಂದು ಹಾಸಿಗೆಯಿದೆ. ಕೊಠಡಿಯ ಮಧ್ಯದಲ್ಲಿರುವ ಒಂದು ಮೇಜದ ಮೇಲೆ ಒಂದು ದೀಪವು ಉರಿಯುತ್ತಲಿದೆ. ಮೇಜದ ಸಮೀಪದಲ್ಲಿ ಎರಡು ಸುಖಾಸನಗಳಿದ್ದುವು.

ಈ ಸುಖಾಸನವೊಂದರಲ್ಲಿ ೨೦-೨೧ ವರ್ಷಪ್ರಾಯದ ಯುವತಿಯೋರ್ವಳು ಕುಳಿತಿದ್ದಳು. ಅವಳು ಸುಂದರಿಯಾಗಿದ್ದಳೆಂದು ಹೇಳಿದರೆ ತಪ್ಪಾಗಲಾರದು; ಆದರೆ ನೈತಿಕಪಥದಲ್ಲಿ ಅಧಃಪತನವನ್ನು ಹೊಂದಿದ ಲಕ್ಷಣಗಳನ್ನು ಸೂಚಿಸುತ್ತಲಿರುವ ಹಲವು ರೇಖೆಗಳು ಆ ವದನಮಂಡಲದಲ್ಲಿ ಒಡೆದು ಕಾಣುತ್ತಿದ್ದವು. ಪಾಪದ ಕತ್ತ ಲೆಯು ಅವಳ ಆತ್ಮವನ್ನು ಆವರಿಸಿದ್ದಿತು.

ಅವಳ ದೇಹವು ಒಂದು ರೇಸ್ಮೆಯ ಸೀರೆಯಿಂದ ಆಚ್ಛಾದಿತವಾಗಿದ್ದಿತು. ಅವಳ

*

ಲಲಾಟದಲ್ಲಿರುವ ಕುಂಕುಮ ತಿಲಕವು ಸುಮಂಗಲೆಯೆಂಬುದರ ಕುರುಹುವಾಗಿತ್ತು; ಆದರೆ ಅವಳ ಬಾಳು ಓರ್ವ ನಿತ್ಯಸುಮಂಗಲೆಯದು. ಕರಗಳಲ್ಲಿ ಕೆಲವು ಚಿನ್ನದ ಬಳೆಗಳೂ, ಕಂಠದಲ್ಲಿ ಒಂದು ರತ್ನಹಾರವೂ ಶೋಭಿಸುತ್ತಿದ್ದುವು. ಅವಳ ಶರೀರ ಭಾರ ವನ್ನು ಆರಾಮಾಸನದ ಮೇಲಿಟ್ಟು, ಯಾವುದೋ ಒಂದು ವಿಷಯವನ್ನು ಕುರಿತು ಅವಳು ಚಿಂತಿಸುತ್ತಲಿದ್ದಳು. ತರುಣನು ಕೋಣೆಯೊಳಗೆ ಪ್ರವೇಶಿಸಿ ಅವಳ ಸಮೀಪ ಕ್ಕಿರುವ ಇನ್ನೊಂದು ಸುಖಾಸನದಲ್ಲಿ ಕುಳಿತುಕೊಂಡನು. ಅವಳು ಒಂದು ಬಾರಿ ತನ್ನ ದೃಷ್ಟಿಯನ್ನು ಅವನ ಮೇಲೆ ಚೆಲ್ಲಿ ನುಡಿದಳು —"ಎಷ್ಟು ಸಮಯದಿಂದ ನಾನು ನಿಮ್ಮನ್ನು ನಿರೀಕ್ಷಿಸುತ್ತಲಿದ್ದೇನೆ. ಸಮಯವು ಆಗಲೇ ಹನ್ನೊಂದು ಬಡೆದಿತು."

"ಕುಸುಮಾ! ನಿಜವಾಗಿಯೂ ನೀನು ನನ್ನನ್ನು ಕಾಯುತ್ತಲಿರುವೆಯಾ?"

"ಹೌದು."

"ಬಹು ಸಂತೋಷ, ಕಾರ್ಯಾಂತರದಿಂದ ಸ್ವಲ್ಪ ವಿಳಂಬವಾಯಿತು."

"ಈ ಹೂದೋಟದಲ್ಲಿ ನನಗಿಂತಲೂ ಮನೋಹರವಾದ ಬೇರೊಂದು ಹೂ ನಿಮ್ಮ ದೃಷ್ಟಿಯನ್ನು ಸೆಳೆದಿರಬಹುದು!"

"ಛೀ! ಕುಸುಮಾ, ನಿನಗಿಂತಲೂ ಸುಂದರವಾದ ಹೂ ಬೇರೊಂದಿದೆಯೆ?"

"ಆದರೆ ಗಂಡಸರನ್ನು ನಂಬ ಕೂಡದು."

"ನಾನು ಬೆಲೆವೆಣ್ಣನ್ನು ಹೇಗೆ ನಂಬಲಿ!"

"ಹೌದು, ಬೆಲೆವೆಣ್ಣು ನಾನು! ನನ್ನ ಪ್ರಾರಬ್ಧವು ನನ್ನನ್ನು ಈ ಕೆಸರಿನ ಕೂಪಕ್ಕೆ ನೆಳೆದಿತು! ಆದರೆ ನನ್ನಲ್ಲಿರುವ ಪ್ರೇಮವನ್ನು ನಾನು ನಿಮಗೆ ಅರ್ಪಿಸಿರುತ್ತೇನೆ."

"ಇರಬಹುದು, ಆದರ ನನಗೆ ಸಿದ್ಧಾಂತಗಳು ಬೇಡ, ಅನುಭವವು ಬೇಕು. ನನ್ನ ಬದುಕಿನಲ್ಲಿ ಸಾಧ್ಯವಿರುವಷ್ಟು ಸುಖವನ್ನು ಸವಿಯಲು ಬಯಸುತ್ತಿದ್ದೇನೆ. ಆದುದ ರಿಂದ ಕುಸುಮಾ, ಹೊತ್ತಾಯಿತು. ಆ ಮದ್ಯದ ಸೀಸೆಯನ್ನು ತೆಗೆದುಕೊಂಡು ಬಾ!"

ಎನ್ನುತ್ತಾ ತರುಣನು ಕುಸುಮಳ ಕಡೆಗೆ ತನ್ನ ದೃಷ್ಟಿಯನ್ನು ಚೆಲ್ಲಿದನು; ಕುಸುಮ,-ಅದಾಗಿದೆ ಆ ವನಿತೆಯ ಹೆಸರು,-ಆರಾಮಾಸನದಿಂದ ಎದ್ದು ಇನ್ನೊಂದು ಕೋಣೆಯೊಳಗೆ ಪ್ರವೇಶಿಸಿದಳು. ಎರಡು ನಿಮಿಷಗಳಲ್ಲಿಯೇ ಅವಳು ಒಂದು ಮದ್ಯದ ಸೀಸೆಯನ್ನೂ ಒಂದು ಗಾಜಿನ ಲೋಟವನ್ನೂ ತೆಗೆದುಕೊಂಡು ಬಂದಳು. ತರು ಣನು ಸೀಸೆಯಲ್ಲಿರುವ ಮದ್ಯವನ್ನು ಲೋಟಾಕ್ಕೆ ಸುರುಹಿದನು. ಅವನು ಆಶಾಪರಿ ಪೂರ್ಣವಾದ ದೃಷ್ಟಿಯಲ್ಲಿ ಆ ಗ್ಲಾಸಿನಲ್ಲಿ ತುಂಬಿರುವ ಕೆಂಬಣ್ಣದ ಮದಿರೆಯನ್ನು ಒಂದು ಬಾರಿ ನೋಡಿದ ಮೇಲೆ ತನ್ನ ದೃಷ್ಟಿಯನ್ನು ಕುಸುಮಳ ಬಳಿಗೆ ಹೊರಳಿಸಿ ದನು. "ಲೋಕದಲ್ಲಿ ಅತ್ಯಂತ ಪ್ರೀತಿಯ ಮೂರು ವಸ್ತುಗಳು ಯಾವುವು?" ಎಂದು ಅವನು ಅವಳನ್ನು ಪ್ರಶ್ನಿಸಿದನು.

"ನನಗೆ ತಿಳಿಯದು."

"ಈ ಲೋಕದ ತ್ರಿಮೂರ್ತಿಗಳು ಯಾರು?"

"ತ್ರಿಮೂರ್ತಿಗಳೇ?"

"ಹೂಂ ಮದ್ಯ, ದ್ಯೂತ ಮತ್ತು ವನಿತೆ ಇವುಗಳೇ ನನ್ನ ಪಾಲಿನ ದೇವತೆಗಳು! ಈ ಗ್ಲಾಸಿನಲ್ಲಿ ಆ ಸುಧೆಯು ಹೊಳೆಯುತ್ತಲಿದೆ, ನನ್ನ ಜೀವನವನ್ನು ಅಮೃತಪಾನ ದಿಂದ ಸಾರ್ಥಕಗೊಳಿಸುತ್ತೇನೆ."

ಹೀಗೆನ್ನುತ್ತ ಅವನು ಆ ಮದಿರೆಯನ್ನು ತನ್ನ ಗಂಟಲೊಳಗೆ ಇಳಿಸಿದನು. ಅಷ್ಟಕ್ಕೆ ಅವನು ತೃಪ್ತನಾಗಲಿಲ್ಲ. ಪುನಃ ಒಂದು ಲೋಟ ಮದ್ಯವು ಅವನ ಪಿಪಾಸೆ ಯನ್ನು ಶಾಂತಗೊಳಿಸುವದಕ್ಕಾಗಿ ಉದರದೊಳಗೆ ಪ್ರವೇಶಿಸಿತು. ಅವನ ನೇತ್ರಗಳು ಕೆಂಬಣ್ಣವನ್ನು ತಾಳಿದುವು. ಅವನು ತನ್ನ ಆಸನದಿಂದ ಎದ್ದು ಕುಸುಮಳ ಬಳಿಗೆ ತೆರಳಿದನು. ಆಗ ತನ್ನ ಕೈಯನ್ನು ಚಾಚಿ ಆ ಯುವತಿಯ ಕರಾಗ್ರವನ್ನು ಹಿಡಿ ದನು. ಅವನು ಉನ್ಮತ್ತ ಭಾವದಲ್ಲಿ ನುಡಿದನು. "ಇದೇ ಸಂಬಂಧ ಹೆಂಡ ಮತ್ತು ಹೆಂಗುಸು ಇವುಗಳೆಲ್ಲಿರುವದೋ, ಅಲ್ಲಿಯೇ ಸ್ವರ್ಗವಿದೆ!"

ಅವನು ತನ್ನ ಹೆಜ್ಜೆಗಳನ್ನು ಮುಂದಿಡುತ್ತ ಬಂದು ಕುಸುಮಳನ್ನು ತನ್ನೆದೆಗೆ ಅಪ್ಪಿಕೊಂಡನು. ಅವನ ನೇತ್ರಗಳಲ್ಲಿ ಮೃಗೀಯ ವಾಸನೆಯ ಜ್ವಾಲೆಯು ದೀಪದಂತೆ ಉರಿಯುತ್ತಲಿದ್ದಿತು. ಅವನ ತುಟಿಗಳು ಅವಳ ಅಧರಗಳೊಡನೆ ಮಿಲಿತವಾದುವು. ಈ ಸಂದರ್ಭದಲ್ಲಿ ತರುಣನ ಅಂಗಿಯ ಜೇಬಿನಿಂದ ಎರಡು ಕಾಗದಗಳು ನೆಲದ ಮೇಲೆ ಬಿದ್ದುವು. ಆ ಪತ್ರಗಳನ್ನು ನೋಡಿದೊಡನೆಯೇ ಕುಸುಮಳು ತರುಣನ ಬಾಹು ಗಳ ಬಂಧನದಿಂದ ತಪ್ಪಿಸಿಕೊಂಡು ಆ ಕಾಗದಗಳೆರಡನ್ನೂ ತೆಗೆದುಕೊಂಡಳು. ಅವಳು ದೀಪದ ಬೆಳಕಿನಲ್ಲಿ ಅವುಗಳೆರಡನ್ನೂ ಓದಿ ನೋಡಿದಳು. ಆಗ ಅವಳ ಕಣ್ಣುಗಳು ಅಗಲವಾದವು. ಆಶ್ಚರ್ಯ ಮತ್ತು ಭಯ ಇವುಗಳು ಅವಳ ವದನಮಂಡಲದಲ್ಲಿ ರೂಪಗೊಂಡವು. ಅವಳು ತರುಣನನ್ನು "ಇವುಗಳೇನು?" ಎಂದು ಪ್ರಶ್ನಿಸಿದಳು.

ತನ್ನ ಕಾಗದಗಳೆರಡನ್ನೂ ಅವನು ಕುಸುಮಳ ಕರದಿಂದ ಕಿತ್ತು ತೆಗೆದುಕೊಂಡು. ಅವನು ತೊದಲುವ ನುಡಿಗಳಲ್ಲಿ ಹೇಳಿದನು. "ಅದೇ ಸುಖಸಾಧನೆಗಿರುವದಾರಿ!"

"ಅನ್ಯರಿಗೆ ಕೇಡನ್ನು ಬಗೆಯದೆ ಸುಖವನ್ನು ಸಂಪಾದಿಸಲು ಸಾಧ್ಯವಿಲ್ಲವೇ?"

"ಅನ್ಯರ ಮಾತೇಕೆ-ನನಗೆ ಬೇಕಾದುದು ನೀನು ಮತ್ತು ಮದ್ಯ!"

"ಅದಕ್ಕಾಗಿ ನಿಮ್ಮ ಕುಟುಂಬದಲ್ಲಿ ವಿಷಬೀಜವನ್ನು ಬಿತ್ತಬೇಕೆ?"

"ನಾನು ಧನಶೂನ್ಯನಾದ ಮೇಲೆ ಈ ಮನೆಯೊಳಗೆ ನನಗೆಲ್ಲಿಯ ಪ್ರವೇಶವು! ಲೋಕವೇ ಹಾಳಾಗಲಿ! ನನಗೆ ಬೇಕಾದದು ನೀನು ಮತ್ತು ಮದ್ಯ!"

ಹೀಗಂದ ಮೇಲೆ ತರುಣನು ತರುಣಿಯನ್ನು ಬಲವಾಗಿ ಅಪ್ಪಿಕೊಂಡನು ಅವಳ ಕೆಂದುಟಿಗಳನ್ನು ಅವನು ಚುಂಬಿಸಿದನು. ಮೇಜದ ಮೇಲೆ ಉರಿಯುತ್ತಲಿದ ದೀಪವು ನಂದಿಹೋಯಿತು. ಆ ಕತ್ತಲೆಯಲ್ಲಿ ಅಲ್ಲಿ ಏನು ಸಂಭವಿಸಿತೆಂಬುದ ಹೇಳಲು ಸಾಧ್ಯವಿಲ್ಲ! ಆದರೆ ಒಂದು ಕುಟುಂಬದ ಬಾಳಿನಲ್ಲಿ ವಿಷಬೀಜವನ್ನು ಬಿತ್ತಲ ಆ ತರುಣನು ಹೊರಟಿದನು. ಎಂದು ಮಾತ್ರ ನಾನು ನುಡಿಯಬಲ್ಲೆನು!

# ವೆಂಕಟರಾಮ.

ಕೆಲವರು ಹೇಳುತ್ತಾರೆ, 'ಸದ್ಗುಣಪೂರ್ಣರಾದ ಮಾತಾಪಿತೃಗಳ ಉದರಗಳಲ್ಲಿ ಸಚ್ಛೀಲನಾದ; ಮಗನೇ ಹುಟ್ಟುತಾನೆ' ಎಂಬುದಾಗಿ. ಕೆಲವು ಮಟ್ಟಿಗೆ ಈ ಸಂಗತಿಯು ವಾಸ್ತವವಿರಬಹುದು. ಆದರೆ ಲೋಕದಲ್ಲಿ ತಂದೆಯಂತೆ ಮಗನೂ ಆಗುತ್ತಾನೆ'ಂಬುದು ಅಕ್ಷರಶಃ ವಾಸ್ತವವಾಗಿರುವದಿಲ್ಲ. ನಾವು ಸದ್ಗುಣಕಣಿಗಳಾದ ತಾಯ್ತಂದೆಗಳ ಹೊಟ್ಟೆಯಲ್ಲಿ ಹುಟ್ಟಿದ ಮಗನು ದುಷ್ಟನಾಗಿ ಪರಿಣಮಿಸುವದನ್ನೂ. ದುರಾಚಾರ ಪೂರ್ಣರಾದ ಮಾತಾಪಿತೃಗಳಲ್ಲಿ ಜನಿಸಿದ ಪುತ್ರನು ಸದ್ಗುಣಿಯಾಗುವದನ್ನೂ ನಾವು ಧಾರಾಳವಾಗಿ ನೋಡಬಹುದು. ಇದರಿಂದ ನಾವು ಕುಟುಂಬದ ಪರಿಸ್ಥಿತಿಗಳು ಪುತ್ರನ ಸ್ವಭಾವ ರಚನೆಯಲ್ಲಿ ಅತ್ಯಂತ ಪ್ರಧಾನ ಕಾರಣಗಳಲ್ಲವೆಂಬುದು ವ್ಯಕ್ತವಾಗುವುದು. ಹಾಗಾದರೆ ಮನುಷ್ಯನ ಸ್ವಭಾವರಚನೆಗೆ ಕಾರಣಭೂತವಾದ ಸಂಗತಿಯು ಯಾವದು?''

ಮನುಷ್ಯನ ಸ್ವಭಾವವಿಕಾಸದಲ್ಲಿ ಅವನ ಪೂರ್ವಜನ್ಮದ ಸಂಸ್ಕಾರವು ಪ್ರಧಾನ ಭಾಗವನ್ನು ವಹಿಸುತ್ತದೆ, ಎಂದರೆ ತಪ್ಪಾಗಲಾರದು. ಇದು ನಿಜವೆಂದು ಕೆಲವರು ನಂಬಲಿಕ್ಕಿಲ್ಲ; ಆದರೆ ಮನುಷ್ಯ ಜೀವನವನ್ನು ಸೂಕ್ಷ್ಮದೃಷ್ಟಿಯಿಂದ ವೀಕ್ಷಿಸಿದರೆ ನಿಜ ಸಂಗತಿಯು ವ್ಯಕ್ತವಾಗುವದು. ಅವನ ಇಂದಿನ ಸ್ವಭಾವ, ವಾಸನೆ, ಅಭಿರುಚಿ ಇವುಗಳು ಕಳೆದುಹೋದ ಜನ್ಮಗಳಲ್ಲಿ ಅವನ ಆತ್ಮವು ಅನುಭವವನ್ನು ಹೊಂದಿದರ ಫಲಗಳಾಗಿವೆಯೆಂಬುದು ತಿಳಿದು ಬರುತ್ತದೆ. ಮಾನುಷಾತ್ಮನ ಅಸ್ತಿತ್ವಕ್ಕೆ ಶರೀರವು ನಶಿಸಿದ ಮೇಲೆ ಯಾವ ಲೋಪವೂ ಸಂಭವಿಸುವದಿಲ್ಲ. ಈ ಆತ್ಮನಿಗೆ ಒಂದು ಗುರಿ ಇರುವದರಿಂದ ಅದು ಆ ದಾರಿಯಲ್ಲಿಯೇ ಪ್ರವಾಸಮಾಡುತ್ತದೆ. ಈ ಪ್ರವಾಸದಲ್ಲಿ ಅವನಿಗೆ ಸಂಭವಿಸಿದ ಅನಂತ ಜನ್ಮಗಳು ಅವನ ಪ್ರವಾಸಪಥದಲ್ಲಿರುವ ಒಂದೊಂದು ಮೈಲುಗಲ್ಲುಗಳಾಗಿರುತ್ತವೆ. ಆ ಅಂತ್ಯದ ಮೈಲುಗಲ್ಲು-ಅದರ ಪ್ರಾಪ್ಯಸ್ಥಾನವು ಸಿಗುವವರೆಗೆ ಅವನು ತನ್ನ ಪರ್ಯಟನವನ್ನು ಮುಂದುವರಿಸುತ್ತಾನೆ. ನಮ್ಮ ಪಯಣದಲ್ಲಿ ಒಂದು ಮೈಲು ಗತಿಸಲು ಆ ದೂರದಲ್ಲಿ ನಾವು ವೀಕ್ಷಿಸಿದ ವಸ್ತುಗಳು ನಮ್ಮ ಚಿತ್ತಗಳಲ್ಲಿ ಚಿತ್ರಿತವಾಗುವಂತೆ ಆತ್ಮನ ಜೀವನದಲ್ಲಿ ತಾನು ಕಳೆದ ಜನ್ಮಗಳಲ್ಲಿ ಅನುಭವಿಸಿದ ಬದುಕಿನ ಸ್ಮರಣೆಯಾದರೂ ಅವನಲ್ಲಿ ನೆಲೆಸಿಂತಿರುವದು. ಕಳೆದ ಜನ್ಮಗಳ ನೆನಪುಗಳು, ಈ ಜನ್ಮದಲ್ಲಿ ತೋರಿ ಬರುವ ಸ್ವಭಾವ, ಅಭಿರುಚಿ ಮತ್ತು ವಾಸನೆ ಇವುಗಳಲ್ಲಿ ಕಂಗೊಳಿಸುತ್ತಿರುವವು. ನಾವು ಈ ಜೀವಿಸುತ್ತಿರುವುದು ಹಾಗು ಉದ್ಯಮಿಸುತ್ತಿರುವುದು. ಕಳೆದು ಹೋದ ನಮ್ಮ ಅನಂತ ಜನ್ಮಗಳ ಬಲದಿಂದಾಗಿದೆ, ಎಂದರೆ ತಪ್ಪಾಗಲಾರದು.''

ವೆಂಕಟರಾಮನ ಸ್ವಭಾವ ಮತ್ತು ವಾಸನೆ ಇವುಗಳನ್ನು ನೋಡಿದರೆ ಅವನ ಆತ್ಮನ ಮೇಲೆ ಗತಜನ್ಮಗಳ ಸಂಸ್ಕಾರವು ಎಷ್ಟು ಆಳವಾಗಿ ಬೇರೂರಿದೆ ಎಂಬುವದು ವ್ಯಕ್ತವಾಗುವದು. ವೆಂಕಟರಾಮನು ಜಮೀನ್ದಾರ ಅನಂತರಾಯರ ಅಣ್ಣನ ಮಗನು. ಅವನು ಶ್ರೀಮಂತ ಕುಟುಂಬದಲ್ಲಿ ಜನಿಸಿದುದರಿಂದ ಅವನ ಬುದ್ಧಿವಿಕಾಸಕ್ಕೆ ಧನ

ವೆಷ್ಟು ಸಹಾಯಕಾರಿಯಾಗಬಹುದೋ ಅಷ್ಟೇ ಸಹಾಯವು ಲಭಿಸಿದ್ದಿತು. ಜೀವನದಲ್ಲಿ ಅನುಭವಿಸಬೇಕಾಗಿ ಬರಬಹುದಾದ ಸಂಕಟಗಳ ಜ್ವಾಲೆಯನ್ನು ಅವನು ಸ್ಪರ್ಶಿಸಬೇಕಾಗಿ ಬಂದಿರಲಿಲ್ಲ. ಆದುದರಿಂದ ಬದುಕು ಅವನಿಗೆ ಒಂದು ಹೂವಿನ ಹಾಸಿಗೆಯಾಗಿ ತೋರಿದುದರಲ್ಲಿ ಆಶ್ಚರ್ಯವಿಲ್ಲ.

ಅವನ ತಂದೆಯು, ಉದಾರ ಹೃದಯನಾದ ಆ ಜಮೀನದಾರನು, ತನ್ನ ಮಗನ ಜೀವನವು ಅತ್ಯಂತ ಕೃಷ್ಣವರ್ಣವನ್ನು ತಾಳಿದ ಕಾಳರಾತ್ರಿಯಂತೆ ಭಯಂಕರವಾದುದು ಎಂಬುದನ್ನು ನೆನೆದಿರಲಿಕ್ಕಿಲ್ಲ. ಸತ್ಸ್ವಭಾವಿಯಾದ ಆ ತಂದೆಯು ಮಗನು ತನ್ನಂತೆಯೇ ಸಾತ್ವಿಕನಾಗಬೇಕೆಂದು ಬಯಸಿದ್ದನು. ಅವನು ಆ ರೀತಿ ವಿಚಾರಿಸಿದುದರಲ್ಲಿ ಆಶ್ಚರ್ಯವಿಲ್ಲ. ತಂದೆಯು ತನ್ನ ಪ್ರತಿಬಿಂಬವು ಮಗನಲ್ಲಿ ಪರಿಶೋಭಿಸಬೇಕೆಂದು ಬಯಸುತ್ತಾನೆ. ಹಾಗು, ತನ್ನ ಮಗನ ಬುದ್ಧಿ ಮತ್ತು ಮನಸ್ಸು ಇವುಗಳ ಬೆಳವಣಿಗೆಗಾಗಿ ಅತ್ಯಂತ ಶ್ರದ್ಧೆಯನ್ನು ವಹಿಸಿ ಉದ್ಯಮಿಸುತ್ತಾನೆ.

ಆದರೆ ವೆಂಕಟರಾಮನಲ್ಲಿ ಬಾಲ್ಯದಿಂದಲೇ ತುಂಟತನ ಮತ್ತು ಅವಿವರ್ತನೆ ಇವುಗಳಲ್ಲಿರುವ ಅಭಿರುಚಿಯು ಪ್ರತ್ಯಕ್ಷ ಪಡದೆಇರಲಿಲ್ಲ. ಸುಖದ ಹಂಬಲ, ಪರರಿಗೆ ಕೆಡಕನ್ನುಂಟುಮಾಡಿ ತಾನು ಸುಖಪಡಲು ಆಗ್ರಹಿಸುವುದು ಎಂಬಿತ್ಯಾದಿ ದುರ್ಗುಣಗಳ ನೆರಳುಗಳು ಅವನು ಚಿಕ್ಕಪ್ರಾಯದವನಾಗಿರುವಾಗಲೇ ಅವನಲ್ಲಿ ಗೋಚರಿಸಲಾರಂಭಿಸಿದುವು. ಸಾಧಾರಣ ಜನರಿಂದ ನಿಂದ್ಯವೆಂದು ವರ್ಜಿತವಾದ ಕೆಲಸಗಳನ್ನು ಮಾಡಲು ಅವನಿಗೆ ವಿಶೇಷ ಉತ್ಸಾಹವು! ಅವನು ಹುಡುಗನಾಗಿರುವಾಗ ಜರುಗಿದ ಒಂದು ಸಂಭವವನ್ನು ನಾಸಿಲ್ಲಿ ವಿವರಿಸುವುದರಿಂದ ಅವನ ಸ್ವಭಾವ ಗುಣದ ಯಥಾರ್ಥ ಚಿತ್ರವು ವಾಚಕರಿಗೆ ಹೊಳಯುಬಹುದು.

ಹುಡುಗರು ಆಟಗಳಲ್ಲಿ ವಿನೋದಿಸುವುದು ಕೇವಲ ಸ್ವಾಭಾವಿಕವಾದುದಷ್ಟೇ! ವೆಂಕಟರಾಮನಾದರೂ ತನ್ನ ಗೆಳೆಯನಾದ ನೆರೆಮನೆಯ ಬಾಲಕನೊಡನೆ ಒಂದು ದಿನ ಆಡುವುದರಲ್ಲಿ ನಿರತನಾಗಿದ್ದನು. ಹೀಗೆ ಆಡುತ್ತಿರುವಾಗ ಅವನ ಬುದ್ಧಿಯಲ್ಲಿ ಒಂದು ಮಿಂಚು ಹೊಳದಿತು. ವಿಚಿತ್ರರೀತಿಯ ಒಂದು ವಿನೋದವನ್ನು ನೋಡಿ ಆನಂದಿಸಬೇಕೆಂದು ಆನಂದಿಸಿದನು. ಅವನು ತನ್ನ ಸಂಗಡಿಗನನ್ನು ಹತ್ತಿರದ ಕೊಳಕ್ಕೆ ಕರೆದುಕೊಂಡು ಹೋದನು. ಇಬ್ಬರೂ ಬಾಲಕರು ನೀರಲ್ಲಿ ಆಡತೊಡಗಿದರು. ಹೀಗೆ ಆಟವಾಡುತ್ತಿರಲು ವೆಂಕಟರಾಮನು ತನ್ನ ಗೆಳೆಯನನ್ನು ಹೆಚ್ಚಿಗೆ ಆಳವಿರುವ ಕೊಳದೊಳಗೆ ದೂಡಿದನು. ಈಜು ಕಲಿಯದ ಬಡಬಾಲಕನು ನೀರಲ್ಲಿ ಮುಳುಗೇಳುತ್ತಿರುವ ಚಿತ್ರವನ್ನು ಕಂಡು ವಿನೋದಿಸುವುದರಲ್ಲಿ ವೆಂಕಟರಾಮನು ಉದ್ಯುಕ್ತನಾದನು. ನೀರಲ್ಲಿ ಬಿದ್ದು ಕೈಕಾಲುಗಳನ್ನು ಬಡಿದುಕೊಂಡು ತನ್ನ ಆತ್ಮವನ್ನು ರಕ್ಷಿಸಲು ನೆಡೆಯುತ್ತಿದ್ದ ಆ ಹೆಣಗಾಟವು ವೆಂಕಟರಾಮನಲ್ಲಿ ಹರ್ಷವನ್ನು ಹುಟ್ಟಿಸಲಿರುವ ಒಂದು ಆಟವಾಗಿದ್ದಿತು!

ಹುಡುಗ ಬುದ್ಧಿಗನುಸಾರವಾಗಿ ವೆಂಕಟರಾಮನು ತಿಳಿಯದೆ ವರ್ತಿಸಿದನೆಂದು

ಕೆಲವರು ನುಡಿಯಬಹುದು, ಆದರೆ ಬಾಲ್ಯಕಾಲದಲ್ಲಿಯೇ ಈ ಭಯಂಕರ ವಿನೋದ ದಲ್ಲಿ ನಿರತನಾದುದರಿಂದ ಅವನ ವಾಸನೆಯು ಯಾವ ತರಹದ್ದೆಂಬುದನ್ನು ತಿಳಿದು ಕೊಳ್ಳುವದು ಪ್ರಯಾಸದ ಕೆಲಸವಲ್ಲ. ನೀರಿನಲ್ಲಿ ಬಿದ್ದ ಹುಡುಗನ ಕ್ರಂದನಗಳನ್ನು ಕೇಳಿ ಹತ್ತಿರದ ಮನೆಯವರು ಓಡಿ ಬಂದು ಅವನನ್ನು ಮೃತ್ಯುಪಾಶದಿಂದ ರಕ್ಷಿಸಿದರು. ವೆಂಕಟರಾಮನಾದರೂ ತನ್ನ ತಂದೆಯು ನೀಡಿದ ದಂಡನೆಯನ್ನು ಅನುಭವಿಸಬೇಕಾಗಿ ಬಂದಿತು; ಆದರೆ ದಂಡನೆಯು ಅವನ ವಾಸನೆಗಳನ್ನು ಇನ್ನೊಂದು ದಾರಿಯಲ್ಲಿ ತಿರು ಗಿಸಲು ಪರ್ಯಾಪ್ತವಾಗಲಿಲ್ಲವು.

ಈ ಬಾಲಕನು ಬೆಳೆದು ದೊಡ್ಡವನಾಗಲು ಅವನಲ್ಲಿರುವ ನೀಚ ವಾಸನೆಗಳು ಇನ್ನಷ್ಟು ಬೆಳೆದು ವಿಕಾಸವನ್ನು ಹೊಂದಿದುವು. ಅವನ ಬುದ್ಧಿಯು ತೀಕ್ಷ್ಣವಾದು ದಾಗಿದ್ದರೂ, ಅದನ್ನು ಅವನು ಜ್ಞಾನಾರ್ಜನೆಗಾಗಿ ವಿನಿಯೋಗಿಸಲಿಲ್ಲ. ಅವನ ಮನಸ್ಸು ಯಾವಾಗಲೂ ನೀಚರ ಸಂಗವನ್ನೇ ಬಯಸಲಾರಂಭಿಸಿತು. ಅವ್ಯವಸ್ಥೆಯು ಅವನ ಜೀವನದ ಪ್ರಧಾನ ಸಂಗತಿಯಾಗಿ ಪರಿಣಮಿಸಿತು ಯಾವ ಪರಿವೆಯೂ ಇಲ್ಲದೆ ತಾನು ನಡೆಯಿಸುತ್ತಿರುವ ಕೆಲಸಗಳ ಪರಿಣಾಮವೇನೆಂಬುದನ್ನು ಚಿಂತಿಸದೆ ತನಗೆ ಸುಖವೆಂದೂ ಪ್ರಿಯವೆಂದೂ ತೋರಿದ ವಿಷಯಗಳು ಎಷ್ಟು ನೀಚವಾಗಿದ್ದರೂ ಅವು ಗಳನ್ನು ನೆರವೇರಿಸುವದು ಅವನ ಸ್ವಭಾವ ಗುಣವಾಗಿ ಪರಿಣಮಿಸಿತು. ಅವನ ಗೆಳೆ ಯರು ಅಧಃಪತನದ ದಾರಿಯನ್ನು ಹಿಡಿದು ನೀತಿಬಾಹಿರರಾದ ಲಫಂಗರಾಗಿದ್ದರು.

ತನ್ನ ತಂದೆಯ ನಿರ್ಬಂಧದಿಂದ ಅವನು ವಿದ್ಯೆಯನ್ನು ಕಲಿಯಬೇಕಾಗಿ ಬಂದಿತು; ಆದರೆ ಅದು ಅವನಿಗೆ ಅಷ್ಟು ಅಭಿರುಚಿಯಿರುವ ಕೆಲಸವಾಗಿರಲಿಲ್ಲ. ತನ್ನ ಸಮಯ ವನ್ನು ಶಾಲೆಯ ಕೋಣೆಯೊಳಗೆ ಕುಳಿತು ಅಧ್ಯಾಪಕರು ವಿವರಿಸುತ್ತಿರುವ ಪಾಠ ಗಳನ್ನು ಕಲಿಯುವುದರ ಬದಲು ತನ್ನ ಗೆಳೆಯರೊಡನೆ ಪತ್ತಿರದೂರಿಗೆ ಹೋಗಿ ಇನ್ನೊ ಬ್ಬರ ತೋಟದಿಂದ ಬಾಳೇ ಹಣ್ಣುಗಳನ್ನು ಕದಿಯುವದಕ್ಕೆ ವಿನಿಯೋಗಿಸುವದು ಮೇಲೆಂದು ಅವನು ಭಾವಿಸಿದನು, ಆದರೆ ಅವನ ತಂದೆಯು ಮಗನ ಮೇಲೆ ಬಹು ತೀಕ್ಷ್ಣದೃಷ್ಟಿಯನ್ನಿಟ್ಟುದುದರಿಂದ ವೆಂಕಟರಾಮನಿಗೆ ವಿದ್ಯಾರ್ಜನೆಯಿಂದ ಪಾರಾ ಗಲು ಸಾಧ್ಯವಾಗಲಿಲ್ಲ.

ಅವನು ಮೆಟ್ರಿಕ್ಲೇಶನ್ನ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಡಿಗ್ರಿಯನ್ನು ಹೊಂದು ವುದಕ್ಕಾಗಿ ಮುಂಬಯಿಗೆ ತೆರಳಿದನು. ಅಲ್ಲಿ ಅವನು ಸರ್ವಸ್ವತಂತ್ರನಾದನು. ತಂದೆ ಯು ನೂರಿನ್ನೂರು ಮೈಲುಗಳ ದೂರದಲ್ಲಿದ್ದುದರಿಂದ ಅವನನ್ನು ಕುರಿತು ವೆಂಕಟ ರಾಮನು ಭಯಪಡಬೇಕಾಗಿರಲಿಲ್ಲ. ಇದಲ್ಲದೆ ಮುಂಬಯಿಯಂಥ ನಗರ ಜೀವನವು ಅವನ ವಾಸನೆಗಳನ್ನು ಇನ್ನಷ್ಟು ಉದ್ರೇಕಗೊಳಿಸಿದುವು. ನಗರಜೀವನದ ಆಡಂಬ ರವು, ಅಲ್ಲಿ ತೋರುತ್ತಿರುವ ದಾಂಭಿಕತನ, ಅಶ್ಲೀಲವಾದ ಕಾಮಜೀವನ ಇವುಗಳು ಅವನನ್ನು ಇನ್ನಷ್ಟು ಅಧಃಪತನವನ್ನು ಹೊಂದಲು ಪ್ರೇರೇಪಿಸಿದುವು. ತಂದೆಯು ಧನಿಕನಾದುದರಿಂದ ಹಣಕಾಸುಗಳಿಗೆ ಅಡಚಣೆಯಿರಲಿಲ್ಲ. ಅವನ ಸ್ವಭಾವಕ್ಕನುಸಾರ

ವಾದ ದಾರಿಯಲ್ಲಿ ತನ್ನ ತಂದೆಯು ಕಳುಹುತ್ತಲಿದ್ದ ಹಣವನ್ನು ಈತನು ವಿನಿಯೋಗಿಸಿದನು. ದ್ಯೂತದಲ್ಲಿ ಅವನು ತನ್ನ ಕಾಸುಗಳನ್ನು ಚಲ್ಲಲಾರಂಭಿಸಿದನು. ಸುರಾದೇವಿಯ ಉಪಾಸನೆಯಾದರೂ ಈ ಕಾಲದಲ್ಲಿಯೇ ಪ್ರಾರಂಭವಾಯಿತೆಂದು ಹೇಳಬಹುದು. ಮದ್ಯಪಾನವು ಅವನ ವಾಸನೆಗಳನ್ನೂ ಕೆಟ್ಟ ಕೆಲಸಗಳಲ್ಲಿ ಅವನಿಗಿರುವ ಆಸಕ್ತಿಯನ್ನೂ ಹೆಚ್ಚಿಸಿತು. ಪಾನವು ಎಷ್ಟು ಭಯಂಕರವಾದುದೆಂಬುದು ಒಬ್ಬ ಕುಡುಕನ ದೈನ್ಯೀಯ ಜೀವನವನ್ನು ವೀಕ್ಷಿಸಿದೊಡನೆಯೇ ನಮಗೆ ತಿಳಿದು ಬರುತ್ತದೆ. ಹಲವು ದುರಾಚಾರಗಳ ತಾಯಿಯೇ ಸುರಾದೇವಿಯಾಗಿರುತ್ತಾಳೆ!

ಮದ್ಯಪಾನವನ್ನು ಕುರಿತು ನಾನಿಲ್ಲಿ ಎರಡು ನುಡಿಗಳನ್ನು ಹೇಳುವದು ಅಸ್ಥಾನದಲ್ಲಾಗಲಿಕ್ಕಿಲ್ಲ. ಮದ್ಯಪಾನದಿಂದ ಮನುಷ್ಯನ ಶಾರೀರಿಕ ಹಾಗು ಮಾನಸಿಕ ಬಲವು ಅಧಃಪತಿಸುತ್ತದೆ, ಎಂದು ತಿಳಿದವರು ಹೇಳುತ್ತಾರೆ. ಪ್ರತಿಯೊಬ್ಬ ಮಹಾತ್ಮರೂ ಸುರಾಪಾನವು ಮನುಷ್ಯನು ಆತ್ಮವಿಕಾಸವನ್ನು ಹೊಂದಲಿರುವ ದಾರಿಯಲ್ಲಿರುವ ಒಂದು ದೊಡ್ಡ ಪ್ರತಿಬಂಧವೆಂಬುದಾಗಿ ನುಡಿದಿದ್ದಾರೆ. ಮನುಷ್ಯನ ಬುದ್ಧಿಯು ಸರಿಯಾದ ರೀತಿಯಲ್ಲಿ ಬೆಳೆಯಬೇಕಾದರೆ, ಅದು ಉನ್ಮತ್ತತೆಯನ್ನು ಹೊಂದಕೂಡದು. ಈ ದುರಾಚಾರದಿಂದ ಅವನು ಕೆಡುವುದು ಮಾತ್ರವಲ್ಲ, ಅವನ ಮಡದಿ-ಮಕ್ಕಳು ಸಹ ಸಹನಾತೀತವಾದ ಸಂಕಟಗಳನ್ನು ಅನುಭವಿಸಬೇಕಾಗಿ ಬರುತ್ತದೆ. ಕುಡಿಯುವದಕ್ಕೆ ಕಲಿತವನು ಎಷ್ಟು ಧನಿಕನಾಗಿದ್ದರೂ ಕಲವು ಕಾಲದೊಳಗಾಗಿ ಅವನ ಕುಟುಂಬವು ನರಕಜೀವನವನ್ನು ಅನುಭವಿಸಬೇಕಾಗುವುದು; ಇದಲ್ಲದೆ ಸುರಾಪಾನವು ಕಲಹ, ಬಂಡು ಇತ್ಯಾದಿ ನೀಚಕೃತ್ಯಗಳನ್ನು ಜರುಗಿಸಲಿರುವ ಒಂದು ಪ್ರೇರಕಶಕ್ತಿಯಾಗಿದೆ. ನಾವು ಒಮ್ಮೆ ಒಬ್ಬ ಹೆಂಡಕುಡುಕನ ವರ್ತನೆಗಳನ್ನು ವೀಕ್ಷಿಸಿದರೆ, ಮನುಷ್ಯನಲ್ಲಿರುವ ಮೃಗೀಯತೆಯು ಎಷ್ಟು ಭಯಂಕರವಾದುದು, ಎಂಬುದು ನಮಗೆ ವ್ಯಕ್ತವಾಗುತ್ತದೆ. ಅವನ ಯುಕ್ತಾಯುಕ್ತ ವಿವೇಚನಾ ಶಕ್ತಿಯು ಲೋಪವಾಗಿ, ಮಾಡಬಾರದ ಕೆಲಸಗಳಲ್ಲಿ ಅವನು ನಿರತನಾಗುತ್ತಾನೆ! ಒಂದು ಮಾತಿನಲ್ಲಿ ಹೇಳುವುದಾದರೆ, ಮದ್ಯಪಾನವು ಮನುಷ್ಯನನ್ನು ಒಂದು ಮೃಗವನ್ನಾಗಿ ಮಾಡುತ್ತದೆ.

ಇಷ್ಟೆಲ್ಲ ಅನಾಹುತಗಳಿಗೆ ಪ್ರೇರಕಶಕ್ತಿಯಾದ ಸುರಾರಾಕ್ಷಸಿಯ ಕಠೋರ ಪಾಶಗಳ ಬಂಧನದಲ್ಲಿ ವೆಂಕಟರಾಮನು ಸಿಲುಕಿದನು. ಹೆಂಡದ ಅಂಗಡಿಗಳ ಸಂದರ್ಶನವು ಅವನ ನಿತ್ಯ ಕೃತ್ಯಗಳಲ್ಲಿ ಒಂದಾಗಿ ಪರಿಣಮಿಸಿತು. ರಾತ್ರಿ ಹೊತ್ತು ಮುಂಬಯಿ ನಗರದ ಮದ್ಯದಂಗಡಿಗಳನ್ನು ಹೊಕ್ಕು ಸುರೆಯಿಂದ ಅವನು ತನ್ನ ಆತ್ಮವನ್ನು ಕತ್ತಲೆಯಲ್ಲಿ ಕೆಡಹಲು ಪ್ರಯತ್ನಿಸುತ್ತಿರುವದೂ, ಕುಡಿದಂದಿನ ನಂತರ ಅವನು ಬುದ್ಧಿಲೋಪವನ್ನು ಹೊಂದಿ ಹುಚ್ಚನಂತೆ ವರ್ತಿಸುವುದೂ ಸರ್ವಸಾಮಾನ್ಯ ಕೆಲಸಗಳಾದುವು. ಹೆಂಡವನ್ನು ಕುಡಿದು ದೇಹದಲ್ಲಿ ಪ್ರಜ್ಞೆಯಿಲ್ಲದ, ಮಾರ್ಗದಲ್ಲಿ ಮುಗ್ಗರಿಸುತ್ತಾ ನಡೆದು ಹೋಗುತ್ತಿದ್ದನು ವೆಂಕಟರಾಮನು! ದಾರಿಯಲ್ಲಿ ಯಾರಾದರೂ ಅವನ ಈ ವರ್ತನವನ್ನು ವೀಕ್ಷಿಸಿ ನಕ್ಕರೆ, ಅವರೊಡನೆ ಕಲಹಕ್ಕೆ ಹೋಗಲು

ಅವನು ಹಿಂಜರಿಯುತ್ತಿರಲಿಲ್ಲ. ತನ್ನ ಕಣ್ಣುಗಳಿಗೆ ಬಿದ್ದವರನ್ನು ಕಾರಣವಿಲ್ಲದೆ ನೀಚ ಶಬ್ದಗಳಲ್ಲಿ ಬಯ್ಯಲು ಅವನು ಕುಡಿದಿದ್ದಾಗ ಹಿಂದು ಮುಂದು ನೋಡುತ್ತಿರಲಿಲ್ಲ.

ಒಮ್ಮೆ ಪಾಪಪಂಕದಲ್ಲಿ ಬಿದ್ದರೆ ಅಲ್ಲಿಂದ ಪಾರಾಗುವುದು ಕಷ್ಟವೆಂದು ಬಲ್ಲವರು ಹೇಳುತ್ತಾರೆ ವೆಂಕಟರಾಮನ ಜೀವನದಲ್ಲಿ ಈ ನುಡಿಯು ಅಕ್ಷರಶಃ ವಾಸ್ತವವಾಗಿ ಪ್ರತ್ಯಕ್ಷವಾಯಿತು. ದ್ಯೂತ ಮತ್ತು ಸುರಾಪಾನ ಇವುಗಳಿಂದ ಮಲೀನತೆಯನ್ನು ಹೊಂದಿದ ಆತ್ಮವು ಬೇರೊಂದು ದುರಾಚಾರದ ಸಂಪರ್ಕದಿಂದ ಇನ್ನಷ್ಟು ಕರಾಳ ವರ್ಣವನ್ನು ಹೊಂದಿತು. ಮನುಷ್ಯನು ಒಮ್ಮೆ ಕೆಸರಿನಲ್ಲಿ ಬಿದ್ದರೆ ಅಲ್ಲಿಂದ ಏಳುವದು ಕಷ್ಟ; ಅವನ ಮನಸ್ಸಿನಲ್ಲಿ ಮೂಡುತ್ತಿರುವ ವಿಕಾರಗಳು ಕೈಹಿಡಿದು ಇನ್ನಷ್ಟು ಆಳವಾದ ಪ್ರದೇಶಕ್ಕೆ ಎಳೆದೊಯ್ಯುತ್ತವೆ. ಅಸಾಮಾನ್ಯವಾದ ಆತ್ಮಸಂಯಮನವೂ, ದೃಢವಾದ ಮನಸ್ಸೂ ಇರುವ ವ್ಯಕ್ತಿಯಲ್ಲವೆ, ಇತರರು ಈ ವಿಕಾರ ರಜ್ಜುವಿನ ಬಂಧನದಿಂದ ಪಾರಾಗಲಾರರು. ಮನುಷ್ಯನು ಎಷ್ಟು ಪ್ರಯತ್ನಿಸಿದರೂ, ಅವನಲ್ಲಿರುವ, ಪೈಶಾಚಿಕ ಸ್ವಭಾವವು ಅವನ ದೃಢನಿಶ್ಚಯವನ್ನು ಭೇದಿಸಿಕೊಂಡು ತನ್ನ ನಗ್ನರೂಪವನ್ನು ಜಗತ್ತಿಗೆ ಪ್ರಕಟಿಸುವದಕ್ಕಾಗಿ ಹೊರಗೆ ಬರಲು ಪ್ರಯತ್ನಿತ್ತಿರುವದು. ದೃಢವಾದ ಆತ್ಮಸಂಯಮನವೆಂಬ ಸಾಧನೆಯಿಂದ ಪೂರ್ಣತೆಯನ್ನು ಹೊಂದಲು ಪ್ರಯತ್ನಿಸುತ್ತಿರುವ ಯೋಗಿಗಳೇ ಈ ವಿಕಾರಗಳೆಂಬ ಮಂಗನೊಡನೆ ಕಾದಾಡಿ ಹಲವು ಸಾರಿ ಪರಾಜಯವನ್ನು ಹೊಂದಿರುವಾಗ, ಯಾವ ನಿಶ್ಚಯವಾಗಲೀ, ಮನೋದಾರ್ಢ್ಯವಾಗಲೀ ಇಲ್ಲದೆ, ವಾಸನೆಗಳೆಂಬ ತರಂಗಗಳ ತಾಡನೆಗೆ ಗುರಿಯಾಗಿ ಸಂಸಾರ ಕಡಲಿನಲ್ಲಿ ಕದಲುತ್ತಿರುವ ವೆಂಕಟರಾಮನು ಹೇಗೆ ತಾನೇ ಈ ವಿಕಾರಗಳಿಂದ ವಿಮುಕ್ತನಾಗಲು ಶಕ್ತನಾಗುವನು?

ಅವನ 'ವಾಸನೆ'ಯನ್ನು ಸಂತೃಪ್ತಿಗೊಳಿಸಲು, ಆ ಮನಸ್ಸು ಹೊಸದೊಂದು ದಾರಿಯನ್ನು ಕಂಡು ಹಿಡಿದಿತು. ಆ ವಿಶ್ವಗಳ ಅರಸು ಯಾವ ಪವಿತ್ರೋದ್ದೇಶದಿಂದ ಆ ಶಕ್ತಿಯನ್ನು ಮನುಷ್ಯನಿಗೆ ಪ್ರದಾನ ಮಾಡಿರುವನೋ, ಅದರ ಮಹಾತ್ಮೆಯನ್ನು ತಿಳಿಯದೆ, ವೆಂಕಟರಾಮನು ತನ್ನಲ್ಲಿರುವ ಆ ಬಲವನ್ನು ತನ್ನಲ್ಲಿ ಮೂಡುತ್ತಿರುವ ವಿಕಾರಗಳನ್ನು ಸಂತೃಪ್ತಿಗೊಳಿಸುವದಕ್ಕಾಗಿ ದುರುಪಯೋಗ ಪಡಿಸಿದನು. ಅವನು ತನ್ನಲ್ಲಿ ಮೂಡಿರುವ ಮೃಗೀಯ ಸಂಸ್ಕಾರಬಲದಿಂದ ವ್ಯಭಿಚಾರವೆಂಬ ಪಾಪಕೂಪದಲ್ಲಿ ಪತಿಸಿದನು; ಆದರ ಉನ್ಮತ್ತನಾದ ತರುಣನು ತನ್ನ ಆತ್ಮವನ್ನು ಕೆಡಿಸುವ ಕೃತ್ಯದಲ್ಲಿ ತಾನು ಉದ್ಯುಕ್ತನಾಗಿರುವೆನೆಂಬದನ್ನು ಹೇಗೆ ತಾನೇ ತಿಳಿಯುವನು? ಮುಂಬಯಿ ನಗರದ ವೇಶ್ಯಾಮಂದಿರಗಳಲ್ಲಿ ವೆಂಕಟರಾಮನು ಪ್ರವೇಶಿಸಿದನು. ಬೆಲೆವೆಣ್ಣುಗಳಲ್ಲಿ ಬೆರಕೆಯನ್ನು ಹೊಂದಿ, ಅವನು ತನ್ನ ಬಾಳಿನಲ್ಲಿ ವಿಷವನ್ನು ಬೆರಸಿಕೊಂಡನು, ಎಂದು ಮಾತ್ರವಲ್ಲ; ತನ್ನ ಈ ಹೀನತೆಯು ಕೆಲಸದಿಂದ ನಿರಪರಾಧಿಗಳಾದ ಹಲವು ಜನರನ್ನು ಸಂಕಟಾನುಭವದ ಬೆಂಕಿಯಲ್ಲಿ ದೂಡಿದನು.

ಈ ರೀತಿ ವೇಶ್ಯಾಲಯಗಳಲ್ಲಿಯೂ ಹೆಂಡದಂಗಡಿಗಳಲ್ಲಿಯೂ ವೆಂಕಟರಾಮನು ತನ್ನ ಮೂರು ವರ್ಷ ಕಾಲವನ್ನು ಕಳೆದನು. ಅವನು ಮಾಡುತ್ತಿದ್ದ ಜ್ಞಾನಸಂಪಾದನೆಯೇ ಅದಾಗಿತ್ತು. ವಿದ್ಯಾಪೀಠದಲ್ಲಿ ಕಲಿತು ಪಂಡಿತನಾಗಬೇಕೆಂಬುದಾಗಲೀ, ಲೋಕದಲ್ಲಿ ಮಾನ್ಯತೆಯಿಂದ ಜೀವಿಸಬೇಕೆಂಬುದಾಗಲೀ ಅವನಿಗೆ ಆಗ್ರಹವಿರಲಿಲ್ಲ. ಅವನಿಗೆ ಲೋಕದಲ್ಲಿ ಅವಶ್ಯವಿರುವ ವಸ್ತುಗಳು ಎರಡು ಮಾತ್ರವಾಗಿದ್ದುವು. ಹೆಂಡ ಮತ್ತು ಹೆಣ್ಣು!

ರಾಮನಗರದಲ್ಲಿರುವ ಅವನ ತಂದೆಯವರಾದರೂ ತನ್ನ ಬಂಧುಗಳ ಮುಖದಿಂದ ಮಗನ ದುರ್ವರ್ತನೆಯನ್ನು ತಿಳಿಯದೆ ಇರಲಿಲ್ಲ. ಮಗನು ತನ್ನ ಮನೆತನವನ್ನು ಹೊಲಸು ಮಾಡಲು ಹೊರಟಿರುವನೆಂಬುದನ್ನು ತಿಳಿಯಲು, ಆ ತಂದೆಯ ಹೃದಯವು ಎಷ್ಟು ಶೋಕದಿಂದ ತುಂಬಿತೆಂಬುದನ್ನು ವಿವರಿಸಲು ಅಸಾಧ್ಯವು! ಇರುವ ಒಬ್ಬ ಮಗನು, ದುರಾಚಾರಸಂಪನ್ನನಾಗಿ ತನ್ನ ಬಾಳುವೆಯನ್ನು ಕಲಂಕಪರಿಪೂರ್ಣವಾಗಿ ಮಾಡುತ್ತಿರುವನೆಂಬುದನ್ನು ತಿಳಿಯಲು ಯಾವ ತಂದೆಯ ಮನಸ್ಸು ತಾನೇ ಕುದಿಯದಿರುವುದು? ಯಾವ ತಂದೆಯು ತನ್ನ ಮಗನು ಅವನತಿಯ ದಾರಿಯನ್ನು ಹಿಡಿದಿರುವುದನ್ನು ನೋಡಿ ಹರ್ಷಚಿತ್ತನಾಗುವನು? ಮಗನು ತನ್ನ ದೃಷ್ಟಿಯಿಂದ ದೂರವಾಗಿದ್ದರೆ, ಅವನು ಪೂರ್ಣವಾಗಿ ಹಾಳಾಗಿ ಹೋಗುವನೆಂದು ಆ ತಂದೆಯು ನಿರ್ಧರಿಸಿದನು. ಅವನನ್ನು ಮುಂಬಯಿಯಿಂದ ಕರೆದುಕೊಂಡು ಬಂದು ಸ್ವಗೃಹದಲ್ಲಿ ವಾಸಿಸುವಂತೆ ಮಾಡಿದರೆ, ತನ್ನ ಸಂಪರ್ಕದಿಂದ ಮಗನನರುವ ದುರ್ನಡತೆಯು ಮಾಯವಾಗಬಹುದೆಂದು ಆ ಜನಕನು ನೆನೆಸಿದನು.

ತಂದೆಯ ಆಜ್ಞೆಯಂತೆ ವೆಂಕಟರಾಮನು ಮುಂಬಯಿ ನಗರವನ್ನು ತ್ಯಜಿಸಿ ಸ್ವದೇಶಕ್ಕೆ ಹಿಂದಿರುಗಿ ಬರಬೇಕಾಗಿ ಬಂದಿತು. ನಗರದಲ್ಲಿ ತಾನು ನಡೆಯಿಸುತ್ತಿದ್ದ ವಿಲಾಸಮಯ ಜೀವನವನ್ನು ತ್ಯಜಿಸುವುದೆಂದರೆ, ಅವನಿಗೆ ಅತ್ಯಂತ ಸಂಕಟದ ಕೆಲಸವಾಗಿದ್ದಿತು; ಆದರೆ ಮಾಡುವುದೇನು? ತಂದೆಯ ಇಷ್ಟಕ್ಕೆ ವಿಪರೀತವಾಗಿ ವರ್ತಿಸಿದರೆ, ಆತನಿಂದ ವೆಂಕಟರಾಮನಿಗೆ ಒಂದು ಕಾಸು ಸಹ ಲಭಿಸಲಾರದು. ಕೈಯಲ್ಲಿ ಹಣವಿಲ್ಲದೆ ನಗರದಲ್ಲಿ ಜೀವಿಸುವ ಬಗೆ ಹೇಗೆ? ತನ್ನ ಜೀವನೋಪಾಯಕ್ಕೆ ಒದಗಬಹುದಾದ ಯಾವ ಕೈಗಾರಿಕೆಯನ್ನೂ ವೆಂಕಟರಾಮನು ಬಲ್ಲವನಾಗಿರಲಿಲ್ಲ.

ರಾಮನಗರಕ್ಕೆ ವೆಂಕಟರಾಮನು ಹಿಂದಿರುಗಿ ಬಂದ ಅನಂತರವೂ ಅವನ ಜೀವನದಲ್ಲಿ ಹೆಚ್ಚಿನ ಮಾರ್ಪು ಉಂಟಾಗಲಿಲ್ಲ. ಅವನ ಔದಾರ್ಯವನ್ನು ರಾಮನಗರದ ಹೆಂಡದಂಗಡಿಗಳೂ ವೇಶ್ಯಾಮಂದಿರಗಳೂ ಪರಿಪೂರ್ಣವಾಗಿ ಅನುಭವಿಸಿದುವು. ಅವನು ತನ್ನ ಊರಿನಲ್ಲಿಯೇ ತನ್ನ ವಾಸನೆಗಳನ್ನು ಸಂತೃಪ್ತಿಗೊಳಿಸಲು ಹೊಸ ದಾರಿಗಳನ್ನು ಕಂಡು ಹಿಡಿದು, ಅವುಗಳಿಂದ ಸಿಗಬಹುದಾದ ಸುಖವನ್ನು ಆಸ್ವಾದಿಸಿದನು.

ಮಗನನ್ನು ದಾಂಪತ್ಯಜೀವನವನ್ನು ಸ್ವೀಕರಿಸುವಂತೆ ಮಾಡಿದರೆ, ಅವನ

ದುರ್ನಡತೆಯು ಮಾಯವಾಗಬಹುದೆಂದು ವಿಚಾರಿಸಿ ವೆಂಕಟರಾಮನ ತಂದೆಯು ಮಗನಿಗೆ ಮದುವೆಯನ್ನು ಮಾಡಿದನು. ಅವನ ಮಡದೀ ಪದವನ್ನು ಸ್ವೀಕರಿಸಿದ ಕನ್ಯೆಯ ಹೆಸರು ಸರೋಜ. ಸರೋಜಳು ಪದ್ಮಳ ಗೆಳತಿಯೆಂಬದು ವಾಚಕರ ನೆನಪಿನಲ್ಲಿರಬಹುದು. ಅವಳ ತಂದೆಯು ದರಿದ್ರನಾದ ಒಬ್ಬ ನೌಕರನಾಗಿದ್ದನು. ಆದ್ದರಿಂದ ಭಾಗ್ಯಶಾಲಿಗಳಾದ ವರರನ್ನು ಸಂಪಾದಿಸಲು ಅವನು ಶಕ್ತನಾಗಲಿಲ್ಲ. ವೆಂಕಟರಾಮನ ತಂದೆಯು ನಿರ್ದೇಶದಂತೆ ಆ ನೌಕರನು ತನ್ನ ಮಗಳನ್ನು ವೆಂಕಟ ರಾಮನಿಗೆ ಕೊಟ್ಟು, ಮದುವೆಯನ್ನು ಮಾಡಿದನು. ಒಂದು ವೇಳೆ ಆ ಬಡ ತಂದೆ ಯು ತನ್ನ ಮಗಳನ್ನು ಒಬ್ಬ ಜಮೀನ್ದಾರನ ಮಗನಿಗೆ ಮದುವೆ ಮಾಡಿಕೊಡು ವದರಿಂದ ಅವಳ ಭಾವೀ ಜೀವನವು ಶೋಭಾಯಮಾನವಾಗಬಹುದೆಂದು ವಿಚಾರಿ ಸಿದ್ದಿರಬಹುದು; ಆದರೆ ಅವನ ಕನಸು ಗಾಳಿಯ ಗೋಪುರವಾಗಿ ಪರಿಣಮಿಸಿತು. ಆ ದಂಪತಿಗಳು ತಮ್ಮ ನವಸಂಬಂಧದಲ್ಲಿ ಸ್ವಲ್ಪ ಮಟ್ಟಿಗೆ ಸಾಮರಸದಿಂದ ಇದ್ದರೂ, ಅನಂತರ ಅವರಿಬ್ಬರ ಸ್ವಭಾವಜೀವನಗಳು-ಅದರಲ್ಲಿಯೂ ದುರ್ನಡತೆಯಿಂದ ಶಿಥಿ ಲತೆಯನ್ನು ಹೊಂದಿದ ವೆಂಕಟರಾಮನ ಚಂಚಲ ಮನೋವೃತ್ತಿ ಇವುಗಳು ಅವರ ಬಾಳನ್ನು ಹಾಳುಗೂಡಿಸಿದುವು.

ಸರೋಜಳು ವಿದ್ಯಾಭರಿತೆಯೂ, ಸುಂದರಿಯೂ ಆಗಿದ್ದ ಹೆಂಗಸಾಗಿದ್ದರೂ ಅವಳ ರೂಪವು ವೆಂಕಟರಾಮನನ್ನು ತೃಪ್ತಿಗೊಳಿಸಲು ಪರ್ಯಾಪ್ತವಾಗಲಿಲ್ಲ. ಅವನು ಸ್ವಭಾವತಃ ಚಂಚಲ ಮನಸ್ಸಿನವನು; ಸುಖಭೋಗಗಳಲ್ಲದೆ ಅದಕ್ಕಿಂತ ಉನ್ನತವಾದ ಒಂದು ವಲಯದಲ್ಲಿ ಸಂಚರಿಸಲು ಅವನು ಶಕ್ತನಲ್ಲ ಹೂವಿನಿಂದ ಹೂವಿಗೆ ಹಾರಾಡಿ ವಿವಿಧ ಸುಮಗಳ ರಸವನ್ನು ಹೀರುತ್ತಿರುವ ಭೃಂಗದಂತೆ ಅವನು ತನ್ನ ಆಸಕ್ತಿಯನ್ನು ಒಬ್ಬಳಲ್ಲೇ ಇಡದೆ ಅವಳ ಸಂಸರ್ಗದಿಂದ ತನ್ನ ಕಾಮವಾಸನೆಯು ಶಮಿಸಲು. ಇನ್ನೊಬ್ಬಳನ್ನು ಹುಡುಕಿಕೊಳ್ಳಲು ಅವನು ಅಲೆಯುತ್ತಿದ್ದನು. ಈ ರೀತಿಯ ಸ್ವಭಾವದ ವೆಂಕಟರಾಮನನ್ನು ತನ್ನ ಪತಿಯಾಗಿ ಸ್ವೀಕರಿಸಿ ಸರೋಜಳ ದಾಂಪತ್ಯ ಜೀವನವು ಹೇಗೆ ಸುಖಮಯವಾಗಬಹುದು?

ಒಂದೆರಡು ವರ್ಷಗಳು ಗತಿಸಲು, ವೆಂಕಟರಾಮನ ತಂದೆಯಾದ ಅನಂತ ರಾಯರು ಸ್ವರ್ಗದದಾರಿಯನ್ನು ಹಿಡಿದರು. ತನ್ನ ತಂದೆಯು ಮೃತನಾಗಲು ಜಮೀ ನ್ದಾರಿಯ ಸಂಪೂರ್ಣ ಅಧಿಕಾರಗಳು ವೆಂಕಟರಾಮನಿಗೆ ಪ್ರಾಪ್ತವಾದುವು. ಈ ಮೊದಲು ತಂದೆಯು ಇದ್ದುದರಿಂದ ವೆಂಕಟರಾಮನ ಮೋಜಿಗೆ ಸಾಕಷ್ಟು ದ್ರವ್ಯವು ಲಭಿಸುತ್ತಿದ್ದಿಲ್ಲ. ಕಾಟಾಚಾರದಿಂದ ಇದ್ದುದರಲ್ಲಿಯೇ ತೃಪ್ತಿಪಡಬೇಕಾಗಿ ಬರುತ್ತಿ ದ್ದಿತು. ತನ್ನ ತಂದೆಯ ಮರಣಾನಂತರ ಅವನಿಗೆ ಈ ತೊಂದರೆಯು ಮಾಯ ವಾಯಿತು. ಸಕಲ ಸಂಪತ್ತುಗಳಿಗೂ ತಾನೇ ಒಡೆಯನಾಗಿದ್ದುದರಿಂದ, ತನ್ನ ಅವನ ಮನಸ್ಸಿಗೆ ಬಂದಂತೆ ಹಣವನ್ನು ವ್ಯಯಗೊಳಿಸಲು ಯಾವ ಅಭ್ಯಂತರವೂ ಇರಲಿಲ್ಲ.

ಆದರೆ ಎಷ್ಟು ಸಂಪತ್ತುಶಾಲಿಯಾದರೂ ಮಿತಿಯಿಲ್ಲದೆ ತನಗೆ ತೋರಿದ ರೀತಿ

ಯಲ್ಲಿ ಹಣವನ್ನು ವೆಚ್ಚ ಮಾಡುವವನ ಸಿರಿಯು ಹೆಚ್ಚುಕಾಲ ನೆಲೆನಿಲ್ಲಲಾರದು. ಕೆಲವು ಕಾಲದಲ್ಲಿಯೇ ಸಿರಿಯು ಮಾಯವಾಗಿ ಲಕ್ಷಾಧೀಶನಾಗಿದ್ದವನು ಭಿಕ್ಷಾಧಿಪತಿಯಾಗುತ್ತಾನೆ. ವೆಂಕಟರಾಮನಂಥ ವಿಲಾಸಪ್ರಿಯನಿಗೆ ಕುಬೇರ ಸಂಪತ್ತಿಯೇಲ್ಲ ದೊರಕಿದರೂ ಅದು ಎಷ್ಟು ಕಾಲ ನೆಲೆನಿಲ್ಲಬಹುದು? ದ್ಯೂತ, ಸುರಾಪಾನ, ವ್ಯಭಿಚಾರ ಇವುಗಳಿಂದ ಅವನ ಹಣವು ಕರಗಿತು. ತಂದೆಯು ಮೃತನಾದ ಮೂರನೆಯ ವರ್ಷದಲ್ಲಿಯೇ ಅವನು ಕೇವಲ ದರಿದ್ರನಾದನು.

ದಾರಿದ್ರ್ಯವು ಬಂದು ಪೀಡಿಸಿದರೂ, ತನ್ನ ದುರ್ನಡತೆಯನ್ನು ಪರಿಹರಿಸಿಕೊಳ್ಳಲು ಅವನಿಂದಾಗಲಿಲ್ಲ. ಸಾಲವನ್ನು ಮಾಡಿಯಾದರೂ, ತನ್ನ ಮೋಜು ಮತ್ತು ವಿಲಾಸಗಳನ್ನು ನೆರವೇರಿಸಲು ಅವನು ಹಿಂದೆಗೆಯಲಿಲ್ಲ. ಕುಸುಮ ಎಂಬುವ ಹೊಸ ವಾರವನಿತೆಯೊಬ್ಬಳು ಅವನ ಮನಸ್ಸನ್ನು ಆಕರ್ಷಿಸಿದಳು. ಅವಳ ಚೆಲುವನ್ನು ಕಂಡು ಅವನ ಬಿತ್ತವು ಚಿರವಶವಾಯಿತು.

ಸಾಲಗಾರರು ವೆಂಕಟರಾಮನ ಆಸ್ತಿಗಳನ್ನು ದೋಚಿಕೊಂಡು ಹೋದರು. ದಾರಿದ್ರ್ಯವು ಬಂದು ಅವನನ್ನು ಬಾಧಿಸಿತು. ಕೈಯ್ಯಲ್ಲಿ ಹಣವಿಲ್ಲ; ಆದರೂ ಅವನು ತನ್ನ ದುರ್ನಡತೆಯನ್ನು ತ್ಯಜಿಸದೆ ಹೋದನು. ಹೀಗಿರಲು ಪುನಃ ತಾನು ಧನಿಕನಾಗಬಹುದಾದ ಒಂದು ಉಪಾಯವು ಹೊಳೆಯಿತು. ಅನ್ಯರ ಬದುಕಿನಲ್ಲಿ ವಿಷವನ್ನು ಬೆರಸಲು ಅವನು ಹಿಂಜರಿಯಲಿಲ್ಲ. ಅವನ ಹೃದಯವೇ ಜಡಪ್ರಾಯವಾಗಿರುವಾಗ, ಧರ್ಮಾಧರ್ಮ ವಿವೇಚನೆಯೂ ತನ್ನಂತೆಯೇ ಪರರು ಎಂಬ ಸಮಬುದ್ಧಿಯೂ ಅವನಲ್ಲಿ ಹೇಗೆ ಉದಯಿಸಬಲ್ಲವು? ಅವನು ಇದು ವರೆಗೆ ತಾನು ಗೈದುದಕ್ಕಿಂತಲೂ ಭಯಂಕರವಾದ ಪಾಪಕೃತ್ಯಗಳನ್ನು ನೆರವೇರಿಸುವುದಕ್ಕೆ ಉದ್ಯುಕ್ತನಾದನು.

ಕಳೆದ ಅಧ್ಯಾಯದಲ್ಲಿ ಕೋರಪ್ಪ ನಾಯರನ ವಸತಿಗೆ ತೆರಳಿ ಒಂದು ಕಾಗದವನ್ನು ಬರೆಯಲು ನಾಯರನಿಗೆ ಸಾವಿರಾರು ರೂಪಾಯಿಗಳ ಪ್ರತಿಫಲವನ್ನು ಕೊಟ್ಟ ತರುಣನು ಈ ವೆಂಕಟರಾಮನೇ ಆಗಿದ್ದನು.

---

# ನನ್ನ ಆತ್ಮಕ್ಕೆ ಶಾಂತಿಯನ್ನು ನೀಡುವಿರಾ?

ಒಂದು ಚಿಕ್ಕ ಗುಡಿಸಲು. ಬಿದಿರು ದಬ್ಬೆ ಮತ್ತು ಹುಲ್ಲು ಇವುಗಳಿಂದ ಅದು ನಿರ್ಮಿತವಾಗಿದ್ದರೂ ನೋಡುವದಕ್ಕೆ ಅತ್ಯಂತ ಸುಂದರವಾಗಿದೆ. ಅದನ್ನು ಅಲೋಕಿಸಿದೊಡನೆಯೇ ಒಬ್ಬ ಕಲೋಪಾಸಕನ ಹಸ್ತವು ಅದರಲ್ಲಿ ಸೇರಿದೆ, ಎಂಬುದನ್ನು ತಿಳಿದುಕೊಳ್ಳಬಹುದು. ಗುಡಿಸಿಲಿನ ಜಗುಲಿಯು ನುಣ್ಣಗಿದ್ದು ಹೊಳೆಯುತ್ತಲಿದೆ. ಗುಡಿಸಿಲಿನ ಮುಂದೆ ಹೂದೋಟವೊಂದಿದೆ; ವಿವಿಧ ಜಾತಿಯ ಹೂಗಳು ತಮ್ಮ ಬಣ್ಣವನ್ನು ಚೆಲ್ಲುತ್ತ, ಪ್ರೇಕ್ಷಕನ ನೇತ್ರಗಳಿಗೆ ಆನಂದವನ್ನು ಪ್ರದಾನ ಮಾಡುತ್ತಲಿವೆ. ಹಲವು ಕಾಯಿಪಲ್ಲೆಗಳ ಗಿಡಗಳು ಫಲನಿಬಿಡವಾಗಿ ರಾಜಿಸುತ್ತ ನಿಂತಿರುತ್ತವೆ. ಅಲ್ಲಿನ ವಾತಾವರಣವು ಅತ್ಯಂತ ಶಾಂತವಾಗಿದ್ದು, ಅದರೊ

ಳಗೆ ಪ್ರವೇಶಿಸಿದವರ ಹೃದಯಗಳಲ್ಲಿ ಒಂದು ವಿಧದ ಪವಿತ್ರಭಾವನೆಯು ಸಂಜಾತ ವಾಗುವಂತೆ ಮಾಡುತ್ತಲಿದೆ!

ಈ ಗುಡಿಸಿಲನ್ನು ಆ ಊರಿನ ಜನರು "ಸಾಧನ ಕುಟೀರ" ವೆಂದು ಕರೆಯುತ್ತ ಲಿದ್ದರು. ಅಲ್ಲಿ ವಾಸಮಾಡುತ್ತಿರುವ ನಳಿನೀರಂಜನ ಎಂಬುವವನನ್ನು ಊರಿನ ಜನರು 'ಸ್ವಾಮಿ' ಎಂಬುದಾಗಿ ಸಂಬೋಧಿಸುತ್ತಿದ್ದರು. ನಳಿನೀರಂಜನನ ಸ್ವಂತ ಊರು ವಂಗನಾಡು; ಸುಪ್ರಸಿದ್ಧ ಚಿಂತಕರಿಗೂ, ದೇಶಾಭಿಮಾನಿಗಳಿಗೂ, ಯೋಗಿ ಗಳಿಗೂ ಜನ್ಮದಾನವನ್ನು ಮಾಡಿದ ಬಂಗಾಳ ಪ್ರಾಂತ್ಯದಿಂದ ಅವನು ಬಂದಿದ್ದನು. ನಳಿನೀರಂಜನನ ಕತೆಯು ಅತ್ಯಂತ ದುಃಖಕರವಾದುದು; ಅವನು ಒಂದು ಕಾಲದಲ್ಲಿ ಕಲ್ಕತ್ತಾನಗರದಲ್ಲಿ ಒಬ್ಬ ಸುಪ್ರಸಿದ್ಧ ನ್ಯಾಯವಾದಿಯಾಗಿದ್ದನು; ಆದರೆ ಅವನ ಮಗನ ಅಕಾಲನಿರ್ಯಾಣವು ಅವನ ಹೃದಯದಲ್ಲಿ ಲೌಕಿಕ ಜೀವನವನ್ನು ಕುರಿತು ವಿರಕ್ತಿಯು ಹುಟ್ಟುವಂತೆ ಮಾಡಿತು. ಅತ್ಯಂತ ಮಮತೆಯಲ್ಲಿ ಸಾಕಿ ಸಲಹಿದ ಮುದ್ದುಮಗನು ಕಣ್ಮರೆಯಾಗಲು, ಅವನಿಗೆ ಜಗತ್ತೇ ನಶ್ವರವೆಂದೂ, ಲೌಕಿಕ ಸುಖಗಳ ಅಂತ್ಯವು ದುಃಖಾನುಭವವಾಗಿಯೆಂದೂ ಉಳ್ಳ ತತ್ವಗಳು ಹೊಳೆದುವು. ಮನುಷ್ಯನು ಮಾಡುತ್ತಿರುವ ಪ್ರಯತ್ನಗಳೆಲ್ಲವೂ ವ್ಯರ್ಥ! ಯಾವುದೋ ಒಂದು ಶಕ್ತಿಯು ಬಂದು ಅವನ ಶರೀರವನ್ನು ಮೆಟ್ಟಿ ನಗೆಯುತ್ತಲಿದೆ! ಸಾವನ್ನು ಗೆದ್ದು ಮೃತ್ಯುಂಜಯನಾಗುವುದೇ ಜೀವನದ ಗುರಿಯು!

ಶಾಂತಿಯನ್ನು ಹುಡುಕುವದಕ್ಕಾಗಿ ಅವನು ತನ್ನ ಸ್ವಗೃಹವನ್ನು ತ್ಯಜಿಸಿ ಅನ್ಯ ನಾಡುಗಳಲ್ಲಿ ಅಲೆದನು. ತತ್ವಶಾಸ್ತ್ರಜ್ಞರನ್ನೂ, ಯೋಗಿಗಳನ್ನೂ ದರ್ಶಿಸಿ, ಮನ ಸ್ಸ್ವಾತ್ಮಕ್ಕೆ ಶಾಂತಿಯು ದೊರಕುವ ದಾರಿಯಾವುದೆಂದು ಪ್ರಶ್ನಿಸಿದನು ಮನ ಸ್ಸನ್ನು ಸದಾ ಪೀಡಿಸುತ್ತಲಿರುವ ಶೋಕದ ಬೆಂಕಿಯ ಜ್ವಾಲೆಗಳಿಂದ ವಿಮೋಚನೆ ಯನ್ನು ಪಡೆಯುವುದು ಹೇಗೆಂದು ಅವನು ಚಿಂತಿಸಿದನು. ತತ್ವಶಾಸ್ತ್ರಜ್ಞರಾಗಲೀ, ಯೋಗಿಗಳಾಗಲೀ, ವಿದ್ವಾಂಸರಾಗಲೀ ನಳಿನೀರಂಜನನ ಮನಸ್ಸಿನಲ್ಲಿ ಮೂಡಿರುವ ಚಿಂತೆಗಳಿಗೆ ಸಮರ್ಪಕವಾದ ಸಮಾಧಾನಗಳನ್ನು ನೀಡಲು ಶಕ್ತರಾಗಲಿಲ್ಲ. ನಳಿನೀ ರಂಜನನಾದರೂ ಪುತ್ರವಿಯೋಗ ದುಃಖಪೀಡಿತನಾಗಿ ವಿವಿಧ ಪ್ರಾಂತಗಳಲ್ಲಿ ಅಲೆ ದನು. ಅನೇಕ ಸಂನ್ಯಾಸಿಗಳನ್ನೂ, ಯೋಗಿಗಳನ್ನೂ ನೋಡಿದನು; ಆದರೆ ಅವರು ಅವನ ಮನಸ್ಸಿಗೆ ಶಾಂತಿಯನ್ನು ಪ್ರದಾನ ಮಾಡಲಿಲ್ಲ.

ಹೀಗೆ ವಿವಿಧ ಊರುಗಳಲ್ಲಿ ಸಂಚರಿಸುತ್ತ ಅವನು ಋಷೀಕೇಶಕ್ಕೆ ತಲುಪಿ ದನು. ಋಷೀಕೇಶವು ಹಿಮಾಲಯ ಪರ್ವತದ ತಪ್ಪಲಲ್ಲಿರುವ ಒಂದು ರಮ ಣೀಯ ಪ್ರದೇಶವಾಗಿದೆ. ಉತ್ತರ ಭಾರತದ ಯೋಗಿಗಳಿಗೂ ತಪಸ್ವಿಗಳಿಗೂ ಅದು ನಿತ್ಯ ನಿಕೇತನವಾಗಿದೆ. ನಳಿನೀರಂಜನನು ಅಲ್ಲಿ ಅತ್ಯಂತ ತೇಜಸ್ವಿಯಾದ ಒಬ್ಬ ತರುಣ ತಪಸ್ವಿಯನ್ನು ಕಂಡನು. ಅವನೊಡನೆ ಮಾತನಾಡುವದರಿಂದ ತನ್ನ ಸಂದೇಹವು ನಿವಾರಣೆಯಾಗಬಹುದೆಂದು ನಳಿನೀರಂಜನನು ಅವನಿಗೆ:—"ಮನು

ಷ್ಯನು ಶೋಕದ ಬೆಂಕಿಯಿಂದ ಪಾರಾಗುವದು ಹೇಗೆ?" ಎಂಬುದಾಗಿ ಪ್ರಶ್ನಿಸಿದನು.

ಒಂದು ಎಳೆನಗೆಯನ್ನು ಚೆಲ್ಲಿದ ಅನಂತರ ತಪಸ್ವಿಯು ಹೇಳುತ್ತಾನೆ:— "ಮಗೂ, ತನ್ನನ್ನು ತಾನೇ ಮರೆಯುವದರಿಂದ!"

"ತನ್ನನ್ನು ತಾನೇ ಮರೆಯುವದೇ? ಅದು ಅಸಾಧ್ಯ!"

"ಅಸಾಧ್ಯವೆಂಬುದು ಮೂಢರ ವೇದಮಂತ್ರವು! ಮನುಷ್ಯನು ತಾನು ಬೇರೆ; ಲೋಕವು ಬೇರೆ, ಈ ರೀತಿ ಭಾವಿಸುವದರಿಂದ ಅವನು ಸಂಕಟಗಳನ್ನು ಅನುಭವಿಸ ಬೇಕಾಗಿ ಬರುತ್ತದೆ ಸುಖವನ್ನು ಹಂಬಲಿಸಿ ಮನುಷ್ಯನು ಪ್ರಯತ್ನಿಸುತ್ತಾನೆ. ಉದ್ಯಮ ಫಲವು ವಿಪರೀತವಾಗಿ ಭವಿಸಿದರೆ ಅವನು ಶೋಕ-ತಾಪಗಳಿಗೆ ಬಲಿ ಯಾಗುತ್ತಾನೆ. ಮೊದಲು ಈ ಉದ್ಯಮದಿಂದ ತನಗೆ ಸುಖವು ಸಿಗಬೇಕೆಂಬ ಆಗ್ರಹವು ಮನುಷ್ಯನಲ್ಲಿ ಇಲ್ಲದಿದ್ದರೆ, ತಾನು ಗೈದ ಯತ್ನದ ಫಲವು ತನ್ನಿಷ್ಟಕ್ಕೆ ವಿಪರೀತವಾಗಿದ್ದರೂ ಅವನು ಶೋಕವನ್ನು ಅನುಭವಿಸಬೇಕಾಗಿ ಬರುವದಿಲ್ಲ. ಏಕೆಂದರೆ, ಅನಾಸಕ್ತಿಯಿಂದ ಮಾಡಿದ ಕೆಲಸವು ಅವನ ಮನಸ್ಸಿನಲ್ಲಿ ದುಃಖವನ್ನು ಹುಟ್ಟಿಸಲಾರದು. ಕೇವಲ ನಿರಾಗ್ರಹದಿಂದ ಉದ್ಯಮಗಳಲ್ಲಿ ನಿರತನಾದ ಮಾನವನು ಶೋಕ ತಾಪಗಳ ಬಂಧನದಿಂದ ವಿಮುಕ್ತನಾಗುತ್ತಾನೆ"

"ಆದರೆ ಅನಾಸಕ್ತಿಯಿಂದ ಫಲದ ಮೇಲೆ ಆಶೆಯಿಲ್ಲದೆ ಉದ್ಯಮಿಸಲು ಮನು ಷ್ಯನು ಶಕ್ತನಾಗುವನೆ? ತನಗೆ ದೊರಕಬಹುದಾದ ಫಲದ ಆಶೆಯಿಂದ ಮಾನವನು ಪ್ರಯತ್ನಗಳಲ್ಲಿ ನಿರತನಾಗಿದ್ದಾನೆ. ಬಂಧು-ಬಾಂಧವರ ಮೃತ್ಯುವನ್ನು ವೀಕ್ಷಿಸಿ ದುಃಖಪರವಶನಾಗುತ್ತಾನೆ. ಇದರಿಂದ ನಿವಾರಣೆಯನ್ನು ಹೊಂದುವದು ಹೇಗೆ?"

"ಈ ಮೊದಲೇ ನಾನು ಹೇಳಿದಂತೆ 'ತಾನು' 'ಪರರು' ಎಂಬ ಬಣ್ಣದ ಕನ್ನ ಡಕಗಳನ್ನು ಧರಿಸುವದರಿಂದ ಲೋಕವು ಬೇರೆ, ತಾನು ಬೇರೆ ಎಂಬುದಾಗಿ ಮನುಷ್ಯ ನು ವಿಚಾರಿಸುತ್ತಿದ್ದಾನೆ! ತಾನು ತನ್ನ ಕುಟುಂಬವೆಂಬುದಾಗಿ ಅಭಿಮಾನಿಸುತ್ತಲಿದಾನೆ; ಆದರೆ ನಿಷ್ಪಕ್ಷವಾದ ಬುದ್ಧಿಯಲ್ಲಿ ನೋಡುವುದಾದರೆ, ಯಥಾರ್ಥವು ತಿಳಿದು ಬರು ತ್ತದೆ. ಮನುಷ್ಯನ ಆತ್ಮವು ನಿತ್ಯವು. ಅದು ತನ್ನ ಪಯಣದಲ್ಲಿ ಕೆಲವು ಸಮ ಯದ ವರೆಗೆ ವಿಶ್ರಾಂತಿಯನ್ನು ಹೊಂದಿದ ಮಾತ್ರದಿಂದ ಆ ವಿಶ್ರಾಮ ಪ್ರದೇಶವು ಎಂದಿಗೂ ಆತ್ಮನ ವಸ್ತುವಾಗಲಾರದು. ಆತ್ಮನು ಈ ವಿಶ್ರಾಮ ಪ್ರದೇಶಕ್ಕಿಂತ ತೀರ ವಿಭಿನ್ನನು! ಕೆಲವು ಕಾಲ ಈ ಗೃಹದಲ್ಲಿ (ದೇಹದಲ್ಲಿ) ವಿನೋದದಿಂದಿದ್ದು, ಅವನು ತನ್ನ ಪರ್ಯಟನವನ್ನು ಮುಂದುವರಿಸುತ್ತಾನಾದುದರಿಂದ ಅನಿತ್ಯವಾದ ಈ ವಿಶ್ರಾ ಮ ಗೃಹವು ಅವನದಾಗಲಾರದು. ನಾವು ಬೇರೊಂದೂರಿಗೆ ತೆರಳಿದಾಗ ಅಲ್ಲಿರುವ ಒಂದು ಹೋಟೆಲಿನಲ್ಲಿ ಊಟ ಮಾಡುತ್ತೇವೆ. ಆ ಹೋಟೆಲನ್ನು ತ್ಯಜಿಸಿ ಹೊರಗೆ ಬರುವಾಗ ನಮಗೆ ಯಾವ ದುಃಖವೂ ಆಗುವುದಿಲ್ಲ. ಆದರಂತೆಯೇ ಆತ್ಮನು ಈ ಲೋಕವೆಂಬ ವಿಶ್ರಾಂತಿಗೃಹದಲ್ಲಿ ಕೆಲವು ಕಾಲ ವಿನೋದಿಸುತ್ತಾನೆ. ಅವನಿಗೆ ಬಂಧು-ಬಾಂಧವರಿಲ್ಲ. ಶೋಕಸಂತಾಪಗಳಾಗಲೀ ಸುಖಭೋಗಗಳಾಲೀ ಅವನಿಗೆ

ಇರುವದಿಲ್ಲ. ಅವನು ನಿತ್ಯ ತೃಪ್ತನಿರುವದರಿಂದ, ಅತೃಪ್ತಿಯು ಅವನಲ್ಲಿರದು. ವೀತರಾಗ ಸ್ವರೂಪನವನು.''

''ಯೋಗಿರಾಜರೇ! ಹಾಗೆಂದ ಮೇಲೆ ಪರಿಪೂರ್ಣವಾದ ಆತ್ಮನೇಕೆ ಜನನ, ಮರಣ, ಸುಖದುಃಖ ಎಂಬೀ ರಜ್ಜುವಿನಿಂದ ಪೀಡಿತನಾಗುತ್ತಿರುವನು? ವೀತರಾಗ ಸ್ವರೂಪನಾದರೂ ಅವನೇಕೆ ರಾಗ-ದ್ವೇಷಗಳೆಂಬ ಕತ್ತಲೆಯಲ್ಲಿ ನರಳುತ್ತಿರುವನು?''

''ಮಗೂ! ನೀನು ಕೇಳುತ್ತಿರುವ ಪ್ರಶ್ನೆಯು ಮಹತ್ವವುಳ್ಳದ್ದಾಗಿದೆ! ಜೀವನ ವೆಂಬುದು ಪರಿಪೂರ್ಣತೆಯನ್ನು ಹೊಂದುವುದಕ್ಕಾಗಿ ಆತ್ಮನು ನಡೆಯಿಸುತ್ತಲಿರುವ ಒಂದು ಪ್ರವಾಸದ ಒಂದು ಭಾಗವಾಗಿರುತ್ತದೆ. ಆ ಪ್ರಾಪ್ಯಸ್ಥಾನವನ್ನು ಹೊಂದುವ ವರೆಗೆ ಈ ಪಯಣವು ಪೂರ್ತಿಯಾಗಲಾರದು. ಯಾವಾಗ ಆತ್ಮನು ಕರ್ಮಸಾಧನೆ ಗಾಗಿ ಧರಿಸಿದ ದೇಹವು ಶಿಥಿಲವನ್ನು ಹೊಂದುವುದೋ, ಆಗ ಅವನು ನಾವು ಹರಿದು ಹೋದ ವಸ್ತ್ರವನ್ನು ದೂರಕ್ಕೆಸೆದು ಹೊಸ ಬಟ್ಟೆಯನ್ನು ಧರಿಸುವಂತೆ, ಜೀರ್ಣಿಸಿ ರುವ ದೇಹವನ್ನು ಪರಿತ್ಯಜಿಸಿ ಹೊಸದೊಂದು ದೇಹವನ್ನು ಪಡೆಯುತ್ತಾನೆ. ಪೂರ್ಣತೆಯನ್ನು ಹೊಂದುವವರೆಗೆ ಆತ್ಮನು ಈ ರೀತಿಯಲ್ಲಿ ಹೊಸ ಹೊಸ ದೇಹ ಗಳನ್ನು ಧರಿಸುತ್ತಾ ಜನನ-ಮರಣಗಳನ್ನು ಅನುಭವಿಸಬೇಕಾಗಿ ಬರುತ್ತದೆ! ಆದುದ ರಿಂದಲೇ ಶ್ರೀಕೃಷ್ಣನು ಈ ಪ್ರಕಾರ ನುಡಿದಿರುತ್ತಾನೆ.

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನ।
ತಾನ್ಯಹಂ ವೇದಸರ್ವಾಣಿ ನತ್ವಂ ವೇತ್ಥಪರಂತಪ ॥

— ಪರಿಶುದ್ಧನೂ, ಅನಶ್ವರ ಸ್ವರೂಪನೂ, ಆದ ಆತ್ಮನೇಕೆ ರಾಗದ್ವೇಷಗಳೆಂಬ ಬಂಧನದಲ್ಲಿ ಸಿಲುಕಿದನು? ಎಂದು ನೀನು ಮೊದಲು ಪ್ರಶ್ನಿಸುತ್ತೀಯೆ? ಮೊದಲು ಅಖಂಡವಾಗಿದ್ದ ಆ ದಿವ್ಯ ಚೈತನ್ಯದಲ್ಲಿ ಈ ಲೋಕದಲ್ಲಿ ಕಾಣಿಸುತ್ತಿರುವ ಸಮಸ್ತ ಶಕ್ತಿಗಳು ಅಡಕವಾಗಿದ್ದುವು. ಕೇವಲಾನಂದಮಯ ಸ್ವರೂಪನಾದ ಆ ಪರಂಜ್ಯೋತಿ ಯಲ್ಲಿ ಸರ್ವವೂ ಲೀನವಾಗಿದ್ದಿತು. ಹೀಗೆ ಅಪರಿಚ್ಛಿನ್ನವಾದ ಅನಂತ ಶಕ್ತಿಯಲ್ಲಿ ಅಂತರ್ಗತವಾಗಿರುವ ಈ ಆತ್ಮನೆಂಬ ಅಣುವಿನಲ್ಲಿ "ನಾನು'' ಎಂಬ ಒಂದು ವಿಚಾರವು ಉತ್ಪನ್ನವಾಯಿತು. ''ನಾನು" ಎಂಬ ವಿಚಾರ ಬರಲು, ಆ ಅನಂತ ಶಕ್ತಿಯಿಂದ ಆತ್ಮನು ಬೇರೆಯಾಗಬೇಕಾಗಿ ಬಂದಿತು. ಏಕೆಂದರೆ, ಅಪರಿಚ್ಛಿನ್ನವಾದುದರಲ್ಲಿ ಪರಿ ಚ್ಛಿನ್ನ ಭಾವವನ್ನು ಹೊಂದಿದ ಆತ್ಮನಿಗೆ ಇರಲು ಸಾಧ್ಯವಾಗಲಿಲ್ಲ. ''ನಾನು'' ಎಂಬ ಮಲೀನತೆಯನ್ನು ಹೊಂದಿದ ಆತ್ಮನು ಪರಿಶುದ್ಧತೆಯನ್ನು ಹೊಂದುವದಕ್ಕಾಗಿ ಈ ಸ್ಥೂಲ ಜಗತ್ತು ರೂಪವನ್ನು ಹೊಂದಿತು. ಈ ಲೋಕದಲ್ಲಿ ಆತ್ಮನು ವಿವಿಧ ಆಕಾರ ಗಳನ್ನು ತಳೆದು ತಾನು ವಿಕಾಸವನ್ನು ಹೊಂದುವದಕ್ಕಾಗಿ ಉದ್ಯಮಿಸುತ್ತಲಿದ್ದಾನೆ; ಪುನಃ ಆ ಪರಂಜ್ಯೋತಿಯಲ್ಲಿ ಐಕ್ಯವನ್ನು ಹೊಂದುವುದಕ್ಕಾಗಿ ಪಯಣವನ್ನು ಮಾ- ಡುತ್ತಲಿದ್ದಾನೆ. ಈ ರೀತಿ ಮಲೀನತೆಯನ್ನು ಹೊಂದಿದ ಆತ್ಮನಲ್ಲಿರುವ "ನಾನು" ಎಂಬ ಭಾವವೇ ಸಕಲ ದುಃಖಗಳಿಗೂ ಮೂಲ ಕಾರಣವು! ತಾನು ಬೇರೆ, ಜಗತ್ತು

ಬೇರೆಯೆಂಬ ಭಾವನೆಯಿಂದ ತನ್ನ ಸುಖಗಳನ್ನು ಸಾಧಿಸುವದಕ್ಕಾಗಿ ಮನುಷ್ಯನು ಉದ್ಯಮಿಸುತ್ತಾನೆ, ಆದರೆ ವಾಸ್ತವದಲ್ಲಿ ಫಲವು ಪರಿಣಮಿಸುವದು ಆ ರೀತಿಯಲ್ಲಿಯಲ್ಲ. ಲೋಕವೂ ಆತ್ಮವೂ ಒಂವೇ ಆಗಿರುತ್ತವೆ ಬಿಂಬ ಪ್ರತಿಬಿಂಬಗಳಂತೆ! ಪರರನ್ನು ಹಿಂಸಿಸಿ ತಾನು ಸುಖಿಸಬೇಕೆಂದು ಬಯಸುವದರಿಂದ ಮನುಷ್ಯನು ದುಃಖವನ್ನೇ ಅನುಭವಿಸುತ್ತಾನೆ ಇದಕ್ಕೆ ಕಾರಣವು, ಅವನ ಆತ್ಮವು ವಿಶ್ವಾತ್ಮನ ಒಂದು ಅಂಶವಾಗಿರುವದರಿಂದ ಅನ್ಯರಿಗೆ ಬಯಸಿದ ಕೇಡು ಅವನಿಗೆ ಬಂದೇ ಬರುತ್ತದೆ!''

ಆ ತರುಣ ತಪಸ್ವಿಯ ಅಮೋಘವಾದ ಈ ಉಪದೇಶವನ್ನು ಕೇಳಿ ಶೋಕಾನಲದಿಂದ ಪ್ರಜ್ವಲಿಸುತ್ತಿರುವ ನಳಿನೀರಂಜನನ ಹೃದಯವು ಶಾಂತತೆಯನ್ನು ಹೊಂದಲಾರಂಭಿಸಿತು. ಅಂತ್ಯದಲ್ಲಿ ಅವನಿಗೆ ಶಾಂತಿಸಂದೇಶವನ್ನು ನೀಡಬಲ್ಲ ಒಬ್ಬ ಗುರುರಾಜನು ಲಭಿಸಿದನು. ತಾನು ಶಾಂತಿಯನ್ನು ಹೊಂದಬೇಕಾದರೆ, ಏನು ಮಾಡಬೇಕೆಂದು ತಿಳಿಯಲು ಕುತೂಹಲಚಿತ್ತನಾಗಿ ನಳಿನೀರಂಜನನು ಆ ತಪಸ್ವಿಯನ್ನು ಪ್ರಶ್ನಿಸುತ್ತಾನೆ:—''ಯೋಗಿರಾಜ! ನಾನು ಶಾಂತಿಯನ್ನು ಹೊಂದಬೇಕಾದರೆ ಏನು ಮಾಡಬೇಕೆಂಬುದನ್ನು ಕರುಣೆದೋರಿ ಉಪದೇಶಿಸುವಿರಾ?''

''ಮಗೂ, ಆ ಪರಂಜ್ಯೋತಿಯ ಆರಾಧನೆಯಿಂದ ನೀನು ಆಗ್ರಹಿಸುತ್ತಿರುವ ಶಾಂತಿಸುಖವು ಲಭಿಸುವದು'' ಎಂದು ತನ್ನ ಸ್ವಾಭಾವಿಕವಾದ ಮಂದಸ್ಮಿತವನ್ನು ಹೊರಚೆಲ್ಲಿ ತಪಸ್ವಿಯು ನುಡಿದನು.

''ಆದರೆ ಮಹಾರಾಜ! ಆ ಪರಮಾತ್ಮನ ಆರಾಧನೆಗಿರುವ ದಾರಿಯಾವುದು?''

''ಈ ಲೋಕವೇ ಆ ಪರಮಾತ್ಮನ ದೇಗುಲವು! ಈ ಜಗತ್ತಿನಲ್ಲಿ ಜೀವಿಸುತ್ತಿರುವ ಮಾನವರೂ ಚರಾಚರ ಜೀವಿಗಳೂ ಆ ಪುಣ್ಯಪುರುಷನ ಪ್ರತೀಕಗಳು! ಆದುವರಿಂದ ಬಲ್ಲವರು ಹೇಳುತ್ತಾರೆ, ಸಜೀವ ಪ್ರತೀಕಗಳಾರಾಧನೆಯಿಂದ ಸಾಯುಜ್ಯವನ್ನು ಸಾಧಿಸುವದೇ ಮೇಲೆಂದು.

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂಚ ಭೂತಾನಾಮಂತ ಏವಚ ॥

ಎಂದು ಗೀತೆಯಲ್ಲಿ ನುಡಿದಿರುವದರಿಂದ ಲೋಕದ ಸರ್ವಪ್ರಾಣಿಗಳ ಹೃದಯಗಳಲ್ಲಿ ಬೆಳಗುತ್ತಿರುವ ಆ ದಿವ್ಯ ಚೈತನ್ಯದ ಸಾಕ್ಷಾತ್ಕಾರವನ್ನು ಹೊಂದುವದು ಶ್ರೇಷ್ಠವು. ಆದುದರಿಂದ ನಿಷ್ಕಾಮವಾದ ಜನಸೇವೆಯಿಂದ ಆ ಬೆಳಕಿನ ದರ್ಶನ ಹೊಂದಬಹುದು.''

''ಆದರೆ ಮಹಾತ್ಮಾ! ಸಂಸಾರಕಡಲಿನಲ್ಲಿ ನೊಂದು ಬಂದವನು ನಾನು. ಆ ಕರ್ಮದ ಕಡಲಿನಲ್ಲಿಯೇ ಪ್ರವೇಶಿಸಲು ಏಕೆ ನನ್ನನ್ನು ಪ್ರೇರೇಪಿಸುತ್ತಿರುವಿರಿ?''

''ಮಗೂ, ಈ ಜಗತ್ತಿನಲ್ಲಿ ಮೋಕ್ಷಸಾಧನೆಗೆ ನಾಲ್ಕು ದಾರಿಗಳು ಹೇಳಲ್ಪಟ್ಟಿರುತ್ತವೆ. ಕರ್ಮ, ಜ್ಞಾನ, ಭಕ್ತಿ, ಯೋಗ ಎಂಬಿವುಗಳೇ ನಾಲ್ಕು ದಾರಿಗಳು. ಇವರಲ್ಲಿ ಜ್ಞಾನವು ಅಸಾಮಾನ್ಯ ಮನಃಶಕ್ತಿಯುಳ್ಳವರಿಂದಲ್ಲದೇ ಇತರರಿಂದ ಸಾಧ್ಯವಿಲ್ಲ. ಹಲವು ವಿಧ ಅಭ್ಯಾಸಗಳಿಂದ ಶರೀರವನ್ನು ಬಳಲಿಸಬೇಕಾಗಿ ಬರುತ್ತದೆ ಯೋಗ

ಸಾಧನೆಗೆ. ಭಕ್ತಿರಸವನ್ನುಣ್ಣಬೇಕಾದರೆ ಮನುಷ್ಯನ ಆತ್ಮವು ಪರಿಪಕ್ವವಾಗಿರಬೇಕು; ಸಾಧಕನು ಪ್ರೇಮರಸದ ರುಚಿಯನ್ನು ಅರಿತಿರಬೇಕು, ಆದರೆ ಕರ್ಮವು ಹಾಗಲ್ಲ. ಸಂಸಾರಿಗನಾದ ಮನುಷ್ಯನು ತನ್ನ ಸಂಸಾರದಲ್ಲಿಯೇ ಇದ್ದುಕೊಂಡು ಆ ಧ್ಯೇಯವನ್ನು ಸಾಧಿಸಬಹುದು. ಇದಲ್ಲದೆ ಇಂದಿನ ಭಾರತವರ್ಷದ ಸ್ಥಿತಿಯು ಕರ್ಮಯೋಗಕ್ಕೆ ಅನುಕೂಲವಾಗಿದೆ. ಒಂದು ಕಾಲದಲ್ಲಿ ಮಹಾತ್ಮರ ಹಾಗು ತ್ಯಾಗಿಗಳ ನಾಡಾದ ಭಾರತವರ್ಷವು ಇಂದು ವಿದೇಶೀಯ ಸಂಸ್ಕೃತಿಯ ಪ್ರಸಾರದಿಂದ, ಧಾರ್ಮಿಕ, ನೈತಿಕ ಹಾಗು ಶಾರೀರಿಕ ಅಧಃಪತನವನ್ನು ಹೊಂದಿ, ಶೋಕಗ್ರಸ್ತವಾಗಿರುವದು. ಭಾರತಾಂಬೆಯ ನಾಡೀಸ್ಪಂದನದ ವೇಗವು ಕಡಿಮೆಯಾಗುತ್ತಾ ಬರುತ್ತಿದೆ. ಭಾರತವರ್ಷವು ಮರಣ ಶಯ್ಯೆಯಲ್ಲಿದೆ! ಆದರೆ ಲೋಕಕ್ಕೆ ಭಾರತವರ್ಷದ ಆವಶ್ಯಕತೆಯಿದೆ! ಪ್ರಾಚೀನ ಕಾಲದಲ್ಲಿ ವಿಶ್ವಕ್ಕೆ ಆಧ್ಯಾತ್ಮಿಕ ಜ್ಯೋತಿಯನ್ನು ಬೀರಿದ ಭಾರತಭೂಮಿಯು ಭವಿಷ್ಯತ್ಕಾಲದಲ್ಲಿಯೂ ಸಹ ಲೋಕಕ್ಕೆ ಒಂದು ಮಹತ್ತಾದ ದಿವ್ಯ ಸಂದೇಶವನ್ನು ನೀಡಬೇಕಾಗಿದೆ. ಅಧಃಪತನದ ದಾರಿಯನ್ನು ಹಿಡಿದ ಇತರ ಜನಾಂಗಗಳನ್ನು ಅವಳು ಕೈ ಹಿಡಿದು ಎತ್ತಬೇಕು. ಇಂದಿನ ವಿಶ್ವಕ್ಕೆ ಕಲ್ಯಾಣವಾಗಬೇಕಾದರೆ, ಭಾರತವರ್ಷವು ಉಳಿಯಬೇಕು. ಆರ್ಯಮಾತೆಯು ಹೊಸದಾದ ಚೈತನ್ಯವನ್ನು ಬೀರಲು ಸಶಕ್ತಳಾಗಿರಬೇಕು, ಆದರೆ ಇಂದಿನ ಭಾರತವರ್ಷವು ಅಜ್ಞಾತೆಯ ಮನೆಯು! ಅಂಧವಿಶ್ವಾಸಗಳಿಂದ ತುಂಬಿ ತುಳುಕುತ್ತಿರುವ ನರಹುಳಗಳ ಗೂಡು! ಮತಗಳ ಹೆಸರಿನಲ್ಲಿ ಅನಾಚಾರಗಳನ್ನು ನಡೆಯಿಸುತ್ತ ಅನ್ಯ ಧರ್ಮಗಳ ಮೇಲೆ ವಿಷವನ್ನು ಕಾರುತ್ತ, ತಮ್ಮ ನೆತ್ತರನ್ನು ತಾವೇ ಕುಡಿಯಲು ಬಯಸುತ್ತಿರುವವರಿಂದ ನಿಬಿಡವಾಗಿದೆ. ಹಿಂದೆ ಬೆಳಗಿದ ಮಹಾವೀರರ, ಮಹಾರಥರ ನೆತ್ತರು ಇಂದು ಭಾರತವರ್ಷದಲ್ಲಿ ನೋಡ ಸಿಗಲಾರದು. ಬಲಹೀನತೆ, ಅಜ್ಞಾತೆ, ಅಹಂಭಾವ ಎಂಬಿವುಗಳೇ ಇಂದಿನ ಭಾರತೀಯನ ಗುಣ-ಸಂಪತ್ತುಗಳು! ಎಂದಿನವರೆಗೆ ಭಾರತವರ್ಷದಲ್ಲಿ ಈ ಬಲಹೀನತೆಯು ನೆಲೆನಿಂತಿರುವದೋ, ಅಂದಿನವರೆಗೆ ಭಾರತದ ಉದ್ಧಾರವಾಗಲಾರದು. ಲೋಕಕ್ಕೆ ಭಾರತವರ್ಷವು ಬೆಳಕನ್ನು ಬೀರಬೇಕಾದರೆ, ಮೊದಲು ಶಕ್ತಿಸಂಪನ್ನವಾಗಬೇಕು. ಧಾರ್ಮಿಕ, ನೈತಿಕ ಮತ್ತು ಶಾರೀರಿಕ ಬಲಗಳನ್ನು ಭಾರತೀಯರು ಸಂಪಾದಿಸಬೇಕು. ಜ್ಞಾನಸೂರ್ಯನ ಉದಯದಿಂದ ಅಜ್ಞಾತೆ, ಅಂಧವಿಶ್ವಾಸಗಳೆಂಬ ತಿಮಿರಗಳು ನಾಶವಾಗಬೇಕು. ಸತ್ಯದ ರೂಪವು ಭಾರತೀಯನಲ್ಲಿ ನೆಲೆನಿಲ್ಲಬೇಕು. ಇಂದಿನ ರೀತಿಯಲ್ಲಿ ಇನ್ನೊಂದು ಶತಮಾನದ ವರೆಗೆ ಭಾರತವರ್ಷವು ನಿದ್ರೆಯಲ್ಲಿ ಬಿದ್ದರೆ, ನಾಡು ಸಂಪೂರ್ಣವಾಗಿ ಪೌರುಷಶೂನ್ಯವಾಗುವದರಲ್ಲಿ ಸಂದೇಹವಿಲ್ಲ. ಆದುದರಿಂದ ಮಗೂ, ಆ ಶಾಂತಿಯನ್ನು ಸಾಧಿಸಲು ನೀನು ಬಯಸುತ್ತಿರುವೆಯಾದರೆ ,ಈ ಕರ್ಮದ ದಾರಿಯನ್ನೇ ಸ್ವೀಕರಿಸಬೇಕಾಗಿರುವದು. ಇದರಿಂದ ನೀನು ಶಾಂತಿಯನ್ನು ಪಡೆಯುವದಲ್ಲದೆ, ನಮ್ಮ ನಾಡಿನ ಜನರೂ ಪ್ರಯೋಜನವನ್ನು ಹೊಂದುವರು. ಈ ವಿಶ್ವವು ಆ ಪರಮಾತ್ಮನ ಒಂದು ಅಂಶವಾಗಿರುವದರಿಂದ ವಿಶ್ವ

ಹಿತವನ್ನು ಚಿಂತಿಸಿ, ಫಲಕಾಂಕ್ಷೆಯಿಲ್ಲದೆ ಮಾಡುತ್ತಿರುವ ಉದ್ಯಮವು ಈಶ್ವರಾರಾಧನೆಯ ಬೇರೊಂದು ರೂಪವಾಗಿದೆ. ಜನತೆಯನ್ನೇ ಪರಂಜ್ಯೋತಿಯ ಅಂಗವೆಂದು ವಿಚಾರಿಸಿ, ಜನಸೇವೆಗಾಗಿ ಹೊರಡು! ಪ್ರೇಮವೇ ನಿನ್ನ ಮಂತ್ರವಾಗಿರಲಿ! ತ್ಯಾಗವೇ ನಿನ್ನ ಯೋಗ! ಅವಿಶ್ರಾಂತ ಉದ್ಯಮವೇ ನಿನ್ನ ತಪಸ್ಸು! ಹೊರಡಿನ್ನು. ನಿದ್ರೆಯಿಂದ ನೀನು ಜಾಗ್ರತನಾಗಿರುತ್ತೀಯೋ! ಜನತೆಯ ಸಂಕಟವನ್ನು ತಿಳಿದು, ಅವರಲ್ಲಿ ಪರಡಿರುವ ಅಜ್ಞತೆಯನ್ನೂ ಅಂಧವಿಶ್ವಾಸಗಳನ್ನೂ ಹೋಗಲಾಡಿಸಿ, ಅವರನ್ನು ಸಬಲರನ್ನಾಗಿ, ಪೌರುಷವಂತರನ್ನಾಗಿ ಮಾಡಲು ಪ್ರಯತ್ನಿಸು! ಜನಸೇವೆಯೇ ನಿನ್ನ ಗುರಿಯು!"

ಆ ತಪಸ್ವಿಯ ಅಮೋಘವಾದ ಉಪದೇಶವು ನಳಿನೀರಂಜನನ ಮನಸ್ಸನ್ನು ಸೂರೆಗೊಂಡಿತು. ಅವನಲ್ಲಿ ಹೊಸದೊಂದು ಶಕ್ತಿಯು ಸಂಜಾತವಾದಂತೆ ತೋರಿತು. ಅವನಲ್ಲಿದ್ದ ಶೋಕಗಳು, ಬೇಸರಿಕೆಗಳು ಮಾಯವಾದುವು. ಹೊಸದೊಂದು ಜನ್ಮವು ಅವನಿಗೆ ಲಭಿಸಿದಂತೆ ಭಾಸವಾಯಿತು. ಆ ತಪಸ್ವಿಯು ಅಯಸ್ಕಾಂತವು ಕಬ್ಬಿಣವನ್ನು ಆಕರ್ಷಿಸುವಂತೆ ನಳಿನೀರಂಜನನ ಮನಸ್ಸನ್ನು ಆಕರ್ಷಿಸಿದ್ದನು. ಭಕ್ತಿಯಿಂದ ಆ ಯೋಗೀಶ್ವರನ ಚರಣಗಳಿಗೆ ನಮಿಸಿ ನಳಿನೀರಂಜನನು ನುಡಿದನು: "ಯೋಗೀರಾಜ! ತಮ್ಮ ಚರಣಸೇವೆಯಿಂದ ಕೃತಾರ್ಥನಾಗಬೇಕೆಂಬುವೇ ನನ್ನ ಬಯಕೆಯು! ತಮ್ಮ ದರ್ಶನದಿಂದ ನಾನು ಶಾಂತಿಪೀಯೂಷದ ಸವಿಯನ್ನು ಕಂಡೆನು. ತಮ್ಮ ದಾಸನನ್ನಾಗಿ ಈ ದೀನನನ್ನು ಸ್ವೀಕರಿಸಿರಿ!"

ಎಳೆನಗೆಯನ್ನು ಬೀರಿ ಸನ್ಯಾಸಿಯು ನುಡಿಯುತ್ತಾನೆ "ಮಗೂ, ಬೇಸರಪಡಬೇಡ. ಆಧುನಿಕ ಭಾರತದ ಸೂರ್ಯನು ಉದಯವನ್ನು ಹೊಂದುತ್ತಲಿರುವ ಕಾಲವು ಸಂಪ್ರಾಪ್ತವಾಗುತ್ತಲಿದೆ! ಉದಯಭಾನುವಿನ ಆಗಮನ ಸಂದೇಶವನ್ನು ವಿಶ್ವಕ್ಕೆ ಉಷಾಕಾಲದಲ್ಲಿ ಅರುಹುತ್ತಿರುವ ಕುಕ್ಕುಟದ ಕೆಲಸವನ್ನು ಮಾತ್ರ ನೀನು ಮಾಡು! ಆ ಪುಣ್ಯ ಗ್ರಂಥದ ಪೀಠಿಕೆಯನ್ನು ಮಾತ್ರ ನೀನು ಉಲ್ಲೇಖಿಸು! ಆ ಮಹದ್ಗ್ರಂಥವನ್ನು ಬರೆಯಲು ಬೇರೊಬ್ಬ ವ್ಯಕ್ತಿಯು ಬರುತ್ತಾನೆ. ಆ ಕಾಲವು ಬಂದರೆ ನಾನೇ ಬಂದು ನಿನಗೆ ದರ್ಶನವನ್ನಿತ್ತು, ನಿನ್ನನ್ನು ತಪಸ್ಸಿಗಾಗಿ ಸಂಗಡ ಕರೆದೊಯ್ಯುತ್ತೇನೆ!"

"ಮಹಾರಾಜರೇ, ತಮ್ಮ ಮಾತಿನಂತೆಯೇ ಆಗಲಿ!"

"ಕಂದಾ, ಹಾಗಾದರೆ ಈ ಮಂಗಳ ಪ್ರಭಾತದಲ್ಲಿ ಉದಯಭಾರತದ ಮಂಗಳ ಗಾನವನ್ನು ಹಾಡು!"

ಯೋಗಿರಾಜನ ಉಪದೇಶದಂತೆ ಜನಸೇವೆಯನ್ನು ಗೈದು ಶಾಂತಿಯನ್ನು ಸಾಧಿಸಲು ಹೊರಟನು ನಳಿನೀರಂಜನನು. ಆ ತಪಸ್ವಿಯು ಈತನ ಗುರುದೇವನಾದನು. ಗುರುವಿನ ಉಪದೇಶಗಳಂತೆ ತನ್ನ ಸಾಧನೆಯನ್ನು ನೆರವೇರಿಸಲು ನಳಿನೀರಂಜನನು ಉದ್ಯುಕ್ತನಾದನು. ಅವನು ದಕ್ಷಿಣ ಭಾರತದಲ್ಲಿರುವ ಶಿವಪುರವೆಂಬ ಒಂದು ಗ್ರಾಮಕ್ಕೆ ಬಂದನು. ನಿಸರ್ಗದೇವತೆಯ ಕೇಳೀಭೂಮಿಯಾದ ಆ ಗ್ರಾಮವು ನಳಿನೀರಂಜನನ ಮನಸ್ಸನ್ನು ಆಕರ್ಷಿಸಿತು. ಮನೋಹರವಾದ ಸೃಷ್ಟಿಸೌಂದರ್ಯವು ಅವನ ಆತ್ಮ

ವನ್ನು ಹರ್ಷಗೊಳಿಸಿತು. ಕಲಕಲನೆ ಹಾಡುತ್ತ ಹರಿಯುತ್ತಿರುವ ಒಂದು ನದಿಯ ತೀರದಲ್ಲಿ ಒಂದು ಕುಟೀರವನ್ನು ನಿರ್ಮಿಸಿ ನಳಿನೀರಂಜನನು ಅಲ್ಲಿ ತನ್ನ ಸಾಧನೆಯನ್ನು ಪ್ರಾರಂಭಿಸಿದನು. ಈ ಗುಡಿಸಿಲೇ ಅನಂತರ "ಸಾಧನ ಕುಟೀರ"ವೆಂಬ ಹೆಸರಿನಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿತು.

ಜನಜೀವನದಲ್ಲಿ ಬೆರೆತು, ಜನತೆಯ ಕಷ್ಟ-ಸುಖಗಳನ್ನು ಅನುಭವಿಸಿ, ಅವರ ಬದುಕುಗಳಲ್ಲಿ ಬೆಳಕನ್ನು ತೋರುವುದಾಗಿದ್ದಿತು ನಳಿನೀರಂಜನನ ಸಾಧನೆಯ ಉದ್ದೇಶವು! ಅವನು ಗ್ರಾಮೀಣರೊಡನೆ ಬೆರೆತು ಅವರ ಪರಿಚಯವನ್ನು ಸಂಪಾದಿಸಿದನು. ನಿರಕ್ಷರಕುಕ್ಷಿಗಳಾದ ರೈತ ಜನರಿಗಾಗಿ ಒಂದು ರಾತ್ರಿಯ ಪಾಠಶಾಲೆಯನ್ನು ಸ್ಥಾಪಿಸಿ, ಜನರಿಗೆ ಅಕ್ಷರಜ್ಞಾನವು ಲಭಿಸುವಂತೆ ಪ್ರಯತ್ನಿಸಿದನು. ನೊಂದ ಜನರ ದುಃಖವನ್ನು ಪರಿಹರಿಸಲು ಅವನು ಅತ್ಯಂತ ಹರ್ಷದಿಂದ ಮುಂದೆ ಬರುತ್ತಿದ್ದನು. ಗ್ರಾಮದಲ್ಲಿ ಯಾರಿಗಾದರೂ ಕಾಹಿಲೆಯಾದರೆ ತನ್ನಿಂದ ಸಾಧ್ಯವಾಗಬಹುದಾದ ವೈದ್ಯ ಶುಶ್ರೂಷೆಯನ್ನು ನಳಿನೀರಂಜನನು ನೀಡುತ್ತಿದ್ದನು. ರೋಗಿಯನ್ನು,-ಅವನು ಅಂತ್ಯಜನಾಗಿದ್ದರೂ ಸರಿಯೆ,-ಯಾವ ಬೇಸರವೂ ಇಲ್ಲದೆ ಅವನನ್ನು ಶುಶ್ರೂಷಿಸಿ ರಕ್ಷಿಸುತ್ತಿದ್ದನು. ಈ ಕೆಲಸಗಳಲ್ಲಿ ಅವನಿಗೆ ಬೇಸರವಿಲ್ಲ. ಪ್ರತಿಯೊಂದು ಗುಡಿಸಿಲಿಗೂ ಅನುದಿನವೂ ತೆರಳಿ, ಅಲ್ಲಿರುವ ಗಂಡಸು ಮತ್ತು ಹೆಂಗಸು ಇವರೊಡನೆ ಯೋಗಕ್ಷೇಮಗಳನ್ನು ವಿಚಾರಿಸಿ, ಸಂದರ್ಭ ದೊರೆತಾಗಲೆಲ್ಲಾ ನಳಿನೀರಂಜನನು ಅವರಿಗೆ ಧಾರ್ಮಿಕ ಹಾಗೂ ನೈತಿಕ ಉಪದೇಶಗಳನ್ನು ನೀಡಿ, ಅವರ ಹೃದಯಗಳಲ್ಲಿ ಹರಡಿರುವ ಅಜ್ಞತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದನು. ತರುಣರನ್ನೆಲ್ಲಾ ತನ್ನ ಕುಟೀರಕ್ಕೆ ಕರೆದುಕೊಂಡು ಬಂದು, ಅವರಿಗೆ ಗತಕಾಲದ ಮಹಾತ್ಮರ ಚರಿತ್ರೆಗಳನ್ನೆಲ್ಲಾ ವಿವರಿಸಿ ಹೇಳಿ, ಅವರ ಮನಸ್ಸು ದೃಢವೂ ವಿಶಾಲವೂ ಆಗುವಂತೆ ಉದ್ಯಮಿಸುತ್ತಿದ್ದನು.

ಇದಲ್ಲದೆ ತನ್ನ ಕುಟೀರದಲ್ಲಿ ಜನರಿಗೆ ಕಾರ್ಮಿಕ ಶಿಕ್ಷಣವನ್ನು ನೀಡಲು ಆವಶ್ಯವಿರುವ ಏರ್ಪಾಡುಗಳನ್ನು ನಳಿನೀರಂಜನನು ಒದಗಿಸಿದನು. ಸ್ವಾವಲಂಬನೆಯಿಂದಲ್ಲದೆ, ಇತರ ದಾರಿಗಳಿಂದ ಮನುಷ್ಯನ ಬುದ್ಧಿಯು ಬೆಳವಣಿಗೆಯನ್ನು ಹೊಂದಲಾರದು. ಇದಲ್ಲದೆ ಉತ್ಪಾದನಾಶಕ್ತಿಯು ಇಲ್ಲದುದರಿಂದ ಬಡತನವು ಜನತೆಯಲ್ಲಿ ಹೆಚ್ಚುತ್ತದೆ, ಎಂಬುದನ್ನು ಅವನು ತಿಳಿದಿದ್ದನು. ನಾಡಿನ ಪರಿಸ್ಥಿತಿಯು ಮಾನವನ್ನು ಮುಚ್ಚಲಾವಶ್ಯವಿರುವ ಒಂದು ಗೇಣು ಬಟ್ಟೆಯು ದೊರಕಬೇಕಾದರೂ ಅನ್ಯರನ್ನು ಆಶ್ರಯಿಸಬೇಕೆಂಬುವಷ್ಟು ಹೀನ ಸ್ಥಿತಿಗೆ ಬಂದು ತಲುಪಿದ್ದಿತು. ಪರಾಧೀನತೆಯ ಮಹಾಭಾರವು ಭಾರತವರ್ಷದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನ ಮೇಲಿರುವುದನ್ನು ನಳಿನೀರಂಜನನು ನೋಡಿದನು. ಸ್ವಾವಲಂಬನೆಯೇ ನಿವಾರಣೆಗಿರುವ ದಾರಿಯು! ಕೂಳಿನಾಶೆಯಿಂದ ಅನ್ಯರ ಆಳುಗಳಾಗಿ ತಮ್ಮ ಆತ್ಮಗಳನ್ನು ಮಲಿನ ಪಡಿಸದಿರಬೇಕಾದರೆ, ಇಂದಿನ ತರುಣರಿಗೆ ಕಾರ್ಮಿಕ ಶಿಕ್ಷಣವು ಲಭಿಸಬೇಕೆಂಬುದಾಗಿತ್ತು ನಳಿನೀರಂಜನನ ಅಭಿಪ್ರಾಯವು. ಈ ಅಭಿಪ್ರಾಯದಂತೆ ಅವನು ತನ್ನ ಕುಟೀರದಲ್ಲಿ

ನೂಲುವ ಮತ್ತು ನೇಯುವ ಒಂದು ಶಾಲೆಯನ್ನು ಸ್ಥಾಪಿಸಿದನು. ಬಡಿಗನ ಹಾಗು ಕಮ್ಮಾರನ ಶಿಕ್ಷಣಗಳನ್ನು ತನ್ನ ಕುಟೀರದಲ್ಲಿಯೇ ತರುಣರಿಗೆ ನೀಡಲಾರಂಭಿಸಿದನು. ವಿದ್ಯಾವಂತರಿಗೆ ಬೇಸಾಯದಲ್ಲಿರುವ ಅನಾಸಕ್ತಿಯನ್ನು ಹೋಗಲಾಡಿಸುವದಕ್ಕಾಗಿ ಸ್ವತಃ ತಾನೇ ಹೊಲದಲ್ಲಿ ಬೇಸಾಯಮಾಡಲಾರಂಭಿಸಿದನು.

ನಳಿನೀರಂಜನನು ಅವಿಶ್ರಾಂತವಾಗಿ ಆರು ಸಂವತ್ಸರಗಳ ಕಾಲ ದುಡಿದನು; ಬೇಸರವಿಲ್ಲ; ಅದರಂತೆಯೇ ತಾನು ಮಾಡುತ್ತಿರುವ ಕೆಲಸಗಳಲ್ಲಿ ಅವನಿಗೆ ಆಸಕ್ತಿಯೂ ಇಲ್ಲ. ತಾನು ಯಾವ ಫಲವನ್ನಾದರೂ ಉಣ್ಣಬೇಕೆಂಬ ಆಗ್ರಹವು ಅವನಿಗಿಲ್ಲ. ಕೇವಲ ಉದ್ಯಮಕ್ಕೆ ಬೇಕಾಗಿ ಉದ್ಯಮಿಸುತ್ತಿದ್ದನು. ಅವನ ಸತತ ಪ್ರಯತ್ನಗಳ ಫಲವಾಗಿ ಆ ಗ್ರಾಮದಲ್ಲಿ ನವಜೀವನವು ಸ್ಫುರಿಸತೊಡಗಿತು ಜನತೆಯನ್ನು ಆವರಿಸಿದ್ದ ಅಜ್ಞಾತೆಯ ಕತ್ತಲೆಯು ಜ್ಞಾನಭಾಸ್ಕರನ ಉದಯದಿಂದ ಕ್ರಮೇಣ ಮಾಯವಾಗಲಾರಂಭಿಸಿತು. ನಿರಾಶೆ-ದುಃಖ ಇವುಗಳಿಂದ ನಿಬಿಡವಾದ ಗ್ರಾಮೀಣರ ಬದುಕುಗಳಲ್ಲಿ ಬಿಸಿಲು ಗೋಚರವಾಗಲಾರಂಭಿಸಿತು. ತರುಣರು ನಳಿನೀರಂಜನನ ಉಪದೇಶಗಳಿಂದ ಜಾಗ್ರತರಾಗಿ ಜನಸೇವೆಯನ್ನು ಗೈಯಲು ಮುಂದೆ ಬಂದರು. ಮದ್ಯಪಾನವು ಆ ಗ್ರಾಮದಿಂದ ಮಾಯವಾಯಿತು. ಒಂದು ಮಾತಿನಲ್ಲಿ ಹೇಳುವುದಾದರೆ, ಶಿವಪುರದಲ್ಲಿ ಉದಯವನ್ನು ಹೊಂದುತ್ತಿರುವ ಸ್ವಾಧೀನ ಜೀವನದ ಚಿತ್ರಭಾನುವಿನ ಪ್ರಥಮ ರಿಚಿಗಳು ಗೋಚರವಾದುವು.

ಆರು ಸಂವತ್ಸರಗಳು ಗತಿಸಿದುವು! ಒಂದು ದಿನ ಸಂಧ್ಯಾಕಾಲದಲ್ಲಿ ನಳಿನೀರಂಜನನು ಗ್ರಾಮೀಣರಿಗೆ ಗೀತಾಬೋಧೆಯನ್ನು ನೀಡುತ್ತಿದ್ದನು. ಜನರು ಶಾಂತಚಿತ್ತರಾಗಿ ಗೀತೋಪದೇಶಗಳನ್ನು ಆಶ್ರಾವಿಸುತ್ತಲಿದ್ದರು. ಈ ಸಂದರ್ಭದಲ್ಲಿ ಒಬ್ಬ ತರುಣನು ಕುಟೀರದೊಳಗೆ ಪ್ರವೇಶಿಸಿದನು. ಗಂಭೀರವಾದ ಅವನ ಚಿತ್ತವೃತ್ತಿಯನ್ನು ವೀಕ್ಷಿಸಿದೊಡನೆಯೇ ಅವನೊಬ್ಬ ಅಸಾಮಾನ್ಯ ವ್ಯಕ್ತಿಯೆಂಬುದು ತಿಳಿದು ಬರುತ್ತಲಿದ್ದಿತು; ಆದರೆ ಅವನ ಮುಖದಲ್ಲಿ ಕೆಲವು ಶೋಕದ ಮಿಂಚುಗಳು ಹೊಳೆಯುತ್ತಲಿದ್ದುವು. ಉದ್ವೇಗ ಮತ್ತು ಅಶಾಂತತೆ ಇವುಗಳು ಆ ವದನಮಂಡಲದಿಂದ ಹೊರಹೊಮ್ಮುತ್ತಲಿದ್ದುವು. ಈ ಅಪರಿಚಿತ ತರುಣನು ಕುಟೀರದೊಳಗೆ ಪ್ರವೇಶಿಸಿ ಒಂದು ಮೂಲೆಯಲ್ಲಿ ನಿಂತು, ನಳಿನೀರಂಜನನ ಮುಖದಿಂದ ಹೊರಸೂಸುತ್ತಿರುವ ಗೀತಾಬೋಧೆಯನ್ನು ಆಶ್ರಾವಿಸಿದನು.

ಸಂಜೆಯಾಯಿತು; ಗೀತಾಬೋಧವು ಸಮಾಪ್ತಿಯಾಗಲು ಜನರು ತಮ್ಮ ತಮ್ಮ ನಿಲಯಗಳಿಗೆ ಹಿಂದಿರುಗಿದರು. ಕೆಲವು ನಿಮಿಷಗಳು ಗತಿಸಲು ಕುಟೀರದಲ್ಲಿ ನಳಿನೀರಂಜನನೂ ಅವನ ಕೆಲವು ಮಂದಿ ಶಿಷ್ಯರೂ ಮಾತ್ರ ಉಳಿದರು. ಕುಟೀರದೊಳಗೆ ಪ್ರವೇಶಿಸಿದ್ದ ತರುಣನು ನಳಿನೀರಂಜನನಿಗೆ ವಂದಿಸಿದನು.

"ತಮ್ಮಾ, ನೀನು ಯಾರು? ನಿನ್ನ ಮುಖವನ್ನು ನೋಡುವಾಗ ಮಹತ್ತಾದ ಯಾವುದೋ ಒಂದು ಶೋಕದ ಭಾರವನ್ನು ನೀನು ಹೊತ್ತುಕೊಂಡು ಬಂದ ಹಾಗೆ

ತೋರುತ್ತಲಿದೆ!'' ಎಂದು ಆ ಸಾಧಕನು ನುಡಿದನು.

''ಮಹಾಶಯರೇ! ಕತ್ತಲೆಯು ನನ್ನ ಸುತ್ತಲೂ ಆವರಿಸಿದೆ! ಬೆಳಕು ತೋರುವುದಿಲ್ಲ! ಶಾಂತಿಯೂ ಇಲ್ಲ. ಆ ಶಾಂತಿಯನ್ನು ಹುಡುಕುತ್ತಾ ನಾನು ಬಂದಿರುತ್ತೇನೆ! ನನ್ನ ಆತ್ಮಕ್ಕೆ ಶಾಂತಿಯನ್ನು ನೀಡಬಲ್ಲಿರಾ? ನನ್ನನ್ನು ಆವರಿಸಿರುವ ತಿಮಿರರಾಶಿಯನ್ನು ಹೋಗಲಾಡಿಸಬಲ್ಲಿರಾ?"

''ನಿನಗೆ ಬೆಳಕನ್ನು ನಾನು ತೋರಿಸಬಲ್ಲೆನು!''

---

# ೧೧ ನಗರದಿಂದ ಹಳ್ಳಿಗೆ

'ಅಕ್ಕಾ! ರಂಗನು ಎತ್ತ ಹೋದನು, ಎಂಬುದನ್ನು ತಿಳಿಯಲಾಗಲಿಲ್ಲವಲ್ಲ!'

''ಮಾಧೂ! ಅದನ್ನೇ ನಾನು ನೆನೆದು ಹಂಬಲಿಸುತ್ತಿರುವೆನು. ಆ ಕಾಗದವನ್ನು ನೋಡು, ಅದು ಎಷ್ಟು ಕಠೋರತೆಯಿಂದ ತುಂಬಿದೆ, ಎಂಬುದನ್ನು ಕಾಣಲಾರೆಯಾ? ಅವರ ಕೋಮಲ ಮನಸ್ಸು ಈ ಕಾಗದವನ್ನು ಬರೆಯಲು ಹೇಗೆ ಪ್ರೇರೇಪಿಸಿತೆಂಬುದನ್ನು ನೆನೆದು ನಾನು ಆಶ್ಚರ್ಯಪಡುತ್ತಿರುವೆನು. ಈ ಪತ್ರವನ್ನು ಓದಿ ನೋಡು'' ಎಂದು ನುಡಿದು, ತನ್ನ ಕರದಲ್ಲಿರುವ ಓಲೆಯನ್ನು ಪದ್ಮಳು ಮಾಧವನ ಕೈಗೆ ಕೊಟ್ಟಳು. ಮಾಧವನು ಅದನ್ನು ತೆಗೆದುಕೊಂಡು ಓದಿ ನೋಡಿದನು. ಚಿಂತೆಯ ಗೆರೆಗಳು ಅವನ ಲಲಾಟದಲ್ಲಿ ಮೂಡಿದುವು.

''ಅಕ್ಕಾ! ಯಾವುದೋ ಒಂದು ತಪ್ಪುತಿಳುವಳಿಕೆಯಿಂದ ರಂಗನು ಈ ಕಾಗದವನ್ನು ಬರೆದಿರುತ್ತಾನೆ. ಯಾರೋ ಅವನ ಹೃದಯದಲ್ಲಿ ನಿನ್ನನ್ನು ಕುರಿತು ಸಂಶಯವು ಜನಿಸಲಿಕ್ಕೆ ಆವಶ್ಯವಿರುವ ವಿಷವನ್ನು ಬಿತ್ತಿರಬೇಕು.''

''ಆದರೆ ನಮ್ಮ ಕುಟುಂಬದಲ್ಲಿ ವಿಷವನ್ನು ಬಿತ್ತುವುದರಿಂದ ಯಾರಿಗೆ ತಾನೆ ಪ್ರಯೋಜನವಿದೆ?''

"ಪ್ರಯೋಜನವಿಲ್ಲದೆ ಯಾರೂ ಕೆಲಸವನ್ನು ಮಾಡಲಾರರು, ನಿಮ್ಮಿಬ್ಬರನ್ನು ಅಗಲಿಸುವದರಿಂದ ವಿಶೇಷ ಲಾಭವನ್ನು ಹೊಂದುವ ವ್ಯಕ್ತಿಯು ಕೆಲಸವಾಗಿದೆ ಇದು. ಏನೇ ಇರಲಿ, ನಿಮ್ಮ ಸಂಸಾರವನ್ನು ಹಾಳು ಮಾಡುವದಕ್ಕಾಗಿ ಒಬ್ಬ ತಂತ್ರಶಾಲಿಯು ತನ್ನ ಜಾಲವನ್ನು ಹೂಡಿರುತ್ತಾನೆ; ಆದರೆ ಅಕ್ಕಾ, ಅಂತ್ಯದಲ್ಲಿ ಸತ್ಯವೇ ಜಯವನ್ನು ಹೊಂದುತ್ತದೆ!"

''ಅದೇ ನನಗಿರುವ ಭರವಸೆಯು! ಮಾಧೂ, ಆ ಪುಸ್ತಕದ ಮುದ್ರಣದ ಕಾರ್ಯವೇನಾಯಿತು?''

''ರಂಗನು ಬರೆದ 'ಬಾಳಿನಲ್ಲಿ ಬೆಳಕು' ಈ ತಿಂಗಳ ಅಂತ್ಯದೊಳಗಾಗಿ ಪ್ರಕಟಸಲ್ಪಡುವದೆಂದು ನಾನು ನುಡಿಯಬಲ್ಲೆನು.''

''ಆ ಪುಸ್ತಕವನ್ನು ಕುರಿತು ನಿನ್ನ ಅಭಿಪ್ರಾಯವೇನು?''

''ನಾನು ಹೇಳಬೇಕೆ? ನನ್ನ ದೃಷ್ಟಿಯಲ್ಲಿ ಅದು ಅಷ್ಟೊಂದು ಮಹತ್ವವುಳ್ಳದ್ದಾಗಿ

ಕಾಣುವದಿಲ್ಲ. ನಿನ್ನ ಮಾತಿಗೆ ಕಟ್ಟುಬಿದ್ದು ಅದರ ಮುದ್ರಣಕ್ಕೆ ತೊಡಗಿದೆನಷ್ಟೆ."

"ಅದೇಕೆ ಆ ರೀತಿ ಹೇಳುತ್ತಿರುವೆ?".

" 'ಬಾಳಿನಲ್ಲಿ ಬೆಳಕಿನ' ಲೇಖಕನು ಪ್ರತ್ಯಕ್ಷ ಜಗತ್ತನ್ನೂ ನಮ್ಮ ನಾಡಿನ ಇಂದಿನ ಪರಿಸ್ಥಿತಿಯನ್ನೂ ಮರೆತು ಅಧ್ಯಾತ್ಮಿಕ ಚಿಂತನೆಗಳ ವಲಯದಲ್ಲಿ ವಿಹರಿಸುತ್ತ ಲಿದ್ದಾನೆ. ಅಂತ್ಯದಲ್ಲಿ ಆಧ್ಯಾತ್ಮಿಕ ಸಾಧನೆಯೇ ಭಾರತಭೂಮಿಯ ಬಿಡುಗಡೆಗಿರುವ ದಾರಿಯೆಂದು ನಿರ್ಧರಿಸಿರುತ್ತಾನೆ. ಈ ಅಭಿಪ್ರಾಯವನ್ನು ಎಂದಿಗೂ ನಾನು ಒಪ್ಪ ಲಾರೆನು. ಆತ್ಮನ ವಿಕಾಸಕ್ಕೆ ಆಧ್ಯಾತ್ಮಿಕ ಚಿಂತನೆಗಳು ಅವಶ್ಯಕವಾಗಿದ್ದರೂ ನಾಡಿನ ಹಾಗು ಜನತೆಯ ಏಳಿಗೆಗೆ ಕಠೋರವಾದ ಕರ್ಮಪಥವಾಗಿದೆ ಅವಶ್ಯವಾದುದು."

"ನಿನ್ನ ದಾರಿಯೇ ಬೇರೆ, ಎಂಬುದನ್ನು ನಾನು ಬಲ್ಲೆನು. ಅದು ನಿನ್ನ ದೃಷ್ಟಿ ಯಲ್ಲಿ ವಿಹಿತವೂ ಆಗಿರಬಹುದು. ಪುಸ್ತಕದ ಮುದ್ರಣಕ್ಕೆ ನಿಮ್ಮಿಬ್ಬರ ಆದರ್ಶ ವ್ಯತ್ಯಾಸಗಳು ವಿಘ್ನವನ್ನುಂಟು ಮಾಡದಿರಲಿ!"

"ಅಕ್ಕಾ, ಅದನ್ನು ಕುರಿತು ನೀನು ಆಲೋಚಿಸಬೇಡ; ನಮ್ಮಿಬ್ಬರ ದಾರಿಗಳು ವಿಪರೀತವಾಗಿದ್ದರೂ, ಕಳೆದ ಹತ್ತು ವರ್ಷಗಳಿಂದ ನಾವು ಸಹೋದರರಂತೆ ಜೀವಿಸ ಲಿಲ್ಲವೆ? ನಾವು ನಮ್ಮ ಅಭಿಪ್ರಾಯಗಳನ್ನು ಕುರಿತು ಯಾವ ರೀತಿ ವಾದಿಸುತ್ತಿದ್ದೆವು, ಎಂಬುದನ್ನು ನೀನೇ ಬಲ್ಲೆಯಷ್ಟೆ? ಆದರೆ ನಮ್ಮಿಬ್ಬರ ಆದರ್ಶ ವ್ಯತ್ಯಾಸವು 'ಬಾಳಿನಲ್ಲಿ ಬೆಳಕು' ಎಂಬ ಪುಸ್ತಕದ ಪ್ರಕಾಶನಕ್ಕೆ ವಿಘ್ನವನ್ನುಂಟು ಮಾಡಲಾರದು."

"ಮಾಧೂ, ನಾನೇನು ಮಾಡಬೇಕೆಂದು ನೀನು ಹೇಳುವೆ? ಅವರು ತೆರಳಿ ಎರಡು-ಮೂರು ತಿಂಗಳುಗಳಾದುವು. ಯಾವ ಸುಳಿವೂ ಇಲ್ಲ."

"ಅಕ್ಕಾ, ಧೈರ್ಯವನ್ನವಲಂಬಿಸು! ರಂಗನು ಬುದ್ಧಿಶಾಲಿಯಾದರೂ ಅವನ ಮನಸ್ಸು ಯಾವುದಾದರೂ ಒಂದು ಸಂಗತಿಯಿಂದ ಉದ್ವೇಗಪರವಶವಾದರೆ, ಅವನು ಯುಕ್ತಾಯುಕ್ತ ವಿವೇಚನೆಯಿಲ್ಲದೆ ವರ್ತಿಸಿಬಿಡುತ್ತಾನೆ. ಇದು ಅವನಿಗೆ ಬಾಲ್ಯ ದಿಂದಲೇ ಇರುವ ಒಂದು ಸ್ವಭಾವವಾಗಿದೆ. ತಾನು ಗೈದುದು ಸರಿಯಲ್ಲವೆಂಬುದನ್ನು ತಿಳಿದೊಡನೆಯೇ ಅವನು ಕ್ಷಮೆಯನ್ನು ಯಾಚಿಸಲು ಹಿಂದೆಗೆಯುವವನಲ್ಲ. ಆದುದ ರಿಂದ ಅವನನ್ನು ಕುರಿತು ನಿರಾಶೆಯನ್ನು ಪಡೆಯಬೇಕಾದುದಿಲ್ಲ."

"ಮಾಧೂ, ನಾನೆಷ್ಟು ಪ್ರಯತ್ನಿಸಿದರೂ ಏಕೋ ಶೋಕವು ನನ್ನ ಹೃದಯ ದಿಂದ ಮಾಯವಾಗುವದಿಲ್ಲ. ನಗರಜೀವನವಂತೂ ಬಹಳ ಬೇಸರವಾಗಿ ತೋರುತ್ತದೆ. ಹಲವು ಸಾರೆ ದೂರದಲ್ಲಿರುವ ಒಂದು ಹಳ್ಳಿಗಾಡಿಗೆ ತೆರಳಬೇಕೆಂದೆನಿಸುತ್ತದೆ."

"ಹೌದು. ಸ್ಥಳಬದಲಾವಣೆಯು ಮನದಲ್ಲಿ ಮೂಡಿದ ದುಃಖವನ್ನು ಕಡಿಮೆ ಮಾಡಬಹುದು. ಅಕ್ಕಾ, ನೀನು ಯಾವುದಾದರೂ ಒಂದು ಗ್ರಾಮಕ್ಕೆ ತೆರಳಿ ಕೆಲವು ದಿನಗಳನ್ನು ಕಳೆಯಲಿಚ್ಛಿಸುತ್ತಿದ್ದರೆ, ಅದಕ್ಕೆ ಬೇಕಾದ ಸೌಕರ್ಯಗಳನ್ನು ನಾನು ಒದ ಗಿಸಿ ಕೊಡುತ್ತೇನೆ. ಜಮೀನ್ದಾರಿಯ ಕೆಲಸಗಳನ್ನು ವಿಶ್ವಸ್ತನಾದ ಒಬ್ಬ ನೌಕರನಿಗೆ ಒಪ್ಪಿಸಬಹುದು."

ಹೀಗೆ ಏನನ್ನೋ ಆಲೋಚಿಸುತ್ತ ಮಾಧವನು ನುಡಿದನು. ಅವನೊಬ್ಬ ಕುಶಾಗ್ರ ಬುದ್ಧಿಯ ನ್ಯಾಯವಾದಿಯು. ತನ್ನ ಗೆಳೆಯನಾದ ರಂಗನು ಊರನ್ನು ತ್ಯಜಿಸುವದಕ್ಕೆ ಕಾರಣವು ಯಾವನೋ ಒಬ್ಬ ದುರಾತ್ಮನು ಹೂಡಿದ ತಂತ್ರಜಾಲವಾಗಿದೆ, ಎಂಬುದನ್ನು ಅವನು ಊಹಿಸಿದ್ದನು. ಪದ್ಮಳೂ ಮಗು ರಾಮಚಂದ್ರನೂ ನಗರದಲ್ಲಿಯೇ ಇದ್ದರೆ, ತನ್ನ ಕಾರ್ಯಸಾಧನೆಗಾಗಿ ಆ ದುರಾತ್ಮನು ಕೆಲವು ಪೀಡನೆಗಳನ್ನು ಅವರಿಗೆ ಕೊಡಲು ಉದ್ಯುಕ್ತನಾಗಬಹುದೆಂಬ ಭೀತಿಯೂ ಮಾಧವನನ್ನು ಪೀಡಿಸುತ್ತಲಿತ್ತು. ಆ ವಿಪತ್ತು ಪದ್ಮಳು ಕೆಲವು ದಿನಗಳ ಮಟ್ಟಿಗೆ ನಗರವನ್ನು ತ್ಯಜಿಸುವದಾದರೆ ನಿವಾರಣೆಯನ್ನು ಹೊಂದಬಹುದೆಂದು ಮಾಧವನು ಬಗೆದಿದ್ದನು. ಆದುದರಿಂದಲೇ ಪದ್ಮಳ ಗ್ರಾಮವಾಸವನ್ನು ಕೈಕೊಳ್ಳಬೇಕೆಂಬ ಇಚ್ಛೆಗೆ ಅವನು ತಕ್ಕ ಪ್ರೋತ್ಸಾಹವನ್ನು ನೀಡಿದನು.

"ಅಕ್ಕಾ, ಸಂಜೆಗೆ ಬರುತ್ತೇನೆ, ಮುದ್ರಣಾಲಯಕ್ಕೆ ತೆರಳಲು ಹೊತ್ತಾಯಿತು" ಎಂದೆನ್ನುತ್ತ ಮಾಧವನು ತನ್ನ ಆಸನದಿಂದ ಎದ್ದು ಹೊರಕ್ಕೆ ಗಮಿಸಿದನು.

ಮಾಧವನು ಪದ್ಮಳ ವಸತಿಯನ್ನು ತ್ಯಜಿಸಿದನು. ರಂಗನಾಥನು ತನ್ನ ಮಡದಿಯನ್ನು ತ್ಯಜಿಸಿ ತೆರಳಿ ಎರಡು ಮೂರು ತಿಂಗಳುಗಳಾದವು. ರಂಗನು ತನ್ನ ಕೋಣೆಯ ಮೇಜದ ಮೇಲೆ ಬರೆದಿಟ್ಟಿರುವ ಆ ಓಲೆಯಿಂದ ಅವನ ಮನಸ್ಸನ್ನು ಯಾವದೋ ಒಂದು ಸಂಶಯಪಿಶಾಚಿಯು ಬಾಧಿಸಿವೆಯೆಂದೂ, ಅದೇ ಅವನು ಸ್ವಗೃಹವನ್ನು ತ್ಯಜಿಸುವದಕ್ಕೆ ಕಾರಣಭೂತವಾದದ್ದೆಂದೂ ಪದ್ಮಳು ತಿಳಿದುಕೊಂಡಳು. ರಂಗನನ್ನು ಶೋಧಿಸುವುದಕ್ಕಾಗಿ ಅವಳು ಪ್ರಯತ್ನಿಸಿದಳು, ಆದರೆ ರಂಗನು ಎತ್ತ ತೆರಳಿದನೆಂಬುದಾಗಲಿ, ಎಲ್ಲಿರುವನೆಂಬುದಾಗಲಿ ತಿಳಿದು ಬರಲಿಲ್ಲ. ಅವಳು ಆತ್ಮಾರ್ಥವಾಗಿ ಪತಿಯನ್ನು ಪ್ರೀತಿಸುತ್ತಲಿದ್ದುದರಿಂದ, ಈ ವಿಯೋಗವು ಅವಳ ಹೃದಯದಲ್ಲಿ ಬಹುವಾದ ಶೋಕವು ಸಂಜಾತವಾಗುವಂತೆ ಮಾಡಿತು. ಅವಳ ತಂದೆಯು ಈ ಮೊದಲೇ ತನ್ನ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸಿದ್ದುದರಿಂದ ಅವಳಿಗೆ ಆಪ್ತರೆನಿಸಿಕೊಳ್ಳುವವರು ಯಾರೂ ಇರಲಿಲ್ಲ. ಅವಳ ಮಗು,-ಒಂದು ವರ್ಷ ಪ್ರಾಯವಿರುವ ರಾಮಚಂದ್ರನು-ಅವಳ ಮನಸ್ಸನ್ನು ಶಾಂತಗೊಳಿಸಲಿರುವ ಏಕವ್ಯಕ್ತಿಯಾಗಿದ್ದನು. ಧೈರ್ಯವನ್ನು ನೀಡಲು ಅವಳ ಗೆಳೆಯನಾದ ಮಾಧವನಿದ್ದನು. ಮಾಧವನು ರಂಗನಿಗೆ ಬಾಲ್ಯಕಾಲದಿಂದಲೇ ಇರುವ ಗೆಳೆಯನೂ ಸಹ ಉದ್ಯಮಿಯೂ ಆಗಿದ್ದುದರಿಂದ, ರಂಗನಾಥನ ನಿಲಯದಲ್ಲಿ ಅವನಿಗೆ ಸರ್ವ ಸ್ವಾತಂತ್ರ್ಯವಿದ್ದಿತು. ನಾಡಿನ ಏಳಿಗೆಗಾಗಿ ಯತ್ನಿಸಲು ಇಬ್ಬರೂ ಒಂದುಗೂಡಿ ಆಲೋಚಿಸುತ್ತಿದ್ದರು. ಜನತೆಯ ಮಧ್ಯದಲ್ಲಿ ಹರಡಿರುವ ಅಜ್ಞತೆಯನ್ನು ನಿವಾರಿಸಲು ಇಬ್ಬರೂ ತಮ್ಮ ಸಕಲ ಶಕ್ತಿಗಳನ್ನು ವಿನಿಯೋಗಿಸಿ ಉದ್ಯಮಿಸುತ್ತಿದ್ದರು. ಈ ತರುಣರ ಪರಿಶ್ರಮಗಳಿಂದ ಜನರಿಗೆ ಅಕ್ಷರಾಭ್ಯಾಸವನ್ನು ನೀಡುವುದಕ್ಕಾಗಿ ರಾಮನಗರದಲ್ಲಿ ಒಂದೆರಡು ನಿಶಾಪಾಠಶಾಲೆಗಳು ಸ್ಥಾಪಿತವಾದವು. ಪ್ರತಿದಿನವೂ ಜನರಿಗೆ ಅಭ್ಯುದಯವನ್ನು ಹೊಂದಲಿರುವ ದಾರಿ

ಯನ್ನು ಕುರಿತು ಬೋಧಿಸುತ್ತಿದ್ದರು. ಜನರಿಗೆ ಭಾರತ ಭೂಮಿಯ ಸಮೃದ್ಧ ರಾಜಕೀಯ ಮತ್ತು ಸಾಂಸ್ಕೃತಿಕ ಸಂಸ್ಥಿತಿಗಳ ಜ್ಞಾನವನ್ನು ನೀಡುವುದಕ್ಕಾಗಿ 'ನಮ್ಮ ನಾಡು' ಎಂಬ ವಾರಪತ್ರಿಕೆಯನ್ನು ಆ ದೇಶಭಾಷೆಯಲ್ಲಿ ಪ್ರಕಟಿಸತೊಡಗಿದರು. ಅವರ ಉದ್ಯಮಗಳ ಫಲದಿಂದ ಜನರಲ್ಲಿ ಮಾತೃಭೂಮಿಯ ಜಾಗೃತಿಯುಂಟಾಗತೊಡಗಿತು.

ಈ ಸಂದರ್ಭದಲ್ಲಾಗಿತ್ತು ರಂಗನು ಬಂಗಾಳವನ್ನು ಪ್ರವೇಶಿಸಿದುದು. ತನ್ನೊಡನೆ ಯಾವ ಸಂಗತಿಯನ್ನೂ ಉಸುರದೆ ರಂಗನು ಸ್ವದೇಶವನ್ನು ಪರಿತ್ಯಜಿಸಿದುದನ್ನು ವೀಕ್ಷಿಸಿ, ಮಾಧವನು ಆಶ್ಚರ್ಯಪರತಂತ್ರನಾದನು. ರಂಗನ ಸ್ವಭಾವದ ಪರಿಚಯವು ಅವನಿಗೆ ಚೆನ್ನಾಗಿ ಇದ್ದುದರಿಂದ, ರಂಗನ ಮನಸ್ಸು ಯಾವುದೋ ಒಂದು ದಾರುಣ ಸಂಭವದಿಂದ ತನ್ನ ಸ್ತಿಮಿತ ಗತಿಯನ್ನು ಕಳೆದುಕೊಂಡಿರುವುದೆಂದೂ ಅದರ ಪರಿಣಾಮವಾಗಿ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಆ ರೀತಿ ವರ್ತಿಸಿದನೆಂದೂ ಮಾಧವನು ಗ್ರಹಿಸಿದನು. ಪದ್ಮಳಿಗೆ ರಂಗನು ಬರೆದಿದ್ದ ಆ ಕಾಗದವನ್ನು ಓದಿ ನೋಡಲು, ಪದ್ಮಳ ಶೀಲವನ್ನು ಕುರಿತು ರಂಗನು ವಿಕಲ್ಪವನ್ನು ತಾಳಿ ಈ ಸಂಸಾರದಲ್ಲಿ ನೊಂದುಕೊಂಡು ತೆರಳಿರುವನೆಂಬುದನ್ನು ಮಾಧವನು ಊಹಿಸಿದನು. ಆದರೆ ರಂಗನ ಊಹೆಯಂತೆ ಪದ್ಮಳಲ್ಲಿ ಸತೀತ್ವದ ಲೋಪವಿದೆ ಎಂಬುವನ್ನು ನಂಬಲು ಮಾಧವನಿಗೆ ಶಕ್ಯವಾಗಲಿಲ್ಲ. ತನ್ನ ಪತಿಯನ್ನು ಅತ್ಯಂತ ಸಜ್ಜನಲ್ಲಿ ಪ್ರೀತಿಸುತ್ತಿರುವ ಆ ಸಾಧ್ವಿಯು ಪಾಪಕೃತ್ಯದಲ್ಲಿ ನಿರತಳಾದಾಳು ಎಂಬ ಸಂಗತಿಯು ಅವನಿಗೆ ಅವಾಸ್ತವವಾಗಿ ತೋರಿತು. ಆ ಸಾಧ್ವಿಯ ಹಣೆಯಲ್ಲಿ ಪಾಪಕೃತ್ಯದ ಒಂದೇ ಒಂದು ಗೆರೆಯು ಸಹಾ ಇರಲಿಲ್ಲ. ಅವಳ ಆತ್ಮವು ಪರಿಶುದ್ಧವಾಗಿದೆಯೆಂಬುದನ್ನು ಅವಳ ನಯನಗಳಿಂದ ಹೊರಸೂಸುತ್ತಿರುವ ಕಾಂತಿಯು ತೋರುತ್ತಿತ್ತು. ಈ ಎಲ್ಲಾ ಸಂಗತಿಗಳಿಂದ ರಂಗನು ತನ್ನ ತಪ್ಪು ತಿಳುವಳಿಕೆಯಿಂದ ಪದ್ಮಳು ಪಾಪಭರಿತಳೆಂಬುದಾಗಿ ಶಂಕಿಸಿದನೆಂದು ಮಾಧವ ನೆನೆದನು.

ಮಾಧವನ ಸದುಪದೇಶವು ಪದ್ಮಳಿಗೆ ಲಭಿಸದಿದ್ದರೆ ಅವಳ ಜೀವನವು ಆತ್ಮಹತ್ಯೆಯಲ್ಲಿ ತೊಡಗುತ್ತಿತ್ತು. ಪತಿಯ ವಿಯೋಗ, ತಾನು ಕಾರಣಳೆಂಬುದಾಗಿ ಇನಿಯನಲ್ಲಿ ಮೂಡಿದ ಸಂದೇಹ ಇವುಗಳು ಅವಳ ಕೋಮಲ ಹೃದಯಕ್ಕೆ ಬಹಳ ನೋವು ಮಾಡಿದುವು. ತನ್ನ ಪರಿಶುದ್ಧತೆಯನ್ನು ಪ್ರತ್ಯಕ್ಷಗೊಳಿಸುವುದಕ್ಕಾಗಿ ಆತ್ಮಬಲಿಯನ್ನು ನೀಡುವುದುಚಿತವೆಂದು ಅವಳು ವಿಚಾರಿಸಿದಳು. ಆದರೆ ಅವಳು ಶೋಕದ ಕತ್ತಲೆಯಿಂದ ವ್ಯಥಿತಳಾಗುವಾಗ, ಮಾಧವನು ಜ್ಞಾನದ ಬೆಳಕನ್ನು ತೋರಿದನು. ಅವಳನ್ನು ಶಾಂತಗೊಳಿಸುವುದಕ್ಕಾಗಿ ಅವನು ಹೇಳಿದನು

"ಅಕ್ಕಾ, ಪದ್ಮಾ! ರಂಗನು ನಿನ್ನನ್ನು ತ್ಯಜಿಸಿ ಹೋದನೆಂಬ ದುಃಖದಿಂದ ತಿಳುವಳಿಕೆಯಿಲ್ಲದವಳಾಗಿ ಹುಚ್ಚಳಂತೆ ಆತ್ಮನಾಶಕ್ಕೆ ಉದ್ಯುಕ್ತಳಾಗಬೇಡಮ್ಮಾ. ಅದರಿಂದ ನಿನಗೆ ಕೆಡುಕಲ್ಲದೆ ಗುಣವಾಗಲಾರದು. ಜೀವನವು ಕೆಲವರು ವಿಚಾರಿಸುತ್ತಿರುವಂತೆ ಹೂವಿನ ಹಾಸಿಗೆಯಲ್ಲ! ಜೇನಿನಂತೆ ಅದು ಸಿಹಿಯಲ್ಲ! ಹಾಲಿನಂತೆ ರುಚಿರವಲ್ಲ! ಈ ಬದುಕಿನಲ್ಲಿ ಜೇನಿನಂತೆ ಸಿಹಿಯಿದ್ದರೂ ಸಹಿಸಲಶಕ್ಯವಾದ ಅತ್ಯಂತ ಕಹಿಯೂ

ಆದರಲ್ಲಿಯೇ ಇವೆ. ಸುಖದ ಹಿಂದೆಯೇ ದುಃಖವು ಆಮಂತ್ರಿತವಾಗದಿದ್ದರೂ ತಾನಾಗಿ ಬಂದೇ ಬರುತ್ತದೆ. ಈ ಸುಖ-ದುಃಖಗಳ ಮಿಲನವೇ ಜೀವನವು. ಆದುದರಿಂದ ಮನುಷ್ಯನು ಸಮಭಾವದಲ್ಲಿ ಈ ಎರಡು ಶಕ್ತಿಗಳನ್ನೂ ಸಹಿಸಿಕೊಳ್ಳಬೇಕು. ದುಃಖಕ್ಕೆ ಹೆದರಿ ಆತ್ಮನಾಶಕ್ಕೆ ಹೊರಡುವುದು ನಮ್ಮಲ್ಲಿರುವ ಬಲಹೀನತೆಯನ್ನು ಪ್ರದರ್ಶಿಸುತ್ತದೆ. ಬಲಹೀನತೆಯು ಮನುಷ್ಯನಿಗೆ ಉಚಿತವಾದುದಲ್ಲ. ಗಂಡಸಾಗಲೀ, ಹೆಂಗಸಾಗಲೀ ವಿಜಯವನ್ನು ಸಂಪಾದಿಸಬೇಕಾದರೆ, ಅವರ ಹೃದಯಗಳು ಬಲವುಳ್ಳವಾಗಿರಬೇಕು. ವಿಪತ್ತುಗಳು ಮನುಷ್ಯನಿಗೆ ಬರುತ್ತವೆಯಲ್ಲದೆ ಕತ್ತೆಗಳಿಗೋ, ಕುನ್ನಿಗಳಿಗೋ ಬರುವುದಿಲ್ಲ ಈ ಸಂಸಾರ ಕಡಲಿನಲ್ಲಿ ಮೂಡುತ್ತಿರುವ ಆಪತ್ತುಗಳ ತರಂಗಗಳಿಗೆ ಎದೆಯೊಡ್ಡಿ ನಿಲ್ಲುವದು ಪುರುಷ ಧರ್ಮವು! ಯಾವ ಭಯವೂ ಇಲ್ಲದೆ ನಮಗೆ ಬಂದೊದಗುತ್ತಿರುವ ವಿಪತ್ತುಗಳಿಗೆ ಸುಸ್ವಾಗತವನ್ನು ಬಯಸುವುದೇ ನಮ್ಮ ಬಾಳುವೆಗಳನ್ನು ಪೂರ್ಣತೆಗೊಯ್ಯಲಿರುವ ಪಥವು! ರಂಗನ ವಿಯೋಗದಿಂದ ನಿನ್ನ ಹೃದಯವು ಶೋಕಾನಲದಿಂದ ಪ್ರಜ್ವಲಿತವಾಗಿದೆ ಎಂಬುದನ್ನು ನಾನು ಬಲ್ಲೆನು. ತನ್ನ ಪ್ರೇಮವನ್ನು ನಿಕ್ಷೇಪಿಸಿರುವ ವ್ಯಕ್ತಿಯು ಮಾಯವಾದರೆ ವಿರಹ ದುಃಖದಿಂದ ಪೀಡಿತಳಾಗುವುದು ಸ್ವಾಭಾವಿಕವು! ಆದರೆ ನಿನ್ನ ಶೋಕವು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಮಾಡುವ ಆತ್ಮನಾಶಕ್ಕೆ ಪ್ರೇರಕವಾಗದಿರಲಿ! ಅಕ್ಕಾ, ಸತ್ಯವು ನಿನ್ನಲ್ಲಿರುವದಾದರೆ, ನೀನು ಭಯಪಡಬೇಕಾದುದಿಲ್ಲ. ಪರಿಶುದ್ಧತೆಯ ಬೆಂಕಿಯು ನಿನ್ನ ಹೃದಯದಲ್ಲಿ ಪ್ರಜ್ವಲಿಸುತ್ತಿದ್ದರೆ, ಪಾಪವಾಗಲೀ, ಶೋಕವಾಗಲೀ ನಿನ್ನನ್ನು ಸ್ಪರ್ಶಿಸಲಾರವು. ಸತ್ಯವು ವಿಧಿಯನ್ನೇ ಗೆಲ್ಲುವ ಒಂದು ಮಹಚ್ಛಕ್ತಿಯಾಗಿದೆ! ಲೋಕದ ಇತರ ಎಲ್ಲಾ ಶಕ್ತಿಗಳೂ ಒಂದುಗೂಡಿ ಪ್ರಯತ್ನಿಸಿದರೂ ಅವು ಸತ್ಯವನ್ನುಗೆಲ್ಲಲಾರವು. ಆದುದರಿಂದ ನೀನು ಶೋಕವನ್ನು ಪರಿತ್ಯಜಿಸು! ಶೋಕ ಪೀಡಿತಳಾಗುವದರಿಂದ ಮನಸ್ಸು ಇನ್ನಿಷ್ಟು ಯಾಮಿನಿಯಿಂದ ಆವೃತವಾಗುವುದಲ್ಲದೆ ಶಾಂತಿಯು ಲಭಿಸಲಾರದು. ನಿನ್ನ ಜೀವನದಲ್ಲಿ ನೀನು ನೆರವೇರಿಸಬೇಕಾದ ಹಲವು ಕರ್ತವ್ಯಗಳಿರುತ್ತವೆ. ಮಗು ರಾಮಚಂದ್ರನ ಜನನಿಯು ನೀನು. ಅವನ ಜೀವನದ ಚಿತ್ರವನ್ನು ರೂಪೀಕರಿಸುವ ಭಾರವು ನಿನ್ನದು. ಅವನು ಯೋಗ್ಯನೂ, ಗುಣಶಾಲಿಯೂ ಆಗಬೇಕಾದರೆ, ನೀನು ಅವನ ಶಿಕ್ಷಣದಲ್ಲಿ, ಅವನ ಬೆಳವಣಿಗೆಯಲ್ಲಿ ಶ್ರದ್ಧೆಯನ್ನು ವಹಿಸಬೇಕು. ಇಂದಿನ ಮಗುವೇ ನಾಳೆ ದಿನದ ನಾಗರಿಕನು. ಆದುದರಿಂದ ನಮ್ಮ ನಾಡು ಭವಿಷ್ಯತ್ಕಾಲದಲ್ಲಿ ಅಭ್ಯುನ್ನತಿಯನ್ನು ಹೊಂದಬೇಕಾದರೆ, ಇಂದಿನ ತಾಯಿಯಂದಿರು ತಮ್ಮ ಮಕ್ಕಳ ಬೆಳವಣಿಗೆಯಲ್ಲಿ ವಿಶೇಷ ಶ್ರದ್ಧೆಯನ್ನು ವಹಿಸಲೇಬೇಕು. ಆದುದರಿಂದ ಅಕ್ಕಾ, ನೀನು ಶೋಕಭರಿತಳಾಗಬೇಡ. ಕರ್ತವ್ಯಪಾಲನೆಯೇ ಶ್ರೇಷ್ಠವಾದ ಮಾರ್ಗವು! ಅದನ್ನು ನೀನು ಅನುಸರಿಸುವುದಾದರೆ, ಶೋಕವು ನಿನ್ನನ್ನು ಸ್ಪರ್ಶಿಸಲಾರದು. ನೀನು ಕಗ್ಗ ಹೆಂಗಸಲ್ಲ. ವಿದ್ಯೆಯಿದೆ; ಬುದ್ಧಿಯಿದೆ. ನಿನ್ನ ಆತ್ಮವು ಸಂಸ್ಕಾರವನ್ನು ಹೊಂದಿದೆ. ರಂಗನ ಸಂಸರ್ಗದಿಂದ ನಿನ್ನ ಮನಸ್ಸು ವಿಕಸಿತವಾಗಿದೆ. ಆದುದರಿಂದ ನೀನು ಆಲೋಚಿಸು! ಚಿಂತಿಸು!

ನಿನ್ನ ಸ್ಥಾನವು ಯಾವುದೆಂಬುದನ್ನು ನೆನೆ! ಆ ಭಗವತಿಯ ಅಂಶವು ವನಿತೆಯಲ್ಲಿದೆ ಶಕ್ತಿಸಂಪನ್ನಳಾಗು! ಜಾಗ್ರತಳಾಗು!''

ಈ ಉತ್ಕೃಷ್ಟವಾದ ಉಪದೇಶವು ಪದ್ಮಳ ಎದೆಯಲ್ಲಿ ಉರಿಯುತ್ತಿರುವ ಶೋಕಾಗ್ನಿಯ ತಾಪವನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಿತೆಂದು ಹೇಳಬಹುದು. ಆತ್ಮಹತ್ಯೆಯನ್ನು ಮಾಡಬೇಕೆಂಬ ವಿಚಾರವು ಅವಳ ಮನಸ್ಸಿನಿಂದ ಮಾಯವಾಯಿತು ಮಗನ ಅಭ್ಯುದಯವನ್ನು ನೆನೆದು, ತಾನು ಎಷ್ಟು ಸಂಕಟವನ್ನು ಅನುಭವಿಸಿದರು ಕಡಿಮೆಯೆಂದು ಪದ್ಮಳು ನಿರ್ಧರಿಸಿದಳು.

ನಗರ ಜೀವನವು ಅವಳ ಮನಸ್ಸಿಗೆ ಶಾಂತಿಯನ್ನು ನೀಡದುದರಿಂದ ಗ್ರಾಮಾಂತರಕ್ಕೆ ಗಮಿಸಲು ಅವಳು ನಿಶ್ಚಯಿಸಿದಳು. ದುಃಖದಲ್ಲಿ ಬೆಂದ ಹೃದಯಕ್ಕೆ ನೈಸರ್ಗಿಕವಾದ ಗ್ರಾಮ ಜೀವನವು ಶಾಂತಿಯ ಶೀತಲ ಜಲವನ್ನು ಸಿಂಚಿಸಬಲ್ಲುದೆಂದ ಮಾಧವನೂ ನೆನೆದಿದ್ದನು. ಆದುದರಿಂದ ಅವನು ಪದ್ಮಳ ಈ ಇಚ್ಛೆಯನ್ನು ಪ್ರೋತ್ಸಾಹಿಸಿದನು. ಅವನು ಪದ್ಮಳ ವಾಸಕ್ಕಾಗಿ ಒಂದು ಹುಲ್ಲಿನ ಮನೆಯನ್ನು ಹೊಸೂರಿನಲ್ಲಿ ಏರ್ಪಡಿಸಿದನು. ಅವಳ ಜಮೀನ್ದಾರಿಯ ಕಾರ್ಯಗಳನ್ನು ಒಬ್ಬ ಚಾಕರನಿಗೆ ವಹಿಸುವಂತೆ ಉಪದೇಶಿಸಿದನು.

ನಗರವನ್ನು ತ್ಯಜಿಸಿ ಹಳ್ಳಿಗೆ ತೆರಳಬೇಕಾದ ಆ ದಿನವು ಬಂದಿತು. ಗ್ರಾಮವಾಸಕ್ಕಾಗಿ ತೆರಳುತ್ತಿರುವ ತನ್ನ ಗೆಳತಿಯನ್ನು ಕಾಣುವದಕ್ಕಾಗಿ ಸರೋಜಳು (ಇವಳ ವೆಂಕಟರಾಮನ ಮಡದಿಯೆಂಬುದು ವಾಚಕರ ನೆನಪಿನಲ್ಲಿರಬಹುದು.) ಪದ್ಮಳ ವಸತಿಗೆ ಆಗಮಿಸಿದಳು. ಅವಳ ಬಾಳಾದರೂ ಶೋಕಪೂರ್ಣವಾದುದೆಂಬುದನ್ನು ವಾಚಕರು ಬಲ್ಲರಷ್ಟೆ?

ಕಂಬನಿಗಳಿಂದ ತುಂಬಿದ ನೇತ್ರಗಳೊಡನೆ ಪದ್ಮಳನ್ನು ನೋಡುತ್ತ ಸರೋಜಳು ನುಡಿದಳು:—''ಪದ್ಮಾ, ನೀನು ತೆರಳಿದ ನಂತರ ನನಗೆ ಯಾರಿರುವರು? ನಿನ್ನ ಸಹವಾಸದಿಂದ ನನಗೆ ಅಲ್ಪಸ್ವಲ್ಪವಾದರೂ ಶಾಂತಿಯು ಸಿಗುತ್ತಲಿದ್ದಿತು.''

''ಸರೋಜ, ನೀನೇಕೆ ಅಳುತ್ತಿರುವೆ? ನಗರವಾಸಕ್ಕೆ ಬೇಸತ್ತು ಹೋಗುತ್ತಿದ್ದೇನೆ. ಗ್ರಾಮಾಂತರಕ್ಕೆ ತೆರಳಿದರೆ, ಸ್ವಲ್ಪ ನೆಮ್ಮದಿಯು ದೊರಕಬಹುದೆಂದು ನನ್ನ ನಂಬಿಕೆಯು. ಆದಕ್ಕಾಗಿ ಏಕೆ ಶೋಕಿಸುತ್ತಿರುವೆ? ಆಗಾಗ ನಾನು ನಗರಕ್ಕೆ ಬರುತ್ತಲಿರುವೆನು.''

''ಪದ್ಮಾ, ನನ್ನ ದುಃಖವನ್ನು ಬಲ್ಲವರು ಯಾರು? ನೆಮ್ಮದಿಯೆಂಬುದು ಕನಸಿನಲ್ಲಿ ಕಂಡ ಚಿತ್ರವಾಗಿದೆ. ನನ್ನ ಜೀವನವು ಶೋಕಪೂರ್ಣವಾಗಿ ಪರಿಣಮಿಸಿದೆ. ಯಾರಲ್ಲಿ ನಾನು ಪ್ರೇಮವನ್ನು ಸಮರ್ಪಿಸಿದೆನೋ, ಯಾರನ್ನು ನನ್ನ ಜೀವನದ ಸಹ ಪಥಿಕರನ್ನಾಗಿ ಸ್ವೀಕರಿಸಿದೆನೋ, ಅವರು ಹೃದಯವಾಗಲೀ ಆತ್ಮವಾಗಲೀ ಇಲ್ಲದೆ ಪಾಪಗಳ ಕೂಪದಲ್ಲಿ ಮುಳುಗಿರುತ್ತಾರೆ. ಹೆಂಡ ಕುಡುಕನ ಮಡದಿಯು ಎಂದಿಗಾದರೂ ಶಾಂತಿಯನ್ನು ಹೊಂದಬಲ್ಲಳೇ? ನಮ್ಮ ಮನೆಯು ಶಾಂತಿ-ನೆಮ್ಮದಿಗಳಿಂದ ಕೂಡಿದುದಲ್ಲ

ಅದು ಭೂಮಿಯಲ್ಲಿರುವ ನರಕ! ವಿಷಯ ವಾಸನೆಯ ವಿಷವಾಯುವಲ್ಲದೆ, ಇನ್ನಾವುದೂ ಅಲ್ಲಿ ಗೋಚರಿಸುವುದಿಲ್ಲ"

"ಸರೋಜ, ಸಹಿಸಿಕೋ! ಅವನೆಷ್ಟು ದುಷ್ಟನಾಗಿದ್ದರೂ ನಿನ್ನ ಸ್ವಾಮಿಯು. ನಿನ್ನ ಕಣ್ಣು ಮುಂದೆಯೇ ಇರುತ್ತಾನೆ. ಅವನ ಸೇವೆಯಿಂದ ನೀನು ಜೀವನದಲ್ಲಿ ಶಾಂತಿಯನ್ನು ಹೊಂದಬಹುದು. ಆದರೆ ನೀನು ನನ್ನ ಪರಿಸ್ಥಿತಿಗಳನ್ನು ಕುರಿತು ಆಲೋಚಿಸು. ಎಷ್ಟು ಭಯಂಕರವಾಗಿದೆ? ಸರೋಜ, ಆತ್ಮವಿಶ್ವಾಸವನ್ನಿಡು. ಸತ್ಯದಲ್ಲಿ ನಂಬಿಕೆಯು ನೆಲಸಿರಲಿ. ವೆಂಕಟರಾಮನು ಎಷ್ಟರವರೆಗೆ ದುಷ್ಟನೂ, ವಿಷಯಲಂಪಟನೂ ಆಗಿದ್ದರೂ, ನೀನು ಸಹನೆಯಿಂದಲೂ, ಶಾಂತಮನಸ್ಸಿನಿಂದಲೂ ಪ್ರಯತ್ನಿಸುವುದಾದರೆ, ಅವನು ತನ್ನ ಅಧಃಪತನದ ಮಡುವಿನಿಂದ ಪಾರಾಗುವುದರಲ್ಲಿ ಸಂದೇಹವಿಲ್ಲ. ಕೈಹಿಡಿದ ಪತಿಯು ಅಧಃಪತನದ ದಾರಿಯನ್ನು ಹಿಡಿದಾಗ, ಅವನ ಕೈ ಹಿಡಿದು ಕೆಸರಿನ ಕೂಪದಿಂದ ಎತ್ತುವುದು ಸತಿಯ ಕರ್ತವ್ಯವು!"

"ಪದ್ಮಾ, ನಾನೆಷ್ಟು ಬಗೆಯಾಗಿ ಪ್ರಯತ್ನಿಸಿದೆನು? ಯಾವ ರೀತಿಯಲ್ಲಿ ಉದ್ಯಮಿಸಿದೆನು? ಆದರೂ ಪ್ರಯೋಜನವಿಲ್ಲ. ಸಕಲವೂ ಜಲಮಥನದ ಯಜ್ಞ! ನಾನು ಕಂಬನಿ ಸುರಿಸದ ದಿನವಿಲ್ಲ. ಎರಡು ದಿನಗಳಿಗೆ ಒಂದು ಬಾರಿಯಾದರೂ ಅವರು ಮನೆಗೆ ಬರುವಂತಿಲ್ಲ. ಅವರ ವಾಸನೆ ಸಹಿಸಲಾಗುವುದಿಲ್ಲ! ಪಾಪಸ್ಪರ್ಶದಿಂದ ನನ್ನ ಜೀವವು ಸುಡುತ್ತಲಿದೆ!"

"ದೋಷವನ್ನು ಸಹಿಸು. ನಿನ್ನಲ್ಲಿ ಬೆಳಗುತ್ತಿರುವ ಪರಿಶುದ್ಧತೆಯಿಂದ ವೆಂಕಟರಾಮನನ್ನು ಪುನೀತನನ್ನಾಗಿ ಮಾಡು. ಮನುಷ್ಯನು ಎಷ್ಟು ಭಯಂಕರವಾದ ಪಾಪಸಂಪೋಷದಿಂದ ಲಿಪ್ತನಾಗಿದ್ದರೂ ಅವನಲ್ಲಿ ಆ ದಿವ್ಯ ಜ್ಯೋತಿಯ ಕಿಡಿಯೊಂದಿದೆ. ಆ ಬೆಳಕನ್ನು ಸ್ಫುರಿಸುವಂತೆ ಆ ಪ್ರಕಾಶವು ಅವನನ್ನು ಆವರಿಸಿರುವ ಇರುಳನ್ನು ಸಂಹರಿಸುವಂತೆ-ಮಾಡುವುದು ನಿನ್ನ ಕರ್ತವ್ಯವು! ಸರೋಜ, ಹೆಂಗುಸು ಗಂಡಸಿಗಿಂತಲೂ ಹೆಚ್ಚಾಗಿ ಈ ಸಂಸಾರದ ಭಾರವನ್ನು ನಿರ್ವಹಿಸಬೇಕಾಗಿ ಬರುತ್ತದೆ. ಸಹನತೆಯು ಅವಳಲ್ಲಿ ಮೂರ್ತಿವೆತ್ತಿರಬೇಕು! ಅಕ್ರಮ, ಅನ್ಯಾಯ ಮತ್ತು ಅಧರ್ಮಗಳನ್ನು ಎದುರಿಸುವುದರಲ್ಲಿ ಅವಳ ಹೃದಯವು ವಜ್ರದಂತೆ ಕಠೋರವಾಗಿರಬೇಕು. ಶಿಶುಗಳನ್ನೂ, ಅನಾಥರನ್ನೂ ಶುಶ್ರೂಷಿಸುವುದರಲ್ಲಿ ಅವಳ ಎದೆಯು ಬೆಣ್ಣೆಯಂತೆ ಮೃದುವಾಗಿರಬೇಕು. ಶಕ್ತಿಸ್ವರೂಪಿಣಿಯಾದ ದುರ್ಗೆಯೂ ಜ್ಞಾನನಿಧಿಯಾದ ಸರಸತಿಯೂ ಮಂಗಳದಾಯಕಿಯಾದ ಶ್ರೀದೇವಿಯೂ ಹೆಂಗಸಿನಲ್ಲಿ ಅಡಗಿರುತ್ತಾರೆ! ಹೆಂಗಸೆಂದರೆ, ಪುರುಷನ ವಿಕಾರಸಂತೃಪ್ತಿಗಾಗಿರುವ ಒಂದು ಯಂತ್ರವಲ್ಲ. ಅವಳೇ ಜಗತ್ತಿನ ಮಾರ್ಗದರ್ಶಕಳು! ಗೃಹಿಣಿಯು ಕೆಟ್ಟರೆ ಕುಟುಂಬವು ಹಾಳಾಗುತ್ತದೆ. ಕುಟುಂಬವು ಹಾಳಾದರೆ ನಾಡು ಅಧಃಪತನವನ್ನು ಹೊಂದುತ್ತದೆ, ಆದುದರಿಂದ ನಾಡಿನ ಆಗು-ಹೋಗುಗಳು ನಮ್ಮ ನಾಡಿನ ಲಲನೆಯರ ಕರಗಳಲ್ಲಿವೆ! ಉಜ್ವಲವಾದ, ಸುಂ-

ದರವಾದ ಒಂದು ಹೊಸ ಭಾರತವರ್ಷವನ್ನು ಸೃಷ್ಟಿಸುವ ಒಂದು ಮಹಾಕೃತ್ಯವು ವನಿತೆಯರ ಪಾಲಿಗೆ ಬಿದ್ದಿರುವುದು. ಅಬಲೆಯರೆಂದೆನಿಸಿಕೊಳ್ಳುವ ನಾವು, ಆ ಮಹಾ ಕಾರ್ಯಸಾಧನೆಯಲ್ಲಿ ನಮ್ಮ ಶಕ್ತಿ ಮತ್ತು ಪರಾಕ್ರಮಗಳನ್ನು ಪ್ರದರ್ಶಿಸಲೇಬೇಕು. ನಮ್ಮ ನಾಡು ಅಭ್ಯುದಯವನ್ನು ಹೊಂದಿದರೆ, ನಾವೂ ಅಭ್ಯುನ್ನತಿಯನ್ನು ಹೊಂದು ವೆವು. ಆದುದರಿಂದ ಸರೋಜಾ, ಶೋಕವನ್ನು ತ್ಯಜಿಸು! ಜಾಗ್ರತಳಾಗು! ನೀನು ನೆರವೇರಿಸಬೇಕಾದ ಕರ್ತವ್ಯಗಳನ್ನು ಮಾಡಲು ನೀನು ಮುಂದೆ ಬಾ!''

"ಪದ್ಮಾ, ನಿನ್ನ ಉಪದೇಶವು ಆಶ್ರಾವಿಸಲು ಬಹು ಮನೋಹರವಾಗಿದೆ; ಆದರೆ ಹೃದಯದೌರ್ಬಲ್ಯವು ನನ್ನನ್ನು ಪೀಡಿಸುತ್ತಿರುವುದು. ನೇತ್ರಗಳ ಮುಂದೆ ಪ್ರತ್ಯಕ್ಷ ವಾಗಿ ತಾಂಡವವಾಡುತ್ತಿರುವ ಶೋಕರಾಶಿಯಿಂದ ವಿಮೋಚನೆಯನ್ನು ಹೊಂದು ವದು ಹೇಗೆ?''

"ಶೋಕ-ಸಂತಾಪಗಳು ಮನಸ್ಸನ್ನು ಪೀಡಿಸುತ್ತಿರುವುವೆಂಬದು ನಿಜವು! ಎದು ರಿಗೆ ನಿಂತಿರುವ ವಿಪತ್ತುಗಳ ಕಡಲನ್ನು ನೋಡಿ ಎದೆಯು ಹಿಂಜರಿಯುತ್ತದೆ; ಆದರೆ ಸರೋಜ, ಈ ಜಗತ್ತನ್ನು ಆಳುತ್ತಿರುವ ದಿವ್ಯಶಕ್ತಿಯೊಂದಿದೆ! ಸತ್ಯಸ್ವರೂಪನಾದ ವಿಶ್ವನಾಯಕನು ತಾನು ರಚಿಸಿದ ರಂಗಭೂಮಿಯಲ್ಲಿ ಹಲವು ನಟರಿಂದ ನಾಟಕವ ನ್ನಾಡಿಸಿ ನೋಡುತ್ತಲಿದ್ದಾನೆ! ಈ ವಿಶ್ವವೇ ಆ ಪರಂಜ್ಯೋತಿಯ ನಾಟ್ಯರಂಗ! ಅವನು ಹಾಡುತ್ತಿರುವ ಗಾನಕ್ಕೆ ಸರಿಯಾಗಿ ನಾವು ನರ್ತಿಸುತ್ತಲಿದ್ದೇವೆ!

ವಿಶ್ವವೆಂಬುದೊಂದು ರಂಗಭೂಮಿಯು!
ವಿವಿಧ ವೇಷಗಳ ಧರಿಸಿ
ಕುಣಿಯುತಿಹವು ವಿವಿಧ ತೆರ ಜೀವರಾಶಿಗಳು
ನಾಯಕನ ತಾಳಕ್ಕೆ ಸರಿಯಾಗಿ!
ಜೀವನದ ಚಿತ್ರವದು ದೇವನಾ ಬರೆಹ,
ಜಗವೆಂಬ ಪತ್ರದಾ ಮೇಲೆ!
ವಿವಿಧ ತರ ರೂಪಗಳನು ಬರೆದಿಹನಾ ಚಿತ್ರ-
ಗಾರ ಬೆರಸಿ ಬಣ್ಣಯ ರೂಪವನೆ!
ಜೀವನದ ಚಿತ್ರವಿದು ನೀಡುವೆನು ಕಾಣಿಕೆ-
ಯಾಗಿ ಆ ಕಲಾಕಾರನಿಗೆ!
ಆತನು ನೀಡಿದುದು ನಾ ನಿವೇದಿಸುವೆ
ವಿಶ್ವಗಳ ಅರಸನಾದ ಬೆಳಕಿಗೆ!
ನನ್ನದೆಂಬುದೇನಿಹುದು? ಎಲ್ಲವು ಆತನ
ವಿನೋದದ ಲೀಲಾನಾಟಕವು!
ನದಿಗಳೆಲ್ಲವು ಸೇರುವ ತೆರದಿ ಸಾಗರನ
ಸರ್ವವೂ ಸೇರುತಿಹವು ಆ ಬೆಳಕನ್ನು!

ಎಂದು ಕವಿಯು ಹಾಡುತ್ತಾನೆ. ಆದುದರಿಂದ ನೀನು ಶೋಕಿಸಬೇಡ; ಕವಿಯು ಹೇಳುವಂತೆ ನಾವೆಲ್ಲರೂ ನಟರು! ಈಶನು ನಿರ್ದೇಶಿಸಿದ ಪಾತ್ರಗಳನ್ನು ವಹಿಸಿ ನಾವಿಂದು ನಟಿಸೋಣ. ಈ ಅಭಿನಯದಲ್ಲಿ ವಿಜಯವನ್ನು ಹೊಂದಿ ಆತನ ಕೃಪೆಗೆ ಪಾತ್ರರಾಗೋಣ."

ಈ ರೀತಿ ಪದ್ಮಳು ನೀಡಿದ ಉಪದೇಶಗಳಿಂದ ಸರೋಜಳು ಶೋಕದೀಪ್ತವಾದ ಹೃದಯವನ್ನು ಶಾಂತಗೊಳಿಸಲು ಯತ್ನಿಸಿದಳು. ಸರೋಜಳ ವ್ಯಥೆಯು ಪರಿಪೂರ್ಣವಾಗಿ ಶಮನವನ್ನು ಹೊಂದದಿದ್ದರೂ, ಪದ್ಮಳ ಆಧ್ಯಾತ್ಮಿಕೋಪದೇಶವು ಅವಳ ಹೃದಯದಲ್ಲಿ ತುಸ ಬೆಳಕನ್ನು ಬೀರಿತು.

ಮರುದಿನ ಪದ್ಮಳು ನಗರವನ್ನು ತ್ಯಜಿಸಿದಳು; ಶಾಂತಿಯ ದರ್ಶನವನ್ನು ಪಡೆಯುವುದಕ್ಕಾಗಿ, ಸೃಷ್ಟಿಸೌಂದರ್ಯದ ಅನುಭವವನ್ನು ಹೊಂದುವದಕ್ಕಾಗಿ ಅವಳು ಗ್ರಾಮಾಂತರಕ್ಕೆ ತೆರಳಿದಳು. ತನ್ನ ಜೀವನದ ಗೆಳತಿಯನ್ನು, ತನ್ನ ಮಾರ್ಗದರ್ಶಕಳನ್ನು ಬಿಟ್ಟು ಅಗಲಿದುದರಿಂದ ಈ ಮೊದಲೇ ಮ್ಲಾನಭಾವವನ್ನು ತಾಳಿದ್ದ ಸರೋಜಳ ವದನಮಲ್ಲಿಗೆಯು ಇನ್ನಿಷ್ಟು ಬಾಡಿತು!

---

## ೧೨ ಸರ್ವದೇವ ನಮಸ್ಕಾರಃ ಕೇಶವಃ ಪ್ರತಿಗಚ್ಛತಿ!

ನಳಿನೀರಂಜನನ ಕುಟೀರಕ್ಕೆ ಶಾಂತಿಯನ್ನು ಹುಡುಕುತ್ತಾ ಬಂದ ತರುಣನ ನಾಮಧೇಯವು ಸುಧಾಂಶುವೆಂದಾಗಿದ್ದಿತು. ಉತ್ಸಾಹ, ಸ್ಫೂರ್ತಿ, ಕಾರ್ಯಕುಶಲತೆ ಇವುಗಳಿಂದ ಕೂಡಿದ ತರುಣನು ಅವನಾಗಿದ್ದನು. ಅವನ ವದನಮಂಡಲದಲ್ಲಿ ರಾಜಿಸುತ್ತಲಿರುವ ಮಂದಸ್ಮಿತವು ಯಾರನ್ನೂ ಆಕರ್ಷಿಸದೆ ಇರದು. ಶಾಂತವಾದ ಆ ಮುಖಭಾವದಲ್ಲಿ ಅವನ ಎದೆಯಲ್ಲಿ ತುಂಬಿರುವ ಆಳವಾದ ವಿಚಾರಗಳು ಹೊರಸೂಸುತ್ತಿದ್ದವು.

ಈ ತರುಣನ ಹೆಸರು ಸುಧಾಂಶುವೆಂಬುದಲ್ಲದೆ, ಅದಕ್ಕಿಂತಲೂ ಹೆಚ್ಚಿನ ಪರಿಚಯವು ಸಾಧನ ಕುಟೀರದವರಿಗೆ ಲಭಿಸಿರಲಿಲ್ಲ; ಆದರೆ ಅವನು ಎಲ್ಲರ ಪ್ರೇಮ-ವಿಶ್ವಾಸಗಳಿಗೆ ಪಾತ್ರೀಭವಿಸಿದ್ದನು. ಜನರು ಅವನು ಯಾವ ಊರಿನವನೆಂಬುದನ್ನು ತಿಳಿಯದಿದ್ದರೂ, ಸಂಸಾರ ನೌಕೆಯಲ್ಲಿ ಸಂಭವಿಸಿದ ಒಂದು ಬಿರುಗಾಳಿಯ ಪರಿಣಾಮವಾಗಿ ಸುಧಾಂಶುವು ಜೀವನದಲ್ಲಿ ವೈರಾಗ್ಯವನ್ನು ಹೊಂದಿರುವನೆಂಬದನ್ನು ಊಹಿಸಿದ್ದರು. ಅದನ್ನು ಅವನ ಹಣೆಯಲ್ಲಿ ಮೂಡಿರುವ ವಿಷಾದದ ಗೆರೆಗಳು ಸೂಚಿಸುತ್ತಿದ್ದವು.

ಸುಧಾಂಶುವು ನಳಿನೀರಂಜನನ ಪ್ರೇಮ-ವಿಶ್ವಾಸಗಳಿಗೆ ಪಾತ್ರನಾದನು. ಸುಧಾಂಶುವಿನಲ್ಲಿರುವ ಗುಣಗಳು ನಳಿನೀರಂಜನನನ್ನು ಆಕರ್ಷಿಸಿದುವು. ಅವನು ಸುಧಾಂಶುವಿನಲ್ಲಿ ತನ್ನ ಕಾಲಾನಂತರ ತನ್ನ ಆದರ್ಶಗಳನ್ನು ಸಾಧಿಸಲಿರುವ ಚೈತನ್ಯವನ್ನು ಅವ

ಲೋಕಿಸಿದನು. ಆದುದರಿಂದ ಸಾಧನ ಕುಟೀರದಲ್ಲಿ ವಾಸಿಸುತ್ತಿರುವ ಇತರ ಶಿಷ್ಯರಿಗಿಂತ ನಳಿನೀರಂಜನನು ಸುಧಾಂಶುವನ್ನು ಹೆಚ್ಚಾಗಿ ಪ್ರೀತಿಸತೊಡಗಿದನು. ಸುಧಾಂಶುವಿನಿಗಾದರೂ, ತನ್ನ ಆತ್ಮವನ್ನು ವಿಕಾಸಪಡಿಸಲಿರುವ ಒಬ್ಬ ಆಚಾರ್ಯನು ನಳಿನೀರಂಜನನ ರೂಪದಲ್ಲಿ ದೊರಕಿದನು. ಅವರಿಬ್ಬರ ಸಂಗಮವು ಕರ್ಮದಲ್ಲಿ ಭಕ್ತಿಯು ಬೆರತಂತಾಯಿತು. ನಳಿನೀರಂಜನನು ಕಾರ್ಯಕುಶಲನು, ಉದ್ಯಮಶೀಲನಾಗಿರುವುದೇ ಅವನ ಸ್ವಭಾವವು! ಸುಧಾಂಶುವು ವಿಚಾರಶೀಲನು; ಭಕ್ತಿ ಮತ್ತು ಪ್ರೇಮಗಳೇ ಅವನಲ್ಲಿರುವ ಸ್ವತ್ತುಗಳು! ಈ ಎರಡು ಗುಣಗಳು, ಈ ಎರಡು ಶಕ್ತಿಗಳು ಸಾಧನ ಕುಟೀರದಲ್ಲಿ ಬೆಳಗಿದುವು.

ಆ ಗುರುಶಿಷ್ಯರು ಸ್ವತಂತ್ರ ಭಾರತದ ಸ್ವಪ್ನವನ್ನು ಕಂಡು, ಅಭಿನವ ಭಾರತವೆಂಬ ಕಟ್ಟಡದ ತಳಹದಿಯನ್ನು ನಿರ್ಮಿಸುವುದರಲ್ಲಿ ಉದ್ಯುಕ್ತರಾದರು. ಒಂದು ವೇಳೆ ವಾಚಕರು ಶಂಕಿಸಬಹುದು; ಒಂದು ಗ್ರಾಮದಲ್ಲಿ ಕೆಲವು ಮಂದಿ ಜನರು ಕಲೆತು ಒಂದು ಆಶ್ರಮವನ್ನು ಸ್ಥಾಪಿಸಿದ ಮಾತ್ರದಿಂದ ವಿಶಾಲವಾದ ಭಾರತವರ್ಷವು ಅಭ್ಯುದಯವನ್ನು ಹೊಂದುವುದು ಹೇಗೆ ಎಂಬುದಾಗಿ, ಆದರೆ ಸ್ವಾತಂತ್ರ್ಯದ ಬೆಳಕು ಪ್ರಾರಂಭದಲ್ಲಿ ಅತ್ಯಂತ ಸೂಕ್ಷ್ಮರೂಪದಲ್ಲಿ ಅಡಗಿದ್ದು, ಅನಂತರ ಜಗತ್ತನ್ನೇ ವ್ಯಾಪಿಸುತ್ತದೆ. ಆದರ್ಶವು ಮೊಳಕೆಯಾಗಲು ನೆಲವನ್ನು ಸರಿಪಡಿಸುವದೇ ಆದರ್ಶಸಾಧಕರ ಕೆಲಸವು! ಅದರಂತೆಯೇ ಅಭಿನವ ಭಾರತದ ಉದಯವು ಹಳ್ಳಿಗಾಡಿನಲ್ಲಿರುವ ಒಂದು ಗುಡಿಸಿಲಿನಲ್ಲಾಯಿತು. ನಳಿನೀರಂಜನ ಮತ್ತು ಸುಧಾಂಶುರೇ ಆ ಮಂಗಳ ಪ್ರಭಾತದಲ್ಲಿ ಹಾಡಿದ ಕೋಗಿಲೆಗಳು!

ಸಾಧನ ಕುಟೀರದಲ್ಲಿ ಭಾರತವರ್ಷಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ತನ್ನ ಶಿಷ್ಯರೊಡನೆ ಮಾತಾಡಿ, ನಳಿನೀರಂಜನನು ಅವರ ಮನಸ್ಸುಗಳಲ್ಲಿ ಹರಡಿರುವ ಸಂದೇಹಗಳನ್ನು ಹೋಗಲಾಡಿಸುತ್ತಿದ್ದನು. ತಮ್ಮ ನಾಡಿನ ಏಳಿಗೆಗಾಗಿ ಹೊರಟಿರುವ ಆ ತರುಣರಾದರೂ, ತಮ್ಮ ಆಚಾರ್ಯನಿಂದ ಲಭಿಸುತ್ತಿರುವ ಜ್ಞಾನ ಪಿಯೂಷವನ್ನು ಸವಿದು ತಾಯ್ನಾಡ ಸೇವೆಗಿರುವ ಚೈತನ್ಯವನ್ನು ಸಂಪಾದಿಸುತ್ತಲಿದ್ದರು ಎಂದಿನಂತೆ ಆ ದಿನ ಇರುಳಿನಲ್ಲಿಯೂ 'ಸಾಧನ ಕುಟೀರ' ವಾಸಿಗಳು ಆಕಾಶದಲ್ಲಿ ಹೊಳೆಯುತ್ತಿರುವ ಚಂದ್ರಮನ ಜ್ಯೋತಿಯಿಂದ ಧವಳ ವರ್ಣವನ್ನು ತಾಳಿದ್ದ ಹೂದೋಟದಲ್ಲಿ ನೆರೆದಿದ್ದರು. ನಳಿನೀರಂಜನನು ಅಂಬರ ಮಾರ್ಗದಲ್ಲಿ ನಗುತ್ತಾ ನಿಂತಿರುವ ತಾರಾಪತಿಯನ್ನು ಅವಲೋಕಿಸುತ್ತಾ ಆಲೋಚನಾಮಗ್ನನಾಗಿದ್ದನು. ಆ ವೇಳೆಯಲ್ಲಿ ಆಚಾರ್ಯನ ಪ್ರಿಯಶಿಷ್ಯನಾದ ಸುಧಾಂಶವು ತನ್ನ ಗುರುದೇವನನ್ನು ಈ ರೀತಿ ಪ್ರಶ್ನಿಸಿ, ತನ್ನ ಸಂದೇಹಗಳನ್ನು ವ್ಯಕ್ತಪಡಿಸಿದನು: "ಆಚಾರ್ಯ, ಇಂದಿನ ಭಾರತ ವರ್ಷದಲ್ಲಿ ನೂರಾರು ಮತಗಳು, ನೂರಾರು ಜಾತಿಗಳು ನೆಲೆ ನಿಂತಿರುತ್ತವೆ. ಹಿಂದುಗಳನ್ನು ನೋಡಿ ಮುಸಲ್ಮಾನರು ಕಣ್ಣು ಕೆಂಪು ಮಾಡುತ್ತಾರೆ; ಶೈವರನ್ನು ವೀಕ್ಷಿಸಿ ವೈಷ್ಣವರು ಹಲ್ಲುಕಡಿಯುತ್ತಲಿದ್ದಾರೆ! ತಮ್ಮ ಜಾತಿ, ತಮ್ಮ ಮತ ಇವುಗಳ

ಹೆಸರು ಹೇಳಿ, ಭಾರತೀಯರು ಅನ್ಯೋನ್ಯ ಹೊಡೆದಾಡುವುದರಲ್ಲಿ ನಿರತರಾಗಿದ್ದಾರೆ! ಮನೆಯಿಂದು ಮಲ್ಲಶಾಲೆಯಾಗಿದೆ! ಭಾರತ ವರ್ಷವು ಈ ಜಾತಿ ಮತ ಪಂಥಗಳ ಮತ್ಸರಗಳಿಂದ ಭಿನ್ನ ಭಿನ್ನವಾಗಿ ಹೋಗಿದೆ! ಭಾರತೀಯರ ಶಕ್ತಿಯು ಈ ಗೃಹಕಲಹ ದಲ್ಲಿ ವ್ಯಯವಾಗುತ್ತಿರುವದು. ಈ ರೀತಿ ಬಾಂಧವರೇ ಹೊಡೆದಾಡುತ್ತಿರುವದನ್ನು ನಿವಾರಿಸುವುದು ಹೇಗೆ? ಖಂಡ, ಖಂಡವಾಗಿ ಬಿದ್ದಿರುವ ಭಾರತ ವರ್ಷವು ಈ ವರ್ಗ ಕಲಹದಿಂದ ಮೋಚನೆಯನ್ನು ಹೊಂದಿ ಅಖಂಡ ಸ್ವರೂಪವನ್ನು ಹೊಂದುವ ದಾರಿಯು ಯಾವುದು? ಈ ಗೃಹಕಲಹ ಶಮಿಸುವವರಗೆ ಏಳಿಗೆಗೆ ದಾರಿಯಿಲ್ಲವಷ್ಟೆ?''

ತನ್ನ ದೃಷ್ಟಿಯನ್ನು ಆಗಸದಲ್ಲಿ ಹೊಳೆಯುತ್ತಿರುವ ಕುರಂಗಧರನ ಕಡೆಗೆ ಹೊರಳಿಸಿ ಒಂದು ಎಳೆ ನಗೆಯನ್ನು ಹೊರಚಲ್ಲಿದ ಅನಂತರ ನಾಥನ ಕುಟೀರದ ಆಚಾರ್ಯನು ನುಡಿದನು:—''ತಮ್ಮಾ, ಸುಧಾಂಶು! ನಾವು ಅಣ್ಣ-ತಮ್ಮಂದಿರು ಪರಸ್ಪರ ಹೊಡೆದಾಡುತ್ತಿರುವ ವರೆಗೆ ನೀನು ಹೇಳುವಂತೆ ನಮಗೆ ಅಭ್ಯುನ್ನತಿಯ ದಾರಿಯಿಲ್ಲ ವೆಂಬುದು ನಿಜವು. ಭಾರತವರ್ಷವು ಪಾರತಂತ್ರ್ಯದಿಂದ ಬಿಡುಗಡೆಯನ್ನು ಹೊಂದ ಬೇಕಾದರೆ, ಈ ಗೃಹಕಲಹದಿಂದ ನಮ್ಮ ನಾಡದೇವಿಯು ವಿಮುಕ್ತಳಾಗಬೇಕು. ಈ ಗುದ್ದಾಟಕ್ಕೆ ನಮ್ಮಲ್ಲಿರುವ ಅಜ್ಞಾತೆಯೇ ಮೂಲ ಕಾರಣವು! ನಾವು ನಮ್ಮ ಮೂಗುಗಳ ಮೇಲೆ ಬಣ್ಣದ ಕನ್ನಡಕಗಳನ್ನಿಟ್ಟುಕೊಂಡು ಲೋಕವನ್ನು ನೋಡುತ್ತಿರುವೆವು. ನಮ್ಮ ಮೂಗುಗಳ ಮೇಲಿರುವ ಬಣ್ಣದ ಕನ್ನಡಕಗಳ ದೋಷದಿಂದ ಲೋಕದ ಬಣ್ಣವು ಒಂದೇ ಆಗಿದ್ದರೂ ಅದು ಒಬ್ಬೊಬ್ಬರಿಗೆ ಅವರ ಕನ್ನಡಕದಲ್ಲಿರುವ ಗಾಜಿನ ಬಣ್ಣಕ್ಕನುಸಾರವಾಗಿ ಒಂದೊಂದು ಬಣ್ಣದಲ್ಲಿ ಗೋಚರವಾಗುತ್ತಿರುವದು. ಈ ಜಗತ್ತಿನ ಬಣ್ಣವು ಒಂದೇ ಆಗಿದ್ದರೂ, ನಮ್ಮ ಮೂಗಿನ ಮೇಲಿರುವ ಕನ್ನಡಕದ ಮೂಲಕ ಗೋಚರವಾದ ಬಣ್ಣವನ್ನುಳಿದು ಇತರರು ಹೇಳುತ್ತಿರುವ ಬಣ್ಣಗಳು ಸುಳ್ಳೆಂದು ವಾದಿಸುತ್ತಲಿರುವೆವು! ಈ ಅಜ್ಞಾತೆಗೆ ಒಳಗಾದ ನಾವು ಇಂದು ನಮ್ಮ ನಂಬಿಕೆಗಳಿಗೆ ಬಲಿಯಾಗಿ, ನೆತ್ತರಿನ ನದಿಯನ್ನೂ ಹರಿಸಲು ಹಿಂಜರಿಯುವುದಿಲ್ಲ!''

''ತಮ್ಮಾ, ಈ ಅಜ್ಞಾತೆಯೇ ನಮ್ಮ ಇಂದಿನ ದುರವಸ್ಥೆಗೆ ಕಾರಣಭೂತವಾದುದೆಂದು ತಿಳಿ! ಸತ್ಯಾಂಶವನ್ನು ತಿಳಿಯದೆ, ನಾವು ಬಗೆದುದೇ ಸತ್ಯವೆಂಬುದಾಗಿ ನೆನೆದು ಭ್ರಾಂತಿವಿಲಾಸದಲ್ಲಿ ಲೋಲುಪರಾಗಿರುತ್ತೇವೆ. ಈ ಕುಟೀರವನ್ನೇ ಉದಾಹರಣೆಗಾಗಿ ತೆಗೆದುಕೊಳ್ಳೋಣ. ಈ ಕಟ್ಟಡಕ್ಕೆ ನಾಲ್ಕು ದಾರಿಗಳಿಂದ ಬಂದು ಸೇರಬಹುದು. ಒಬ್ಬನು ಪೂರ್ವ ದಿಕ್ಕಿನಿಂದ ಬರುತ್ತಾನೆ, ಇನ್ನೊಬ್ಬನು ಪಶ್ಚಿಮದಿಂದಲೂ, ಮೂರನೆಯವನು ಬಡಗಣದಿಂದಲೂ, ನಾಲ್ಕನೆಯವನು ತೆಂಕಣದ ದಾರಿಯಿಂದಲೂ ಬರುತ್ತಾನೆ. ಈ ನಾಲ್ವರು ಪರಸ್ಪರ ವಿಪರೀತವೆಂದು ತೋರುತ್ತಿರುವ ದಾರಿಗಳನ್ನು ಅವಲಂಬಿಸಿದ್ದರೂ, ಅಂತ್ಯದಲ್ಲಿ ಆ ನಾಲ್ವರೂ ಈ ಕುಟೀರಕ್ಕೇ ಬಂದು ಸೇರುತ್ತಾರೆ. ಮೂಡಣದಿಂದ ಬರುತ್ತಿರುವವನು ತೆಂಕಣದಿಂದ ಬರುವವನನ್ನು ಕಂಡು :''ನೀನು ಹಿಡಿದ ದಾರಿಯು ತಪ್ಪಾದದು, ಆ ಕುಟೀರವನ್ನು ಸೇರಬೇಕಾದರೆ,

ನಾನು ಹಿಡಿದ ದಾರಿಯನ್ನೇ ನೀನು ಅವಲಂಬಿಸಬೇಕು!'' ಎಂದು ಉಪದೇಶಿಸಿದರೆ, ಆ ಉಪದೇಶವು ಹಾಸ್ಯಾಸ್ಪದವಾದುದಲ್ಲವೇ? ಆದರೆ ಅವನು ತಾನು ಹಿಡಿದ ದಾರಿಯಂ ತೆಯೇ ತೆಂಕಣದಿಂದ ಬರುವ ದಾರಿಯೂ ಕುಟೀರವನ್ನೇ ಸೇರುತ್ತದೆ ಎಂಬುದನ್ನು ನಂಬುವದಿಲ್ಲ. ತಾನು ಅವಲಂಬಿಸಿದ ದಾರಿಯ ಹೊರತು, ಇತರ ಪಥಗಳೆಲ್ಲವೂ ತಪ್ಪೆಂ- ಬುದಾಗಿ ಅವನು ತಿಳಿಯುತ್ತಾನೆ. ಅದರಂತೆಯೇ ತಾನು ಅವಲಂಬಿಸಿದ ದಾರಿಯನ್ನೇ ಇತರ ಮೂವರೂ ಅನುಸರಿಸಬೇಕೆಂದು ಅವರನ್ನೆಲ್ಲಾ ನಿರ್ಬಂಧಿಸಿ ಪೀಡಿಸಲು ಹಿಂಜರಿ ಯುವದಿಲ್ಲ. ಈ ಉಪಮೆಯಂತಿದೆ ನಮ್ಮ ಈಗಲಿನ ಪರಿಸ್ಥಿತಿಯು''

''ಮತಗಳ ವಿಚಾರವಾದರೂ ಇದೇ ಆಗಿದೆ, ಮತಕಲಹ, ಅವುಗಳ ವಿಚಾರಣೆ ಇವುಗಳನ್ನು ಕುರಿತು ವಿವೇಚಿಸುವ ಮೊದಲು ಮತವೆಂದರೇನೆಂಬುದನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಮತವೆಂಬ ಶಬ್ದಕ್ಕೆ ನಿಘಂಟು ಕೊಡುತ್ತಿರುವ ಅರ್ಥವು ಅಭಿ ಪ್ರಾಯವೆಂದಾಗಿದೆ; ಆದರೆ ವ್ಯವಹಾರದಲ್ಲಿ ಇದರ ಅರ್ಥವು ವಿಪುಲವಾಗಿದೆ. ಮತ ವೆಂದರೆ, ಮನುಷ್ಯನು ತನ್ನ ಆತ್ಮವಿಕಾಸವನ್ನು ಹೊಂದಲು ಅವಲಂಬಿಸಿದ ದಾರಿಯು! ಮನುಷ್ಯನು ಪೂರ್ಣತೆಗೆ ಪ್ರಯಾಣ ಮಾಡುತ್ತಿರುವದರಿಂದ, ಆ ಪಥದಲ್ಲಿ ಅವನು ಉದ್ಯಮಿಸುತ್ತಿರುವ ಸಾಧನೆಗಳೆಲ್ಲಾ ಅವನ 'ಮತ'ಕ್ಕೆ ಸಂಬಂಧಿಸಿದವುಗಳಾಗಿರುತ್ತವೆ. ಅವನ ಉದ್ಯಮಗಳು ಉನ್ನತವಾದ ಒಂದು ವಲಯಕ್ಕೆ ತಲುಪಲಿರುವ ಸಾಧನೆಗಳಾ ಗಿರುವದರಿಂದ ಅವುಗಳಲ್ಲಿ ಅಶಾಂತತೆಗಾಗಲೀ, ದ್ವೇಷ ಕಲಹಗಳಿಗಾಗಲೀ ಸ್ಥಾನವಿಲ್ಲ; ಆದರೆ ಸಂಕುಚಿತ ಚಿತ್ತನಾದ ಅವನು ತಾನು ಹಿಡಿದಿರುವ ದಾರಿಯೊಂದು ಮಾತ್ರ ಸರಿಯೆಂಬ ವಿಶ್ವಾಸದಿಂದ, ಆ ಉನ್ನತಸ್ಥಾನವನ್ನು ನಹಾ ಕೋಪ, ಕಲಹಗಳೆಂಬ ಕೆಸರಿನ ಕೂಪಕ್ಕೆ ಎಳೆಯಲು ಯತ್ನಿಸುತ್ತಾನೆ. ಹಿಂದೆ ಹೇಳಿದಂತೆ ತಾನು ಅವಲಂಬಿ ಸಿರುವ ದಾರಿಯನ್ನುಳಿದು, ಆಧ್ಯಾತ್ಮ ಸಾಧನೆಗಳಿಗೆ ಇತರ ಮಾರ್ಗಗಳನ್ನು ಅವಲಂಬಿ ಸಿದವರೆಲ್ಲರೂ ತಪ್ಪು ದಾರಿಯನ್ನು ಹಿಡಿದವರೆಂಬ ನಂಬಿಕೆಯಿಂದ ಅವರೊಡನೆ ಕಾದಾ ಡಲೂ, ನೆತ್ತರಿನ ನದಿಯನ್ನು ಹರಿಸಲೂ ಮನುಷ್ಯನು ಹಿಂಜರಿಯುವುದಿಲ್ಲ.''

''ಹಾಗಾದರೆ, ಎಲ್ಲಾ ಮತಗಳಲ್ಲಿಯೂ ಸತ್ಯವಿದೆಯೇ? ಎಲ್ಲಾ ಮತಗಳ ಮೂಲಕವೂ ಪೂರ್ಣತೆಯನ್ನು ಹೊಂದಬಹುದೆ?'' ಎಂದು ಸುಧಾಂಶುವು ತನ್ನ ಸಂ ದೇಹವನ್ನು ವ್ಯಕ್ತ ಪಡಿಸಿದನು.

"ಸುಧಾಂಶು! ಪ್ರತಿಯೊಂದು ಮತದಲ್ಲಿಯೂ ಸತ್ಯವಿದೆ, ಸತ್ಯವೆಂಬುದೇ ಎಲ್ಲಾ ಮತಗಳ ಜೀವಾಳವು! ಬಹಿರಂಗದಲ್ಲಿ ನಮ್ಮ ದಾರಿಗೆ ಕೇವಲ ವಿಪರೀತವಾದವುಗಳೆಂದು ತೋರಿ ಬಂದರೂ, ಅವುಗಳ ಅಂತರಂಗವನ್ನು ಪರಿಶೋಧಿಸಿದರೆ ಸತ್ಯವು ಬೆಳಕಿಗೆ ಬರುತ್ತದೆ. ಸತ್ಯಸ್ವರೂಪನಾದ ಪರಂಜ್ಯೋತಿಯ ದರ್ಶನವನ್ನು ನಾವು ಯಾವ ದಾರಿ ಯನ್ನು ಅವಲಂಬಿಸಿದರೂ ಹೊಂದಬಹುದು. ನದಿಗಳು ಬೇರೆ ಬೇರೆ ಪ್ರದೇಶಗಳಲ್ಲಿ ಹುಟ್ಟಿ ಬೇರೆ ಬೇರೆ ದಾರಿಗಳಲ್ಲಿ ಪ್ರವಹಿಸಿದರೂ, ಅಂತ್ಯದಲ್ಲಿ ಅವುಗಳೆಲ್ಲವೂ ಸಾಗರನಲ್ಲಿ ಸಂಗಮವನ್ನು ಹೊಂದುತ್ತವೆ. ಅದರಂತೆಯೇ ಎಲ್ಲಾ ಸಾಧನೆಗಳು, ಎಲ್ಲಾ ತತ್ವ

ಗಳು ಆ ಪರಮ ಪರಂಜ್ಯೋತಿಯ ದರ್ಶನಕ್ಕಿರುವ ಮಾರ್ಗದರ್ಶಿನಿಗಳಾಗಿರುವವು. ತಾನು ಅವಲಂಬಿಸಿದ ಮತವನ್ನುಳಿದು ಇತರ ಮತಗಳೆಲ್ಲವೂ ಅಸತ್ಯವೆಂಬುದಾಗಿ ಒಬ್ಬನು ನುಡಿಯುತ್ತಿದ್ದರೆ, ಅವನೊಬ್ಬ ಹುಚ್ಚನು! ಲೋಕದಲ್ಲಿರುವ ಎಲ್ಲಾ ಸಿದ್ಧಾಂತಗಳಲ್ಲಿಯೂ ಸತ್ಯವಿದೆಯೆಂಬುದನ್ನು ಭಾರತೀಯ ಯೋಗಿವರ್ಯರಲ್ಲಿ ಅಗ್ರ ಗಣ್ಯರಾದ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಆಧ್ಯಾತ್ಮಿಕ ಸಾಧನೆಗಳಿಂದ ಪ್ರತ್ಯಕ್ಷಗೊಳಿಸಿರುತ್ತಾರೆ. ಎಲ್ಲಾ ಪಂಥಗಳಲ್ಲಿಯೂ ಆ ಅಖಂಡಜ್ಯೋತಿಯು ಬೆಳ ಗುತ್ತಿದೆಯೆಂಬುದನ್ನು ತಮ್ಮ ಜ್ಞಾನದ ಬೆಳಕನ್ನು ಹರಡಿ ಆ ಮಹಾತ್ಮರು ಲೋಕಕ್ಕೆ ತೋರಿಸಿರುತ್ತಾರೆ. ಆ ತತ್ವವನ್ನೇ ಶ್ರೀರಾಮಕೃಷ್ಣರ "ಸಕಲ ಮತಗಳಲ್ಲಿಯೂ ಸತ್ಯ ವಿದೆ," ಎಂಬ ಸತ್ಯವನ್ನೇ ಸ್ವಾಮಿ ವಿವೇಕಾನಂದರು ದೇಶ-ವಿದೇಶಗಳಲ್ಲಿ ಹರಡಿದರು. ಆದುದರಿಂದ ನಾವು ಎಂದಿಗೂ, ಅನ್ಯರ ಮತಗಳನ್ನಾಗಲೀ, ಅವರ ಮತವಿಶ್ವಾಸವನ್ನಾ ಗಲೀ ಹಳಿಯಕೂಡದು. ಅನ್ಯರ ಮತಗಳನ್ನೂ, ಅವರ ಸಿದ್ಧಾಂತಗಳನ್ನೂ ಅತ್ಯಂತ ಗೌರವದಿಂದಲೂ, ಸಹನಾತ್ಮಕ ಮತಿಯಿಂದಲೂ ವೀಕ್ಷಿಸತಕ್ಕದ್ದು. ಈ ತತ್ವವು ಹೊಸವಲ್ಲ; ಪುರಾತನ ಭಾರತವರ್ಷದ ತತ್ವಶಾಸ್ತ್ರಜ್ಞರು ಈ ತತ್ವವನ್ನು ತಿಳಿದಿದ್ದರು ಎಂದು ಮಾತ್ರವಲ್ಲ, ಅದನ್ನು ಅವರು ಆಚರಣೆಯಲ್ಲಿ ತಂದರು. ಆದುದರಿಂದಲೇ ಯಾರಿಗೂ ಅಂಜದೆ ತಮ್ಮಾ ಭಾವನೆಯು ಎಷ್ಟು ವಿಶಾಲವಾದುದೆಂಬದನ್ನು ಈ ಪ್ರಕಾರ ಆ ಮಹರ್ಷಿಗಳು ಸ್ಪಷ್ಟಗೊಳಿಸಿರುತ್ತಾರೆ:

ಆಕಾಶಾತ್ ಪತಿತಂತೋಯಂ ಯಥಾಗಚ್ಛತಿ ಸಾಗರಂ
ಸರ್ವದೇವ ನಮಸ್ಕಾರಃ ಶ್ರೀಕೇಶವಃ ಪ್ರತಿಗಚ್ಛತಿ!

ಯಾವ ದಾರಿಯನ್ನು ಅವಲಂಬಿಸಿದರೂ ಚಿಂತೆಯಿಲ್ಲ, ಯಾವ ಮೂರ್ತಿಯನ್ನು ಆರಾಧಿಸಿದರೂ ಚಿಂತೆಯಿಲ್ಲ, ಅವನು ಅರ್ಚಿಸುವುದು ವಿನಾಶಶೂನ್ಯನಾದ ಪರಂಜ್ಯೋತಿ ಯನ್ನಾಗಿದೆ. ಪ್ರತಿಯೊಂದು ದಾರಿಯೂ ಆ ಸತ್ಯಸ್ವರೂಪನಲ್ಲಿ ಅಂತ್ಯವನ್ನು ಹೊಂದು ತ್ತಿರುವುವು. ಮನುಷ್ಯನು ವಿಷ್ಣುವನ್ನೋ, ಪಶುಪತಿಯನ್ನೋ ಯಾರನ್ನೋ ಆಗಲಿ ಅರ್ಚಿಸಿದರೂ ಚಿಂತೆಯುಲ್ಲ, ಯಾರನ್ನು ಧ್ಯಾನಿಸಿದರೂ ಚಿಂತೆಯಿಲ್ಲ, ಅವನ ಅರ್ಚನೆ ಮತ್ತು ಧ್ಯಾನ ಆ ನಿತ್ಯ ಪರಂಜ್ಯೋತಿಯನ್ನು ಕುರಿತಾಗಿದೆ! ಆದುದರಿಂದ ಸುಧಾಂಶು, ನೀನು ಸಂದೇಹವನ್ನು ಪರಿತ್ಯಜಿಸು ಎಲ್ಲರ ಮತ-ವಿಶ್ವಾಸಗಳನ್ನೂ ಸಮದೃಷ್ಟಿ ಯಿಂದ ನೋಡು. ಎಲ್ಲಾ ಮತಸ್ಥರೊಡನೆಯೂ ಸೆಮಭಾವದಿಂದ ವರ್ತಿಸು."

ಶಿಷ್ಯನು ಪ್ರಶ್ನಿಸಿದನು: "ಎಲ್ಲರ ಮತ-ವಿಶ್ವಾಸಗಳೂ ಸತ್ಯವಾದರೆ ಈ ಮತಾವ ಲಂಬಿಗಳು ಏಕೆ ಪರಸ್ಪರ ಕಲಹಿಸುತ್ತಿರುವರು?"

"ನಾನು ಈ ಮೊದಲೆ ನುಡಿದಂತೆ ಅದಕ್ಕೆ ಕಾರಣವು ಅಜ್ಞಾತೆಯಾಗಿದೆ. ಅಜ್ಞಾತೆ ಯೆಂಬ ಬಣ್ಣದ ಕನ್ನಡಕವನ್ನು ಧರಿಸಿ ಮನುಷ್ಯನು ಇತರ ಮತಗಳನ್ನು ವೀಕ್ಷಿಸು ವುದರಿಂದ ಆ ಮತಗಳ ನೈಜಸ್ವರೂಪವು ಅವನಿಗೆ ವ್ಯಕ್ತವಾಗುವದಿಲ್ಲ. ಈ ಮತಕಲಹ ಗಳನ್ನು ಕುರಿತು ಚಿಂತಿಸುವಾಗ, ಮಹರ್ಷಿ ಟಾಲಿಸ್ಟಾಯಿಯವರ ಒಂದು ಕತೆಯು

ನೆನಪಿಗೆ ಬರುತ್ತದೆ. ಒಂದು ದಾರಿಯ ಅಂಚಿನಲ್ಲಿ ಒಂದು ಮಾರ್ಗದರ್ಶಿನಿಯಿದ್ದಿತು. ಆ ಮಾರ್ಗದರ್ಶಿನಿಯ ಎರಡು ಪಾರ್ಶ್ವಗಳ ಬಣ್ಣಗಳು ಬೇರೆ ಬೇರೆಯಾಗಿದ್ದುವು. ಒಂದು ಭಾಗವು ಹಸುರು ಬಣ್ಣವಾದರೆ, ಇನ್ನೊಂದು ಕೆಂಪು. ಮಾರ್ಗವು ಮೂಡಣ ದಿಂದ ಪಡುವಲಿಗೆ ತೆರಳುತ್ತಿತ್ತು. ಆ ದಾರಿಯಲ್ಲಿ ಒಬ್ಬ ಸೈನಿಕನು ಪೂರ್ವದಿಂದಲೂ ಇನ್ನೊಬ್ಬನು ಪಶ್ಚಿಮದಿಂದಲೂ ಬರುತ್ತಿದ್ದರು. ಪೂರ್ವದಿಕ್ಕಿನಿಂದ ಬಂದವನು ಆ ಮಾರ್ಗದರ್ಶಿಯನ್ನು ನೋಡಿ "ಇದರ ಬಣ್ಣವು ಕೆಂಪು." ಎಂದನು.

"ಅಲ್ಲ! ಅದರ ಬಣ್ಣ ಹಸುರು!" ನುಡಿದನು ಪಡುವಣದಿಂದ ಬಂದ ಭಟನು.

"ಅಲ್ಲ, ಕೆಂಪು!"

"ಅಲ್ಲ ಹಸುರು!"

"ತಾನು ನುಡಿದುದೇ ಸರಿಯೆಂದು ಪೂರ್ವ ದಿಕ್ಕಿನಿಂದ ಬಂದ ಸೈನಿಕನೂ, ತಾನು ಹೇಳಿದುದೇ ಸತ್ಯವೆಂದು ಪಶ್ಚಿಮದಿಂದ ಬಂದವನೂ ವಾದಿಸಲಾರಂಭಿಸಿದರು. ಈ ವಿವಾದವು ಜಗಳದ ಮುನ್ನುಡಿಯಾಯಿತು. ತಮ್ಮ ಒರೆಗಳಲ್ಲಿದ್ದ ಕತ್ತಿಗಳನ್ನು ಹಿರಿದು ಇಬ್ಬರೂ ಕಾದಲಾರಂಭಿಸಿದರು. ಅವರಿಬ್ಬರ ದೇಹಗಳಿಂದ ನೆತ್ತರು ಹರಿದಿತು. ಈ ರೀತಿ ಅವರಿಬ್ಬರೂ ಕಾದಾಡುತ್ತಿರುವಾಗ ಆ ದಾರಿಯಲ್ಲಿ ಒಬ್ಬ ಸಂನ್ಯಾಸಿಯು ಬಂದನು. ಈ ಭಟರ ಕದನವನ್ನು ವೀಕ್ಷಿಸಿ ಅದರ ಕಾರಣವೇನೆಂದು ಯತಿಯು ಪ್ರಶ್ನಿಸಿದನು. ಆಗ ಸೈನಿಕರಲ್ಲಿ ಒಬ್ಬನು ಮಾರ್ಗದ ಬದಿಯಲ್ಲಿ ನಿಂತಿರುವ ಕೈಮರದ ಬಣ್ಣವು ಕೆಂಪೆಂದೂ ಇನ್ನೊಬ್ಬನು ಹಸುರೆಂದೂ ನುಡಿದರು. ಸನ್ಯಾಸಿಯು ಆ ಮಾರ್ಗ ದರ್ಶಿನಿಯ ಎರಡು ಪಾರ್ಶ್ವಗಳಿಗೂ ಬಳಿದಿರುವ ಬಣ್ಣಗಳು ಯಾವುವೆಂಬುದನ್ನು ನೋಡಿ ತಿಳಿದುಕೊಂಡನು. ಅದರ ಒಂದು ಪಾರ್ಶ್ವವು ಕೆಂಪಾಗಿಯೂ ಇನ್ನೊಂದು ಪಾರ್ಶ್ವವು ಹಸುರಾಗಿಯೂ ಇರುವದು ಯತಿಗೆ ಗೋಚರವಾಯಿತು. ಆಗ ಆ ಸನ್ಯಾ ಸಿಯು ಸೈನಿಕರೊಡನೆ ಹೀಗೆ ಹೇಳಿದನು: "ತಮ್ಮಂದಿರಾ! ಈ ಕೈಮರದ ಎರಡು ಪಾರ್ಶ್ವ ಗಳಿಗೆ ಬಳಿದ ಬಣ್ಣಗಳು ಬೇರೆ ಬೇರೆ ಎಂಬುದನ್ನು ತಿಳಿಯದೆ ನೀವು ಪರಸ್ಪರ ಕಾದಾ ಡುತ್ತಿರುವಿರಿ. ಇಗೋ, ನೋಡಿರಿ. ಇದರ ಒಂದು ಪಾರ್ಶ್ವಕ್ಕೆ ಹಸುರು ಬಣ್ಣವೂ, ಇನ್ನೊಂದು ಪಾರ್ಶ್ವಕ್ಕೆ ಕೆಂಪು ಬಣ್ಣವೂ ಇವೆ." ಎಂದು ಸನ್ಯಾಸಿಯು ಅವರಿಗೆ ಆ ಎರಡು ಬಣ್ಣಗಳನ್ನೂ ತೋರಿಸಿದನು. ಸೈನಿಕರಿಗೆ ತಮ್ಮ ತಪ್ಪು ತಿಳಿಯಿತು, ಅವರು ತಮ್ಮ ಹೋರಾಟವನ್ನು ನಿಲ್ಲಿಸಿ ಗೆಳೆಯರಾದರು."

"ಇದರಂತೆಯೇ ಜನರು ವಾಸ್ತವಾಂಶವನ್ನು ತಿಳಿಯದೆ ಪರಸ್ಪರ ಹೋರಾಡು ವುದರಲ್ಲಿ ನಿರತರಾಗಿರುತ್ತಾರೆ. ತಾನು ಹಿಡಿದ ದಾರಿಯೇ ಸರಿಯೆಂದು ಮನುಷ್ಯನು ಶಠಿಸುತ್ತಲಿದ್ದಾನೆ. ಇದಕ್ಕೆ ಕಾರಣವು ಹಿಂದೆ ಹೇಳಿದಂತೆ ಮನುಷ್ಯನ ಅವಿವೇಕ ವಾಗಿದೆ. ಎಂದಿಗೆ ಅವನು ಸಕಲ ಮತಗಳಲ್ಲಿಯೂ ಸತ್ಯವಿದೆಯೆಂಬುದನ್ನು ತಿಳಿಯು ತ್ತಾನೆಯೋ, ಆಗ ಅನ್ಯಮತಗಳೊಡನೆ ತಾನು ನಡೆಯಿಸುತ್ತಿರುವ ಕಲಹವನ್ನು ನಿಲ್ಲಿ ಸುತ್ತಾನೆ; ಏಕೆಂದರೆ ಅವನು ತನ್ನ ದಾರಿಯಂತೆಯೇ ಇತರ ಎಲ್ಲಾ ದಾರಿಗಳೂ ಆ

ಪರಂಜ್ಯೋತಿಯ ಬಳಿಗೆ ತೆರಳುತ್ತಿರುವವು, ಎಂಬುದನ್ನು ಅವನು ಆಗ ತಿಳಿಯುತ್ತಾನೆ. ಅನ್ಯಮತ ವಿದ್ವೇಷವು ಆಗ ಅವನಿಗೆ ಸ್ವಧರ್ಮ ವಿದ್ವೇಷವಾಗಿಯೇ ಕಾಣುತ್ತದೆ; ಏಕೆಂದರೆ, ಎಲ್ಲ ಮತಗಳಲ್ಲಿಯೂ ಅವನು ತನ್ನ ಸ್ವಂತಮತದ ಸತ್ಯವನ್ನೇ ಅವಲೋಕಿಸುತ್ತಾನೆ. ನಾವು ಈ ಮತಕಲಹಗಳಿಂದ ವಿಮುಕ್ತವಾಗಬೇಕಾದರೆ, ಎಲ್ಲ ಮತಗಳಲ್ಲಿಯೂ ಸತ್ಯವಿದೆ, ಎಂಬ ತತ್ವವನ್ನು ತಿಳಿದುಕೊಂಡು, ವಿಶಾಲದೃಷ್ಟಿಯಲ್ಲಿ ನಾವು ಜಗತ್ತನ್ನು ವಿಕ್ಷಿಸಲು ಕಲಿಯಬೇಕು. ಸಂಕುಚಿತ ದೃಷ್ಟಿಕೋನವನ್ನು ಪರಿತ್ಯಜಿಸಿ, ಜ್ಞಾನದೀಪದ ಬೆಳಕಿನಲ್ಲಿ ನಾವು ವಿಶ್ವವನ್ನು ದರ್ಶಿಸಬೇಕಾಗಿದೆ!''

''ಜನತೆಯ ಮಧ್ಯದಲ್ಲಿ ಬೇರೂರಿರುವ ಈ ಮತವಿದ್ವೇಷವನ್ನು ಪರಿಹರಿಸುವ ಬಗೆಯು ಯಾವುದು? ಅಥವಾ ಈ ಬೇನೆಯು ನಿವಾರಣಾತೀತವೇ?'' ಸುಧಾಂಶುವು ಉತ್ಸುಕತೆಯಿಂದ ಆಚಾರ್ಯನನ್ನು ಪ್ರಶ್ನಿಸಿದನು.

''ಅಸಾಧ್ಯವೆಂಬ ಪದವು ಉದ್ಯಮಶಾಲಿಗಳ ಶಬ್ದಕೋಶದಲ್ಲಿ ಇರುವುದಿಲ್ಲ. ಇಂದು ಭಾರತಭೂಮಿಯ ಜನತೆಯ ಮಧ್ಯದಲ್ಲಿ ಕರಾಳಸ್ವರೂಪದ ಮತವಿದ್ವೇಷವು ತನ್ನ ನಗ್ನರೂಪದಲ್ಲಿ ನರ್ತಿಸುತ್ತಿದೆ ಎಂಬುದು ನಿಜ! ತಮ್ಮ ಅಜ್ಞಾತೆಯ ಪರಿಣಾಮವಾಗಿ ದೇಶಬಂಧುವೆಂದು ಪರಸ್ಪರ ನೆತ್ತರಿನ ನದಿಯನ್ನು ಹರಿಸಲು ಉದ್ಯುಕ್ತರಾಗಿರುತ್ತಾರೆ! ಈ ವರ್ಗ ವಿದ್ವೇಷದಿಂದ ಭಾರತಾಂಬೆಯ ಕೀರ್ತಿಲತೆಯು ಬಾಡುತ್ತಿರುವದು. ಈ ಭೂತವನ್ನು ನಿವಾರಿಸಲು ಯತ್ನಿಸಬೇಕು. ಮತದ ಹೆಸರಿನಲ್ಲಿ ಜನತೆಯ ಮಧ್ಯದಲ್ಲಿ ಹರಡಿರುವ ಅಂಧಕಾರವನ್ನು ಹೊಡೆದೋಡಿಸಿ ಜ್ಞಾನದ ಬೆಳಕನ್ನು ನೀಡಬೇಕು.''

''ಈ ವರ್ಗವಿದ್ವೇಷದ ನಿವಾರಣೆಗೆ ಸಹನೆಯು ಅತ್ಯುತ್ತಮ ದಾರಿಯಾಗಿದೆ. ಸಹನಾತ್ಮಕ ಬುದ್ಧಿಯು ಜನತೆಯ ಮಧ್ಯದಲ್ಲಿ ಬೇರೂರುವಂತೆ ಮಾಡತಕ್ಕದ್ದು. ನಾವು ಮೊದಲು ನಮ್ಮ ಭಾವನೆಗಳೂ ವಿಚಾರಗಳೂ ನಮಗೆ ಹೇಗೆ ಪವಿತ್ರವೋ ಅದರಂತೆಯೇ ಅನ್ಯಮತಸ್ಥರ ಸಿದ್ಧಾಂತಗಳನ್ನೂ ಆಚಾರ-ವಿಚಾರಗಳನ್ನೂ ಮನ್ನಿಸಲು ಕಲಿಯತಕ್ಕುದು ಎಂದು ಮಾತ್ರವಲ್ಲ. ಇದನ್ನು ನಮ್ಮ ದೈನಂದಿನ ವೃತ್ತಿಯಲ್ಲಿ ಆಚರಣೆಗೆ ತಂದರೆ, ನಿಶ್ಚಯವಾಗಿಯೂ ಮತವಿದ್ವೇಷವು ನಾಶವಾಗುವುದರಲ್ಲಿ ಸಂದೇಹವಿಲ್ಲ. ನಾವು ನಮ್ಮ ಈ ಕೃತಕ ಮೇರೆಗಳನ್ನು ಮರೆತು, ಅನ್ಯವರ್ಗದವರ ಸ್ನೇಹಾದರಗಳನ್ನು ಸಂಪಾದಿಸಲು ಪ್ರಯತ್ನಿಸಿದರೆ, ಆ ಸ್ನೇಹದ ಫಲವಾಗಿ ಮೈತ್ರಿಯು ಉದಯಿಸುವುದು. ಬರಿಯ ಮಾತು-ಕತೆಗಳಿಂದಾಗಲೀ ಕೆಲವು ಮಂದಿ ವರ್ಗ ಮುಂದಾಳುಗಳು ಒಪ್ಪಂದಗಳನ್ನು ಮಾಡಿಕೊಳ್ಳುವುದರಿಂದಾಗಲೀ ವರ್ಗ ವಿದ್ವೇಷವು ನಾಶವಾಗಲಾರದು. ಪ್ರೇಮಭರಿತರಾಗಿ ನಾವು ಅನ್ಯವರ್ಗದವರನ್ನು ವೀಕ್ಷಿಸಿ ಅವರ ಸುಖ-ದುಃಖಗಳಲ್ಲಿ ಭಾಗವನ್ನು ವಹಿಸಿದರೆ ಮಾತ್ರ ಆ ಪ್ರೇಮವರ್ತನೆಯು ಅನ್ಯಮತದವರ ಹೃದಯಗಳಲ್ಲಿ ಸ್ನೇಹವು ಸಂಜಾತವಾಗುವಂತೆ ಮಾಡುತ್ತದೆ. ಈ ಎಲ್ಲ ಬೇನೆಗಳಿಗೆ ಇರುವ ದಿವ್ಯೌಷಧವು ಪ್ರೇಮ ಮಂತ್ರವಾಗಿದೆ. ಆದುದರಿಂದ ನಾವು ಜನತೆಯ ಮಧ್ಯದಲ್ಲಿ ನಾವೆಲ್ಲರೂ ಭಾರತೀಯರು, ನಾವೆಲ್ಲರೂ ಸಹೋದರರು, ನಾವು ಪರಸ್ಪರ ಸ್ನೇಹ

ದಲ್ಲಿ ಜೀವಿಸಬೇಕು!'' ಎಂಬ ವಿಚಾರಗಳನ್ನು ಹರಡಿದರೆ ಈ ಕಲಹಗಳೆಲ್ಲವೂ ಪರಿಸಮಾಪ್ತಿಯನ್ನು ಹೊಂದುವುವು. ಆದುದರಿಂದ ನಾವು ನಿರಾಶರಾಗಬೇಕಾದುದಿಲ್ಲ. ಭಿನ್ನಭಿನ್ನವಾಗಿ ಬಿದ್ದಿರುವ ಭಾರತವು ಪುನಃ ಅಖಂಡರೂಪವನ್ನು ಹೊಂದುವುದು! ಭಾರತದ ಭಾಗ್ಯಾಕಾಶದಲ್ಲಿ ನಿಶ್ಚಯವಾಗಿಯೂ ಸ್ವಾತಂತ್ರ್ಯಭಾನು ಉದಯಿಸುವನು! ಭವಿಷ್ಯತ್ಕಾಲದಲ್ಲಿ ವಿಶ್ವಕ್ಕೆ ಭಾರತವರ್ಷವು ಒಂದು ದಿವ್ಯ ಸಂದೇಶವನ್ನು ನೀಡಬೇಕಾಗಿರುವದರಿಂದ, ಅವನತಿಯನ್ನು ಹೊಂದಿದ ನಮ್ಮ ತಾಯ್ನಾಡು ತನ್ನ ದಾಸ್ಯನಿದ್ರೆಯಿಂದ ಎದ್ದೇಳುವುದು!''

ರಾತ್ರಿಯಾದುದರಿಂದ ನಳಿನೀರಂಜನನು ತನ್ನ ಆ ದಿನದ ಸಂಭಾಷಣೆಯನ್ನು ಸಮಾಪ್ತಿಗೊಳಿಸಿದನು. ಈ ಉಜ್ವಲವಾದ ಉಪದೇಶಸರಣಿಯು ಸುಧಾಂಶುವಿನ ಮನಸ್ಸನ್ನು ಆವರಿಸಿದ್ದ ಸಂದೇಹಗಳನ್ನು ನಿವಾರಿಸಿತು. ಪ್ರಾರ್ಥನೆಯ ಸಮಯವಾಯಿತು. ಎಲ್ಲರೂ ಆ ಕೃತ್ಯವನ್ನು ನೆರವೇರಿಸುವದಕ್ಕಾಗಿ ಆಶ್ರಮದೊಳಗೆ ತೆರಳಿದರು. ಹತ್ತುನಿಮಿಷಗಳ ಅನಂತರ ಸಾಧನಕುಟೀರದೊಳಗಿಂದ ಈ ಗಾನವು ಕೇಳಬಂದಿತು:

ಈ ಜೀವನವ ನಿವೇದಿಸುವೆವು ವಿಶ್ವಗಳಿಗೆ
ಅರಸಾದ ದೊರೆಯೇ, ನಿನಗೆ!
ನೀನೊಲಿದು ನೀಡಿರುವ ಈ ಬಾಳಿನ ಕುಸುಮವನೆ
ಅರ್ಪಿಸುವೆವು ನಾವಿಂದು ನಿನಗೆ!
ನಾನಾ ರೂಪದ ಜೀವಜಾಲಗಳ ನಡುವೆ
ಬೆಳಗುತಿದೆ ನಿನ್ನಯ ಕಿಡಿಯು!
ನಾನಾಕಾರದ ಕುಂಭಗಳಲಿ ತುಂಬಿರುವೆ
ನೀನು ಬಾಳಿದಾ ಸಲಿಲವನು!
ನಾವಿಂದು ಬೇಡುವೆವು ವಿಶ್ವಗಳ ಅರಸಾದ
ದೊರೆಯೆ! ಬಾಳಿನಲಿ ಬೆಳಕ
ನೀಡೆಂದು ಎಮ್ಮ ಬಂಧಿಸಿರುವ ಅಜ್ಞತೆಯ
ಪಾಶವನು ಹರಿಯಲ್ಕೆ ದೊರೆಯೇ!
ನಾನಾರೂಪದಿ ಬೆಳಗುತಲಿರುವಾ ನಿನ್ನ-
ಯ ಬೆಳಕನು ನೋಡುವ ಶಕ್ತಿಯ;
ಎಮ್ಮನು ನಾವು ತಿಳಿಯಲಿರುವ ಬಲವ
ನೀಡೆಲ್ಕೆ ಕಾರುಣ್ಯನಿಧಿಯೇ!

———

# ೧೩ ಗ್ರಾಮಾಂತರದಲ್ಲಿ.

ಪತಿವಿಯೋಗದುಃಖದಿಂದ ಪರವಶೆಯಾದ ಪದ್ಮಳು ತನ್ನ ಹೃದಯಕ್ಕೆ ಶಾಂತಿಯನ್ನು ಪಡುಕುವದಕ್ಕಾಗಿ ಗ್ರಾಮಜೀವನವನ್ನು ಕೈಕೊಳ್ಳಲು ಆಗ್ರಹಿಸಿದ ಸಂಗತಿಯನ್ನು ವಾಚಕರು ಈ ಮೊದಲೆ ತಿಳಿದಿರಬಹುದು. ಅವಳು ರಾಮನಗರವನ್ನು ತ್ಯಜಿಸಿ ಹೊಸೂರ ಗ್ರಾಮಕ್ಕೆ ಬಂದಳು. ಚಿಕ್ಕದಾದ ಒಂದು ಮನೆಯಲ್ಲಿ ತನ್ನ ಕಂದ ರಾಮಚಂದ್ರನೊಡನೆ ಅವಳು ವಾಸಿಸತೊಡಗಿದಳು.

ನಗರ ಜೀವನವು ಕೃತ್ರಿಮವಾಗಿರುವದರಿಂದ ಸೃಷ್ಟಿಸೌಂದರ್ಯದ ಸೊಬಗನ್ನು ಅವಲೋಕಿಸಿ ಆಸ್ವಾದಿಸಲು ಅಲ್ಲಿ ಸಾಧ್ಯವಿಲ್ಲ. ಸೃಷ್ಟಿದೇವತೆಯ ನೈಜ ಸೌಂದರ್ಯವನ್ನು ನಗರದಲ್ಲಿ ಮನುಷ್ಯನು ಕೆಡಿಸಲು ಸದಾ ಪ್ರಯತ್ನಿಸುತ್ತಿರುವನು. ನಾವು ನಗರದಲ್ಲಿ ಮನುಷ್ಯನಿಗೂ, ಸೃಷ್ಟಿಗೂ ಇರುವ ಬಂಧವು ನಶಿಸುತ್ತಿರುವ ಚಿತ್ರವನ್ನು ದರ್ಶಿಸಬಹುದು, ಆದರೆ ಗ್ರಾಮಜೀವನದಲ್ಲಿ ಹಾಗಲ್ಲ, ಸೃಷ್ಟಿಮಾತೆಯ ನೈಸರ್ಗಿಕ ಸೊಬಗಿನ ಹೊಳೆಯು ಅಲ್ಲಿ ಹರಿಯುತ್ತಿರುವುದು. ಜೀವನವು ಗ್ರಾಮಾಂತರಗಳಲ್ಲಿ ನಿಸರ್ಗದೊಡನೆ ಬೆರೆತುಹೋಗಿದೆ! ಆದುದರಿಂದ ಹಳ್ಳಿಗಾಡುಗಳಲ್ಲಿ ವಾಸಿಸುವ ವ್ಯಕ್ತಿಯು ಪ್ರಕೃತಿಯೊಡನೆ ಮಿಲನವನ್ನು ಹೊಂದಿ, ಅದರಿಂದ ಉಪಲಬ್ಧವಾಗಬಹುದಾದ ಆಹ್ಲಾದವನ್ನು ಸವಿಯುತ್ತಾನೆ.

ಚಿಕ್ಕದಾದ ಒಂದು ಗುಡಿಸಿಲಿನಲ್ಲಿ ಪದ್ಮಳು ವಾಸಿಸತೊಡಗಿದಳು. ಹಳ್ಳಿ ಜನರ ಸ್ನೇಹಪುರಸ್ಸರವಾದ ವರ್ತನೆಗಳಿಂದ ಅವಳ ಹೃದಯದಲ್ಲಿ ಉರಿಯುತ್ತಿರುವ ಬೆಂಕಿಯು ಶಾಂತವಾಗಲಾರಂಭಿಸಿತು. ಬೇಸಾಯದಿಂದ ತಮ್ಮ ಉಪಜೀವನವನ್ನು ನಡೆಯಿಸುತ್ತಿರುವ ಕೃಷಿಗಾರರ ಮುಖಗಳಲ್ಲಿ ಹೊಳೆಯುತ್ತಿರುವ ನಿಸ್ಪೃಹತೆಯ ಚಿತ್ರ, ಶ್ರಮಃವಹ ಜೀವಿಗಳಾದ ಆ ಜನರ ಬಾಳು ಅವಳ ಹೃದಯವನ್ನು ಸ್ಪರ್ಶಿಸಿದುವು. ಹಳ್ಳಿಜನರಲ್ಲಿ ತೋರುತ್ತಿರುವ ಔದಾರ್ಯವು ಗ್ರಾಮಜೀವನವು ಎಷ್ಟು ನಿರ್ಮಲವಾಗಿದೆ ಎಂಬುದನ್ನು ಅವಳಿಗೆ ಪ್ರತ್ಯಕ್ಷಗೊಳಿಸಿತು.

ಕಲಕಲವೆಂಬುದಾಗಿ ಗಾನತಲ್ಲೀನಳಾದ ನದಿವನಿತೆಯೋರ್ವಳು ಗ್ರಾಮದ ಮಧ್ಯದಲ್ಲಿ ಪ್ರವಹಿಸುತ್ತಲಿದ್ದಾಳೆ! ಪದ್ಮಳು ಆ ನದಿಯ ತೀರದಲ್ಲಿರುವ ಒಂದು ಬಂಡೆಯ ಮೇಲೆ ಕುಳಿತು ಹೊಳೆಯು ಹರಿಯುತ್ತಿರುವುದನ್ನು ನೋಡಿದಳು. ಅವಳ ಮನಸ್ಸಿನಲ್ಲಿ ಹಲವು ವಿಚಾರಗಳು ಮೂಡಿದುವು. ಪಶ್ಚಿಮದಿಕ್ಕಿನಲ್ಲಿ ಭಾಸ್ಕರನು ಪ್ರಕಾಶಿಸುತ್ತಾ ತನ್ನ ಕಿರಣಗಳನ್ನು ಹೊರಚೆಲ್ಲುತ್ತಲಿದ್ದನು. ಮಾರುತನು ಮಂದವಾಗಿ ತನ್ನ ಹೆಜ್ಜೆಗಳನ್ನು ಇಡುತ್ತಿದ್ದನು. ನದೀತೀರದಲ್ಲಿ ಬೆಳೆದ ಮರಗಳ ಮೇಲಿರುವ ಪಕ್ಷಿಗಳ ಇಂಚರಗಳಲ್ಲದೆ, ಇನ್ನಾವುದೂ ಅಲ್ಲಿಯ ಶಾಂತತೆಯ ವಾತಾವರಣವನ್ನು ಭಂಗ ಪಡಿಸುತ್ತಿರಲಿಲ್ಲ. ಹತ್ತಿರದ ಮರಳ ದಿನ್ನೆಯಲ್ಲಿ ರಾಮಚಂದ್ರನು ಕುಳಿತಿದ್ದನು. ಪದ್ಮಳು ಒಮ್ಮೆ ತನ್ನ ಕಂದನ ಮೋರೆಯನ್ನು ನೋಡಿದಳು. ಯಾವ ಚಿಂತೆಯೂ

ಅವನ ಹೃದಯವನ್ನು ಸ್ಪರ್ಶಿಸಿರಲಿಲ್ಲ. ನಿಷ್ಕಲಂಕವಾದ ಆ ಎಳೆಯ ಹೃದಯದಲ್ಲಿ ಆನಂದದ ಬುಗ್ಗೆಯು ಹರಿಯುತ್ತಿತ್ತು. ತನ್ನ ಕೂಸನ್ನು ನೋಡಿದ ಮೇಲೆ ಪದ್ಮಳು ಒಂದು ನಿಟ್ಟುಸಿರನ್ನು ಹೊರಸೂಸಿದಳು. ಶೋಕದಿಂದ ಆ ಉಸಿರು ಬಿಸಿಯಾಗಿದ್ದಿತು. ಅವಳು ಆಧ್ಯಾತ್ಮಿಕ ಚಿಂತನೆಗಳಿಂದ ತನ್ನ ಮನಸ್ಸನ್ನು ದೃಢಪಡಿಸಲು ಪ್ರಯತ್ನಿಸಿದಳು; ಆದರೆ ತತ್ವಗಳನ್ನು ಕುರಿತು ಮಾತನಾಡುವುದು ಸುಲಭ, ಆ ತತ್ವಗಳನ್ನು ಆಚರಣೆಯಲ್ಲಿ ತಂದು ಆತ್ಮಶಾಂತಿಯನ್ನು ಹೊಂದುವುದೆಂದರೆ, ಪ್ರಯಾಸಸಾಧ್ಯವಾದ ಕೆಲಸವು! ಇದಕ್ಕೆ ಕಾರಣವು ಮನುಷ್ಯನ ಬಲಹೀನತೆಯಾಗಿದೆ.

ಪವಿತ್ರವಾದ ಜೀವನವನ್ನು ಕೈಕೊಂಡು ಪರಿಶುದ್ಧವಾಗಿ ಜೀವಿಸುತ್ತಿರುವ ಹೆಂಗುಸನ್ನು ಅವಳ ಪತಿಯು ಸಂಶಯವನ್ನು ತಾಳಿ ಪರಿತ್ಯಜಿಸಿದಾಗ, ಆ ಮಹಿಳೆಯ ಶೋಕವು ಇತರ ಎಲ್ಲಾ ದುಃಖಗಳಿಗಿಂತಲೂ ಅಪಾರವಾದುದಾಗಿದೆ. ಅದು ಭಯಾನಕವೂ ಆಗಿರುತ್ತದೆ! ಅವಳ ಸ್ಥಿತಿಯು ಅಂಬಿಗನಿಲ್ಲದ ದೋಣಿಯಂತೆ ನಿರಾಧಾರವಾದುದು. ಯಾರನ್ನು ಅವಳು ಸದಾ ಆರಾಧಿಸುತ್ತಿರುವಳೋ, ಯಾರ ಸುಖವೇ ತನ್ನ ಸುಖವೆಂದು ಭಾವಿಸಿ ಅವನ ಹಿತಸಾಧನೆಗಾಗಿ ಯತ್ನಿಸುತ್ತಿರುವಳೋ, ಆ ಪತಿದೇವನು ಆಕೆಯ ಕರವನ್ನು ತ್ಯಜಿಸಿದರೆ, ಆಗ ಆ ಆರ್ಯಮಹಿಳೆಗೆ ಉಂಟಾಗುವ ವ್ಯಸನವು ಉಪಮಾತೀತವು. ಇಂಥ ದಾರುಣವಾದ ಯಾತನೆಯನ್ನು ಪದ್ಮಳು ಸಹಿಸುತ್ತಲಿದ್ದಳು.

ಹಲವು ವಿಚಾರಗಳಲ್ಲಿ ಮಗ್ನಳಾದ ಅವಳ ಮನಸ್ಸು ರಾಮಚಂದ್ರನ 'ಅಮ್ಮಾ!' ಎಂಬ ಕ್ರಂದನವು ಎಚ್ಚರಿಸಿತು. ಪದ್ಮಳು ಶಿರವನ್ನೆತ್ತಿ ನೋಡಿದಳು. ಒಬ್ಬ ಸನ್ಯಾಸಿಯು ನದಿಯ ದಂಡೆಯಲ್ಲಿ ಬರುತ್ತಿರುವದು ಅವಳ ದೃಷ್ಟಿಗೆ ಪಾತ್ರೀಭವಿಸಿತು. ಅವಳು ಸನ್ಯಾಸಿಯ ವದನಮಂಡಲವನ್ನು ವೀಕ್ಷಿಸಿದಳು. ಅಪೂರ್ವವಾದ ಒಂದು ತೇಜಸ್ಸು ಅವನ ಮುಖದಲ್ಲಿ ಶೋಭಿಸುತ್ತಿರುವುದನ್ನು ಅವಳು ಕಂಡಳು. ಅವನನ್ನು ನೋಡಿದೊಡನೆಯೇ ಒಂದು ವಿಧದ ಪೂಜ್ಯಭಾವನೆಯು ಅವಳ ಹೃದಯದಲ್ಲಿ ಉತ್ಪನ್ನವಾಯಿತು. ಸನ್ಯಾಸಿಯು ಬಂದು ಅವಳ ಮುಂದೆ ನಿಂತನು. ಅವನ ಚರಣತಲಗಳಲ್ಲಿ ಪದ್ಮಳು ತನ್ನ ಪ್ರಣಾಮಗಳನ್ನು ಸಮರ್ಪಿಸಿದಳು.

"ತಂಗೀ, ನೀನು ಶೋಕಪೀಡಿತಳಾಗಿರುವೆ." ಎಂದು ಮಂದಸ್ಮಿತನಾದಾತಪಸ್ವಿಯು ನುಡಿದನು.

"ಮಹಾನುಭಾವರೇ! ತಾವು ನುಡಿದಿರುವುದು ನಿಜವು! ಅಪಾರವಾದ ದುಃಖವು ನನ್ನ ಎದೆಯನ್ನು ಬಿಗಿದಿರುವುದು. ಅದರಿಂದ ಪಾರಾಗಲು ದಾರಿಯನ್ನು ಕಾಣದೆ ನಾನು ಚಿಂತಿಸುತ್ತಿರುವೆನು."

"ತಂಗೀ, ಸಹಿಸು. ಸಹನೆಯೇ ನಮ್ಮ ಧೈರ್ಯದ ಲಾಂಛನವು! ಶೋಕವೆಂಬುದು ಮನುಷ್ಯನಿಗಲ್ಲದೆ ಇತರ ಪ್ರಾಣಿಗಳಿಗೆ ಬರುವಂತಿಲ್ಲ."

"ಆದರೆ ತಪಸ್ವಿಗಳೇ, ಪತಿವಿಯೋಗ ದುಃಖವನ್ನು ನಾನು ಯಾವ ರೀತಿಯಲ್ಲಿ ಸಹಿಸಬೇಕು? ಯಾರನ್ನು ನಾನು ನನ್ನ ಜೀವನದ ಸಾರಥಿಯನ್ನಾಗಿ ಸ್ವೀಕರಿಸಿದ್ದೆನೋ,

ಆ ಸಾರಥಿಯೇ ತೆರಳಿದ ಮೇಲೆ, ನನ್ನ ಬದುಕಿನ ತೇರನ್ನು ಸರಿಯಾದ ದಾರಿಯಲ್ಲಿ ಚಲಿಸುವವರಾರು?''

''ಶೋಕಿಸದಿರು. ನಿನ್ನ ಆತ್ಮವೇ ಜೀವನದ ಸಾರಥಿಯಾಗಿದೆ. ಸರಿಯಾದ ದಾರಿಯಲ್ಲಿ ನಿನ್ನ ಚಿಂತನೆಗಳು ತೆರಳಲಿ! ಕಣ್ಮುಚ್ಚಿಕೊಂಡಿದ್ದವನಿಗೆ ಬೆಳಕು ಕಾಣಲಾರದು. ಆದುದರಿಂದ ಮುಚ್ಚಿರುವ ನಿನ್ನ ನಯನಗಳನ್ನು ಮೊದಲು ಅರಳಿಸು. ವಿಶಾಲವಾದ ಜಗತ್ತೇ ನಿನ್ನ ಮುಂದೆ ನಿಂತಿರುವುದನ್ನು ಅವಲೋಕಿಸು. ಈ ಶೋಕವೆಂಬುದು ಆತ್ಮನನ್ನು ಒರೆಗೆ ಹಚ್ಚಲಿರುವ ಒರೆಗಲ್ಲಾಗಿದೆ. ಶೋಕವೂ, ವಿಪತ್ತೂ ಮನುಷ್ಯನಿಗೆ ಬರದಿದ್ದರೆ, ಅವನ ಆತ್ಮವು ಶಕ್ತಿಯನ್ನು ಹೊಂದಲಾರದು. ಆದುದರಿಂದ ತಂಗೀ, ಈಗ ಸಂಪ್ರಾಪ್ತವಾಗಿರುವ ಶೋಕಕ್ಕೆ ಸುಸ್ವಾಗತವನ್ನು ಬಯಸು! ಏಕೆಂದರೆ, ಕತ್ತಲೆಯ ಅನಂತರ ಸೂರ್ಯೋದಯವಿದೆ! ಅದರಂತೆಯೇ ಈಗ ನೀನು ಅನುಭವಿಸುತ್ತಲಿರುವ ಶೋಕದ ಅನಂತರ ಬೆಳಕು ನಿಶ್ಚಯವಾಗಿಯೂ ಲಭಿಸುವುದು. ಆದುದರಿಂದ ಆಲಸ್ಯತೆಯನ್ನು ತ್ಯಜಿಸಿ ಎದ್ದೇಳು!''

''ಮಹಾರಾಜರೇ! ತಾವು ಯಾರು? ಈ ದಾಸಿಯಲ್ಲಿ ಆ ಕೃಪೆದೋರಿ ಈ ರೀತಿ ಉಪದೇಶಿಸಲು ಕಾರಣವೇನು?'' ಎಂದು ಅವಳು ಆ ಅಪರಿಚಿತ ಸನ್ಯಾಸಿಯನ್ನು ಪ್ರಶ್ನಿಸಿದಳು.

''ತಂಗೀ, ನಾನಾರೆಂಬುದು ನನಗೆ ತಿಳಿಯದು; ಈ ಜಗತ್ತು ಕ್ಷಣಭಂಗುರವಾದುದರಿಂದ ನಿತ್ಯನಾದ ಆ ಪರಂಜ್ಯೋತಿಯ ಸಾಕ್ಷಾತ್ಕಾರವನ್ನು ಹೊಂದುವುದಕ್ಕಾಗಿ ಯತ್ನಿಸತಕ್ಕ ಸಾಧಕನು! ದುಃಖಸಂತಪ್ತರಾದವರಿಗೆ ಶಾಂತಿಸಂದೇಶವನ್ನು ನೀಡುವುದಕ್ಕಾಗಿ ಪ್ರಯತ್ನಿಸುತ್ತಿರುವೆನು. ಕಾರಣವೇನಂದರೆ, ಜನತೆಯ ದುಃಖನಿವಾರಣೆಯು ಈಶ್ವರಸಾಕ್ಷಾತ್ಕಾರಕ್ಕಿರುವ ಒಂದು ದಾರಿಯೆಂದು ನಾನು ನಂಬಿರುವುದರಿಂದ, ದುಃಖಸಾಗರದಲ್ಲಿ ಬಿದ್ದಿರುವವರನ್ನು ಎತ್ತುವುದಕ್ಕಾಗಿ ಆಗಾಗ ಪ್ರಯತ್ನಿಸುತ್ತಲಿದ್ದೇನೆ. ಈ ರೀತಿ ನಾವು ಪ್ರಯತ್ನಿಸುವುದು ಫಲಕಾಂಕ್ಷೆಯಿಂದಲ್ಲ; ನನ್ನ ಕರ್ತವ್ಯವನ್ನು ನಾನು ಮಾಡುತ್ತಿರುವೆನು. ನಿನ್ನ ದುಃಖವಾರ್ತೆಯನ್ನು ತಿಳಿದು, ಅದರ ಶಮನಕ್ಕಾಗಿ ನಾನು ಇಲ್ಲಿಗೆ ಬಂದೆನು.''

''ಮಹಾಸ್ವಾಮಿ, ತಾವು ನನ್ನ ಸಂಕಟವನ್ನು ತಿಳಿದಿರಾ?''

''ಮಗಳೇ! ನೀನು ನಂಬದಿರಬಹುದು; ನನ್ನಲ್ಲಿರುವ ಆತ್ಮಚೈತನ್ಯದ ಬಲದಿಂದ ನಾನಿರುವಲ್ಲಿಂದ ಎಷ್ಟೋ ದೂರದಲ್ಲಿ ಜರುಗುತ್ತಿರುವ ಸಂಭವಗಳನ್ನು ನಾನು ತಿಳಿಯಬಲ್ಲೆನು. ಇದಕ್ಕೆ ಕಾರಣವೇನಂದರೆ, ಎಷ್ಟೋ ಸಾರೆ ನನ್ನ ಆತ್ಮವು ತನ್ನ ವ್ಯಕ್ತಿತ್ವವನ್ನೇ ಮರೆತುಬಿಡುತ್ತದೆ. ಆ ಪರಾಶಕ್ತಿಯ ಪ್ರಕಾಶವು ಲೋಕದ ಸಕಲ ಜೀವರಾಶಿಗಳಲ್ಲಿ ಸ್ಫುರಿಸುತ್ತಿರುವುದರಿಂದ, ಆ ನಾಡೀಸ್ಪಂದನದ ಮೂಲಕ ವಿಶ್ವದಲ್ಲಿರುವ ಸಕಲ ಮಾನವರ ಸುಖ-ದುಃಖಗಳನ್ನು ನಾನು ತಿಳಿಯಬಲ್ಲೆನು. ತಂಗೀ, ನೀನು ಶೋಕಿಸಬೇಡಮ್ಮಾ. ನಿನ್ನ ಪತಿಯು ಕೆಲವು ತಪ್ಪು ತಿಳುವಳಿಕೆಗಳಿಂದ ನಿನ್ನನ್ನು

ಪರಿತ್ಯಜಿಸಿರುತ್ತಾನೆ ಕೆಲವು ಕಾಲ ಗತಿಸುವವರೊಳಗಾಗಿ ಅವನು ತಾನು ಗೈದ ಅಪರಾಧವನ್ನು ತಿಳಿದುಕೊಳ್ಳುವನು. ಜ್ಞಾನವು ಅವನಲ್ಲಿ ಉದಯವಾದೊಡನೆಯೇ ನೀನೆಲ್ಲಿದ್ದರೂ ನಿನ್ನ ದರ್ಶನಕ್ಕಾಗಿ ಬಂದೇ ಬರುವನು. ನಿನ್ನ ಭಾಗದಲ್ಲಿ ಸತ್ಯವಿರುವದರಿಂದ ನೀನು ಜಯಶೀಲಳಾಗುವೆ."

"ನಾನೇನು ಮಾಡಬೇಕೆಂದು ತಾವು ಅಪ್ಪಣೆಕೊಡುತ್ತಿರುವಿರಿ?"

"ತಂಗೀ, ನಿನಗೆ ದಾರಿಯನ್ನು ತೋರಿಸಿಕೊಡುವದಕ್ಕಾಗಿಯೇ ಬಡಗಲ ದಿಕ್ಕಿನಿಂದ ನಾನು ಇಷ್ಟು ದೂರ ಬರಬೇಕಾಗಿ ಬಂದಿತು ನಾವು ಬುದ್ಧಿಶಕ್ತಿಯಿಂದ ಕೂಡಿದವರಾಗಿರುತ್ತೇವೆ, ನಾವು ಮೃಗಗಳಂತೆ ಜೀವಿಸಿದರೆ ನಾಲದು. ನಮ್ಮ ಸ್ವಾರ್ಥಸಾಧನೆಗಾಗಿ ಈ ಅಮೂಲ್ಯವಾದ ಜೀವನವನ್ನು ಉಪಯೋಗಿಸುವದು ಅನುಚಿತವು. ಗಂಡಸಾಗಲಿ ಹೆಂಗಸಾಗಲಿ ಅವರು ತಮ್ಮ ಪ್ರಯತ್ನಗಳಿಂದ ತಮ್ಮ ಆತ್ಮಗಳನ್ನು ಪರಿಶುದ್ಧಗೊಳಿಸಬೇಕಾಗಿದೆ."

"ಯಾವ ಪ್ರಯತ್ನಗಳು ಅವು?"

"ಮಗಳೇ, ಯಾವ ಸಾಧನಗಳಿಂದ ನಿನ್ನ ಹಾಗೂ ನಿನ್ನ ನಾಡಿನ ಜನತೆಗೆ ಅಭ್ಯುದಯವಾಗುವದೋ, ಅವುಗಳನ್ನು ನೀನು ಅವಲಂಬಿಸಬೇಕು. ಇಂದು ನಮ್ಮ ನಾಡಿನ ಜನತೆಯ ಮಧ್ಯದಲ್ಲಿ ಅಜ್ಞಾನತೆಯೂ ಅವಿವೇಕವೂ ವ್ಯಾಪಿಸಿರುತ್ತವೆ! ನಮ್ಮ ಜನಾಂಗವು ಶಕ್ತಿಯನ್ನೂ ಬುದ್ಧಿಯನ್ನೂ ಸಂಪಾದಿಸಬೇಕಾಗಿದೆ! ಭಾವೀ ಜನಾಂಗದ ತಾಯಂದಿರು ಬಲಶಾಲಿಗಳಾಗಬೇಕು, ಹಾಗಾದರೇ ನಮಗೆ ಅಭ್ಯುನ್ನತಿಯಿದೆ. ಆದುದರಿಂದ ನಿನ್ನ ಈ ವಿಯೋಗದುಃಖವನ್ನು 'ಸಾಧನ'ಗಳಿಂದ ಶಮಿಸಲು ಪ್ರಯತ್ನಿಸು. ಉದ್ಯಮವೇ ನಮಗೆ ಬೇಕಾದುದು, ಇಂದಿನ ಮಹಿಳೆಯರು ತಮ್ಮ ಪ್ರಯತ್ನಗಳಿಂದ ಭಾವೀಜನಾಂಗದ ಶೋಭಾಯಮಾನ ಚಿತ್ರವನ್ನು ಬರೆಯಲು ಉದ್ಯುಕ್ತರಾಗಲಿ! ನೀನು ಧನಸಂಪನ್ನವಾದ ಒಂದು ಕುಟುಂಬದಲ್ಲಿ ಜನಿಸಿರುವದರಿಂದ, ಭಾರತವರ್ಷದ ಸದ್ಯದ ದುರವಸ್ಥೆಯನ್ನು-ಶೋಚನೀಯವಾದ ಆ ಶೋಕಪರಿಪೂರ್ಣ ಚಿತ್ರವನ್ನು-ನೀನು ತಿಳಿದಿರಲಿಕ್ಕಿಲ್ಲ. ಭಾರತ ವರ್ಷವು ಅಧಃಪತನದ ದಾರಿಯಲ್ಲಿ ಬಿದ್ದಿದೆ, ಅದರ ಶಕ್ತಿಯು ಕ್ಷಯವಾಗತೊಡಗಿದೆ. ಈ ಸಂದರ್ಭದಲ್ಲಿ ನಮ್ಮ ನಾಡದೇವಿಯ ಹೃದಯದಲ್ಲಿ ನವಜೀವನವು ಸ್ಫುರಿಸಬೇಕಾದರೆ ನಮ್ಮ ನಾಡಿನ ಲಲನೆಯರು ವಿಚಾರಶಾಲಿಗಳಾಗಬೇಕು. ಧೈರ್ಯದಲ್ಲಿ ಮಹಿಳೆಯರು ಸಿಂಹಿಣಿಯರಾಗಬೇಕು, ಶಕ್ತಿಸಂಪನ್ನೆಯರಾಗಬೇಕು! ತನ್ನ ಉದರದಲ್ಲಿ ಅಭಿಮನ್ಯುವಿನಂಥ ಸಾಹಸಶಾಲಿಗಳನ್ನು, ಧನಂಜಯರಂಥ ಕರ್ಮಧೀರರನ್ನು ಭಾರತಾಂಬೆಯು ಪಡೆಯುವಂತೆ ಪಡೆಯಲು ಪ್ರಯತ್ನಿಸುವುದು ಇಂದಿನ ನಮ್ಮ ವನಿತೆಯರ ಕೆಲಸವು. ತಂಗೀ, ಸಹನೆಯನ್ನು ಹೊಂದು, ಆತ್ಮಬಲವನ್ನು ಸಂಪಾದಿಸು!"

"ಮಹಾರಾಜರೇ, ತೀವ್ರವಾದ ರಾಜಕೀಯ ರಂಗದಲ್ಲಿ ವನಿತೆಯು ಪ್ರವೇಶಿಸಬೇಕೆಂದು ತಾವು ಉಪದೇಶಿಸುತ್ತಿರುವಿರಾ?"

"ಎಂದಿಗೂ ಇಲ್ಲ, ಆ ಭಾರವು ಇಂದು ಗಂಡಸಿನದು; ಆದರೆ ಭಾರತೀಯ ಮಹಿಳೆಯರು ಈ ಕಾಲದಲ್ಲಿ ಜಾಗ್ರತರಾಗಿ ತಮ್ಮ ಗಂಡಂದಿರ, ತಮ್ಮ ಮಕ್ಕಳ ಮತ್ತು ಸಹೋದರರ ಮಧ್ಯದಲ್ಲಿ ಪರಡಿರುವ ಬಲಹೀನತೆಯನ್ನೂ ಅಜ್ಞಾತೆಯನ್ನೂ ನೀಗಲು ಪ್ರಯತ್ನಿಸಬೇಕು. ಸ್ವಾವಲಂಬನೆಯ ದಾರಿಯನ್ನು ಅವಲಂಬಿಸಲು ಕಲಿಯಬೇಕು.'

"ಅದು ಹೇಗೆ?"

"ತಂಗೀ, ಜನತೆಗೆ ಜ್ಞಾನವನ್ನೂ ಆತ್ಮಬಲವನ್ನೂ ತೋರಿಸಿ ಕೊಡುವುದು ನಿನ್ನ ಕೆಲಸ. ಆಧ್ಯಾತ್ಮಿಕ ತತ್ವಗಳನ್ನು ಪ್ರಯೋಗರೂಪದಲ್ಲಿ ತಂದು, ಅವುಗಳ ಪ್ರಯೋಗದಿಂದ ಮಾತ್ರ ವಿಶ್ವಕ್ಕೆ ಶಾಂತಿಯಿದೆ, ಎಂದು ವಿಶ್ವಕ್ಕೆ ತೋರಿಸಿಕೊಡಲಿರುವ 'ಮಹಾತ್ಮನು' ಉದಯಿಸಿದ್ದಾನೆ. ಅವನಿಂದು ತನ್ನ ದಿವ್ಯಸಂದೇಶವನ್ನು ಬೀರಲು ಪ್ರಾರಂಭಿಸದಿದ್ದರೂ, ಇನ್ನು ಹನ್ನೆರಡು ವರ್ಷಗಳ ಅನಂತರ ಅವನ ವಿಜಯ ದುಂದುಭಿಯು ಲೋಕದ ಎಲ್ಲ ಭಾಗಗಳಲ್ಲಿಯೂ ವ್ಯಾಪಿಸುವದು. ಅತ್ಯಂತ ಪ್ರಚಂಡವಾದ ಒಂದು ಸಾಮ್ರಾಜ್ಯ ಶಕ್ತಿಯನ್ನು ಆ ಮಹಾತ್ಮನು ನಿರಾಯುಧನಾಗಿ ಎದುರಿಸುತ್ತಾನೆ! ಭಾರತವರ್ಷವು ಆ ಯೋಗಿರಾಜನಿಂದ ಸ್ವಾವಲಂಬನೆಯ ಪಾಠಗಳನ್ನು ಕಲಿಯುವದು. ಆ ಮಹಾತ್ಮನು ಬಿತ್ತಬೇಕಾದ ಬೀಜಗಳಿಗೆ ನೆಲವನ್ನು ಹಸನಗೊಳಿಸುವುವೇ ನಿನ್ನ ಕೆಲಸವು! ಬಾಲಕರ-ಹೆಂಗಸರ ಮಧ್ಯದಲ್ಲಿ ತಿಳುವಳಿಕೆಯನ್ನು ಹರಡಲು,-ಜನತೆಯ ಅನಾಚಾರಗಳನ್ನು ನಿಲ್ಲಿಸಲು-ನೀನು ಉದ್ಯಮಿಸತಕ್ಕದಾಗಿದೆ! ಆ ಪರಾಶಕ್ತಿಯು ನಿನಗೆ ಶುಭವನ್ನೀಯಲಿ! ನಾನು ತೆರಳುವೆ,"

"ಮಹಾನುಭಾವರೇ, ತಾವು ಯಾರು? ಈ ದಾಸಿಗೆ ಜ್ಞಾನದ ಬೆಳಕನ್ನು ನೀಡಿವ ತಮ್ಮನ್ನು ನಾನು ಎಂದಿಗೆ ಪುನರ್ದರ್ಶನವನ್ನು ಹೊಂದುವೆನು?"

"ಮಗಳೇ! ಲೌಕಿಕಜೀವನದಲ್ಲಿ ವಿರಕ್ತಿಯನ್ನು ಹೊಂದಿದ ಒಬ್ಬ ತಪಸ್ವಿಯು ನಾನು. ನನ್ನ ಆತ್ಮವಿಕಾಸಕ್ಕಾಗಿ ಹಿಮಾಲಯದಲ್ಲಿ ನಾನು ಉದ್ಯಮಿಸುತ್ತಲಿದ್ದೇನೆ. ನನ್ನ ತಪೋಬಲದಿಂದ ಅಧಃಪತನವನ್ನು ಹೊಂದಿದ ಭಾರತವರ್ಷವನ್ನು ಉದ್ಧರಿಸಲು ಉದಯಭಾನುವು ಉದಯಹೊಂದಿದುದನ್ನು ತಿಳಿದೆನು. ಅವನು ಬಿತ್ತಲಿರುವ ಆ ದಿವ್ಯ ಬೀಜಗಳಿಗೆ ಭೂಮಿಯನ್ನು ಹಸನಮಾಡಬೇಕೆಂದು, ಜನರನ್ನು ಎಚ್ಚರಿಸುವುದಕ್ಕಾಗಿ ಹಿಮಾಚಲ ಪ್ರದೇಶದಲ್ಲಿರುವ ಹೃಷೀಕೇಶವನ್ನು ತ್ಯಜಿಸಿ ಇಲ್ಲಿಗೆ ಬಂದೆನು. ನನ್ನ ಕೆಲಸವಾಯಿತು. ನಾನೀಗ ತೆರಳುತ್ತೇನೆ. ನೀನು ಸತ್ಯವನ್ನವಲಂಬಿಸಿರುವುದರಿಂದ, ಜಯಶಾಲಿನಿಯಾಗುವೆ. ನಿನ್ನ ಪತಿಯ ದರ್ಶನವು ನಿನಗೆ ಇಂದಿಗೆ ಹನ್ನೆರಡು ವರ್ಷಗಳ ಅನಂತರ ಲಭಿಸುತ್ತದೆ. ಪುನಃ ನಾನು ಯಾವಾಗ ನಿನ್ನನ್ನು ಬಂದು ಕಾಣುವೆನೆಂದು ಪ್ರಶ್ನಿಸಿದೆಯಲ್ಲವೇ? ನೀನು ನಿನ್ನ ಪತಿಯ ದರ್ಶನವನ್ನು ಪಡೆದ ನಂತರ ಒಂದು ತಿಂಗಳೊಳಗೆ ನಿನಗೆ ದರ್ಶನವನ್ನು ದಯಪಾಲಿಸುತ್ತೇನೆ."

ತೇಜಃಪುಂಜನಾದ ಆ ತಪಸ್ವಿಯು ಪದ್ಮಳನ್ನು ಆಶೀರ್ವದಿಸಿ ತೆರಳಿದನು. ಭಕ್ತಿ ಮತ್ತು ಗೌರವಭರಿತಳಾಗಿ ಪದ್ಮಳು ಅವನ ಚರಣಗಳಲ್ಲಿ ನಮಸ್ಕರಿಸಿದಳು.

ತನ್ನ ಜನನಿಯು ಅಪರಿಚಿತನಾದ ಓರ್ವನಿಗೆ ನಮಸ್ಕರಿಸಿದ ಚಿತ್ರವನ್ನು ಕಂಡು ಆಶ್ಚರ್ಯಭರಿತನಾಗಿ, ಮಳಲು ದಿನ್ನೆಯ ಮೇಲೆ ಕುಳಿತಿದ್ದ ರಾಮಚಂದ್ರನು ತನ್ನ ಕಣ್ಣುಗಳನ್ನು ಹೊರಳಿಸಿದನು. ಯೋಗಿರಾಜನು ಆ ಪ್ರದೇಶವನ್ನು ಪರಿತ್ಯಜಿಸಿ ಬಡಗಲು ದಿಕ್ಕಿಗೆ ತೆರಳಿದನು.

ಯೋಗಿರಾಜನ ಉಪದೇಶಾಮೃತವು ಕಂದಿದ್ದ ಪದ್ಮಳ ಹೃದಯಮಲ್ಲಿಗೆಯನು ಅರಳುವಂತೆ ಮಾಡಿತು. ಈ ಜಗತ್ತಿನಲ್ಲಿ ತಾನು ನೆರವೇರಿಸಬೇಕಾದ ಹಲವು ಕರ್ತವ್ಯಗಳಿರುತ್ತವೆ, ಎಂಬುದನ್ನು ಅವಳು ಅರಿತಳು. ತನ್ನ ನಾಡಿನ ಹಿತಸಾಧನೆಗಾಗಿ ತಾನು ಉದ್ಯಮಿಸುವದು ತನ್ನ ಕರ್ತವ್ಯವೆಂಬುದನ್ನು ಅವಳು ಗ್ರಹಿಸಿದಳು.

ಹೊಸೂರು ಗ್ರಾಮದಲ್ಲಿಯೇ ಅವಳು ತನ್ನ ಸಾಧನೆಗಳನ್ನು ಪ್ರಾರಂಭಿಸಿದಳು. ಗ್ರಾಮಿಣ ಹೆಂಗಸರ ಮಧ್ಯದಲ್ಲಿ ಹರಡಿರುವ ನಿರಕ್ಷರಾಕುಕ್ಷಿತ್ವವನ್ನು ಹೋಗಲಾಡಿಸಲು, ಜನರ ಮಧ್ಯದಲ್ಲಿ ಹರಡಿರುವ ಸುರಾಪಾನದ ದುರಭ್ಯಾಸವನ್ನು ನಿವಾರಿಸಲು ಉದ್ಯಮಿಸಬೇಕೆಂದು ಪದ್ಮಳು ನಿರ್ಧರಿಸಿದಳು. ಗ್ರಾಮದ ಹೆಂಗಸರ ಮಧ್ಯದಲ್ಲಿ ಬೆರೆತು, ಅವರಲ್ಲಿ ತಿಳುವಳಿಕೆಯನ್ನುಂಟು ಮಾಡಲು ಅವಳು ಯತ್ನಿಸಿದಳು. ಹಳ್ಳಿಯ ಹೆಂಗಸರಿಗೆ ಜ್ಞಾನಾರ್ಜನೆಯಲ್ಲಿ ಆಸಕ್ತಿಯು ಸಂಜಾತವಾಗಬೇಕೆಂದು ಅವಳು ಬಯಸಿದಳು. ಅವಳ ನುಡಿಗಳಿಗೆ ಹಳ್ಳಿಯ ಹೆಂಗಸರು ಹೀಗೆ ಹೇಳಿದರು:—"ಅಯ್ಯೋ! ನಾವು ಕಲಿತೇನು ಮಾಡಬೇಕಮ್ಮಾ? ಹೆಂಗಸರು ಗಂಡಸರಂತೆ ಕೋರ್ಟು-ಕಚೇರಿಗಳಿಗೆ ಹೋಗಿ ಗಳಿಸುವದಕ್ಕಾಗುತ್ತದೆಯೇ?"

"ಕೋರ್ಟು-ಕಚ್ಚೇರಿಗಳಿಗೆ ಹೊಗುವುದಕ್ಕಲ್ಲ ಕಲಿಯುವುದು, ಜ್ಞಾನವನ್ನು ಸಂಪಾದಿಸುವುದಕ್ಕಾಗಿದೆ. ನಾವು ಓದು ಕಲಿತರೆ ಬುದ್ಧಿವಂತರಾಗುತ್ತೇವೆ. ಪ್ರಧಾನ ವಿಷಯಗಳನ್ನು ಓದಿ ತಿಳಿದುಕೊಳ್ಳಬಹುದು. ಅದು ದುಃಖಕಾಲದಲ್ಲಿ ಅಪಾರವಾದ ಶಾಂತಿಯನ್ನು ನೀಡುವುದು."

"ಅಮ್ಮಾ, ಓದು ಹೊಟ್ಟೆಗೆ ಹಿಟ್ಟು ನೀಡಲಾರದು, ಹಿಟ್ಟಿಗಿಂತಲೂ ಮಹತ್ವವಾದ ಸಂಗತಿಯು ಬೇರೊಂದೇನಿದೆ?"

"ಹೊಟ್ಟೆಯ ಚಿಂತನೆಯೊಂದು ಮಾತ್ರವಲ್ಲ ಮನುಷ್ಯನಿಗಿರುವದು."

"ಅನ್ನಕ್ಕಿಂತಲೂ ಮಿಗಿಲಾದದ್ದು ಜಗತ್ತಿನಲ್ಲಿ ಬೇರೆಯಾವುದಿದೆ? ಜಗತ್ತಿನಲ್ಲಿ ಮನುಷ್ಯನಿಗೆ ಬೇಕಾದುವೇನು? ಮೂರ ನೇರದ ಹಿಟ್ಟು, ಮಾನವನ್ನು ಮುಚ್ಚಲಿಕ್ಕಾವಶ್ಯವಿರುವ ವಸ್ತ್ರವು!"

ಗ್ರಾಮವನಿತೆಯರಲ್ಲಿ ಒಬ್ಬಾಕೆಯು ಮೇಲೆ ಹೇಳಿದ ರೀತಿ ನುಡಿದಳು. ಈ ಮಾತುಗಳಿಂದ ಹಳ್ಳಿಯ ಹೆಂಗಸರ ಜ್ಞಾನವು ಎಷ್ಟು ಅಲ್ಪವಾದುದೆಂಬದು ವ್ಯಕ್ತವಾಗುತ್ತದೆ. ಇದಕ್ಕೆ ಹೊಣೆ ಯಾರು? ಗ್ರಾಮಿಣ ಜನತೆಯ ಮಧ್ಯದಲ್ಲಿ ಜ್ಞಾನ ಪ್ರಸಾರಕ್ಕೆ ಹಿಂಜರಿಯುತ್ತಿರುವ ಸರಕಾರದವರ ಕರ್ತವ್ಯ ಲೋಪವಾಗಿದೆ. ಈ ದುರವಸ್ಥೆಗೆ ಕಾರಣಭೂತವಾದ ಸಂಗತಿಯು ತಮ್ಮ ಪ್ರಜೆಗಳ ಹಿತಸಾಧನೆಗಾಗಿ ದುಡಿಯುವು

ದಾಗಿವೆ ಸರಕಾರದವರ ಕರ್ತವ್ಯವು. ಒಂದು ಕುಟುಂಬದಲ್ಲಿ ತಂದೆಗೆ ಯಾವ ಸ್ಥಾನವಿರುವದೋ, ಅದೇ ರೀತಿ ಜನಾಂಗವೆಂಬ ಕುಟುಂಬದಲ್ಲಿ ಸರಕಾರದವರಿಗೆ ಇದ್ದೇ ಇರುತ್ತದೆ. ಒಂದು ದೇಶದ ಜನತೆಯು ಅನಾಗರೀಕತೆ ಮತ್ತು ಅಜ್ಞಾನತಿಮಿರಾಂಧಕಾರಗಳಿಂದ ಆವೃತವಾಗಿದ್ದರೆ, ಆ ದೇಶದ ಜನತೆಯ ಜೀವನವು ಬೆಳವಣಿಗೆಯನ್ನು ಹೊಂದದಿದ್ದರೆ, ಆ ದೇಶದ ಸರಕಾರದವರು ತಮ್ಮ ಕರ್ತವ್ಯಗಳನ್ನು ಯೋಗ್ಯರೀತಿಯಲ್ಲಿ ನೆರವೇರಿಸಲಿಲ್ಲವೆಂದು ನುಡಿಯಬಹುದು, ಏಕೆಂದರೆ, ಜನತೆಯನ್ನು ಸಲಹುವ ಮತ್ತು ಅವರನ್ನು ಸಮೃದ್ಧರನ್ನಾಗಿ ಮಾಡುವ ಉದ್ಯಮದಲ್ಲಿ ಸರಕಾರದವರ ಅಪ್ರಾಪ್ತತೆ ಮತ್ತು ಬಲಹೀನತೆ ಇವುಗಳು ಪ್ರತ್ಯಕ್ಷವಾಗುವುವು. ಆದುದರಿಂದ ಒಂದು ನಾಡು ಅಭ್ಯುನ್ನತಿಯನ್ನು ಪಡೆಯಬೇಕಾದರೆ, ಆ ನಾಡಿನ ಸರಕಾರದವರು ನಿಶ್ಚಯವಾಗಿಯೂ ಪ್ರಜೆಗಳ ವಿದ್ಯೆ ಮತ್ತು ಬೆಳವಣಿಗೆ ಇವುಗಳಲ್ಲಿ ತಮ್ಮ ದೃಷ್ಟಿಗಳನ್ನು ಹರಿಸಿ ಉದ್ಯಮಿಸಬೇಕಾಗಿರುವದು.

ಇದರಂತೆಯೇ ಭಾರತವರ್ಷದ ನಿರಕ್ಷರ ಕುಕ್ಷಿತ್ವಕ್ಕೆ, ಜನತೆಯ ಮಧ್ಯದಲ್ಲಿ ಹರಡಿರುವ ಅಜ್ಞತೆಗೆ, ಪ್ರಧಾನ ಕಾರಣವು ವಿದೇಶೀಯರಾದ ನಮ್ಮ ಈಗಲಿನ ಆಳರಸರ ಶಾಸನರೀತಿಯಾಗಿದೆ ಎಂದು ನುಡಿದರೆ ತಪ್ಪಾಗಲಾರದು. ಕಳೆದ ಒಂದು ಶತಮಾನದಿಂದ ಅವರು ತಮ್ಮ ಅಧಿಕಾರಗಳನ್ನು ಭಾರತ ವರ್ಷದಲ್ಲಿ ನಿಲ್ಲಿಸಿ, ಭಾರತವರ್ಷದ ಹಿತಕ್ಕಾಗಿಯೇ ತಾವು ಆಳುತ್ತಿರುವೆವೆಂದು ನುಡಿಯುತ್ತಲಿದ್ದರೂ, ಭಾರತವರ್ಷದ ಜನತೆಯ ವಿದ್ಯಾಭ್ಯಾಸಕ್ಕಾಗಿ ವಿಶೇಷ ಪ್ರಯತ್ನಿಸಿದಂತೆ ಕಂಡುಬರುವದಿಲ್ಲ, ಅಥವಾ ಅವರು ನಮ್ಮ ನಾಡಿನ ಜನರಿಗೆ ವಿದ್ಯಾಭ್ಯಾಸವನ್ನು ನೀಡುತ್ತಿದ್ದರೂ, ಅವರು ಪ್ರದಾನ ಮಾಡುತ್ತಿರುವ ವಿದ್ಯೆಯು ನಮ್ಮ ನಾಡಿನ ಏಳಿಗೆಗೆ ಸಹಾಯ್ಯಕಾರಿಯಾಗುವಂತಿಲ್ಲ. ನೂರು ವರ್ಷಗಳ ಕಾಲದ ಬ್ರಿಟಿಷ ಶಾಸನವು ನಿರಾತಂಕವಾಗಿರಲು, ಭಾರತವರ್ಷದ ಜನರಲ್ಲಿ ಶೇಕಡ ೧೦ ರಷ್ಟು ಜನರು ಅಕ್ಷರಜ್ಞಾನವುಳ್ಳವರಾಗಿರುತ್ತಾರೆ! ಈ ಲೆಖ್ಖದಂತೆ ನಾವು ಹೋಗುತ್ತಿರುವದಾದರೆ ಭಾರತ ವರ್ಷದಲ್ಲಿ ನಿರಕ್ಷರ ಕುಕ್ಷಿತ್ವವನ್ನು ಹೋಗಲಾಡಿಸಲು ಇನ್ನೆಷ್ಟು ಶತಮಾನಗಳು ಬೇಕಾಗಬಹುದು!

ವಿದ್ಯಾಹೀನತೆ-[illegible]ರುವದು ಇವುಗಳಿಂದ ಭಾರತ ವರ್ಷದ ಹಳ್ಳಿಗಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿರುವವು. ಒಂದು ಕಾಲದಲ್ಲಿ ಭಾರತವರ್ಷದ ವಿದ್ಯಾಕೇಂದ್ರಗಳು ಹಳ್ಳಿಗಳಾಗಿದ್ದುವು, ಆದರೆ ಇಂದಿನ ವಿದ್ಯಾಕೇಂದ್ರಗಳು ನಗರಗಳಲ್ಲಾಗಿರುತ್ತವೆ ಅವುಗಳ ಲಾಭವು ಹಳ್ಳಿಗಾಡುಗಳಿಗೆ ಸಿಗುವಂತಿಲ್ಲ. ಹಳ್ಳಿಗಳೆಂದರೆ, ಕತ್ತಲೆಯ ಮನೆಗಳು! ಇದಕ್ಕಾಗಿ ವಿದೇಶದವರನ್ನು ದೂರುವುದಕ್ಕಿಂತ, ನಮ್ಮನ್ನು ನಾವೇ ದೂರಿಕೊಳ್ಳುವುದು ಮೇಲು, ಏಕೆಂದರೆ ನಮ್ಮ ಪೌರುಷಶೂನ್ಯತೆಯಿಂದ ಭಾರತವರ್ಷವು ಈ ರೀತಿಯ ಅಧಃಪತನವನ್ನು ಹೊಂದಿರುತ್ತದೆ.

ಪದ್ಮಳು ಗ್ರಾಮಕನ್ಯೆಯ ತೆ[illegible]ಡಿಗಳನ್ನು ಶ್ರಾವಿಸಲು ಹೀಗೆ ಹೇಳಿದಳು: “ತಂಗೀ, ತಿನ್ನಲು ಅನ್ನವೂ ಉಡಲು [illegible]ಯೂ ಲಭಿಸಿದರೆ, ಮನುಷ್ಯನ ಸರ್ವಸ್ವವೂ

ಆಗಿ ಹೋಯಿತೆಂದು ತಿಳಿದಿರುವೆಯಾ? ನಾವು ತಿನ್ನುವುದೂ, ಜೀವಿಸುತ್ತಿರುವದೂ ಏಕಾಗಿ ಎಂಬುವನ್ನು ಬಲ್ಲೆಯಾ?''

''ಏಕಾಗಿ? ನಾವು ಹುಟ್ಟಿರುತ್ತೇವೆ, ಆದುದರಿಂದ ನಾವು ಜೀವಿಸಬೇಕು.''

''ಜೀವಿಸುವುದರಿಂದ ಯಾವ ಪ್ರಯೋಜನವಿದೆ?''

''ಏಕೆಂಬುದು ನನಗೆ ತಿಳಿಯದು; ಎಲ್ಲರೂ ಜೀವಿಸುತ್ತಿದ್ದಾರೆ. ಅದರಂತೆಯೇ ನಾನೂ ಬದುಕುತ್ತಲಿದ್ದೇನೆ.''

''ತಂಗೀ, ಈ ಮನುಷ್ಯ ಜೀವನವು ಉದ್ದೇಶವಿಲ್ಲದ ಒಂದಲ್ಲ. ಈ ಜೀವನಕ್ಕೆ ಒಂದು ತತ್ವವಿದೆ, ಒಂದು ಆದರ್ಶವಿದೆ. ಒಂದು ಕಾರ್ಯವನ್ನು ಸಾಧಿಸುವದಕ್ಕಾಗಿ ಆತ್ಮನು ಈ ಜನ್ಮವನ್ನು ಹೊಂದಿರುತ್ತಾನೆ.''

''ಏನದು?'' ಎಂದು ಪ್ರಶ್ನಿಸಿದಳು ಆಗ್ರಾಮಿಣ ಹೆಂಗುಸು.

''ಮನುಷ್ಯನು ತನ್ನನ್ನು ತಿಳಿಯುವುದಾಗಿದೆ ಈ ಬದುಕಿನ ಗುರಿಯು!''

''ನನ್ನನ್ನು ನಾನು ತಿಳಿಯುವುದೇ?''

''ಹೌದು.''

''ಅದು ಸುಲಭದ ಕೆಲಸವು, ತಾವು ಯಾರೆಂಬುದನ್ನು ತಿಳಿಯದವರು ಯಾರಾದರೂ ಲೋಕದಲ್ಲಿರುತ್ತಾರೆಯೇ?''

''ಹಾಗಾದರೆ ನೀನು ಯಾರೆಂಬುದನ್ನು ಹೇಳು ನೋಡೋಣ!''

''ನಾನು ಹೊನ್ನಿ!''

''ಹೊನ್ನಿ ಎಂದರೆ ನೀನೇ?''

''ಹೌದು, ಅದೇ ನನ್ನ ಹೆಸರು!''

''ಹೊನ್ನಿ ಎಂಬುದು ನಿನ್ನ ಹೆಸರಾಗಿದೆ, ಅಷ್ಟಲ್ಲದೆ ನೀನಲ್ಲ. ಹೊನ್ನಿಯೇ ನೀನಾದ ಪಕ್ಷದಲ್ಲಿ, 'ನನ್ನ ಹೆಸರು' ಹೊನ್ನಿ ಎಂದು ನುಡಿಯುವ ಅವಶ್ಯಕತೆಯಿರಲಿಲ್ಲ. 'ಹೊನ್ನಿ' ಎಂಬುವು ನಿನ್ನ ಹೆಸರು ಅಷ್ಟೆ, ಆದರೆ ಆ ಹೆಸರು ನೀನಲ್ಲ. ಅದು ಬೇರೆ, ನೀನು ಬೇರೆ.''

''ಹಾಗಾದರೆ ನಾನು ಯಾರು?''

''ನೀನು ಯಾರು ಎಂಬುದನ್ನು ತಿಳಿದು ಅದರ ಅನುಭೂತಿಯನ್ನು ಹೊಂದಿದರೆ, ನಿನ್ನ ಜೀವನದ ಉದ್ದೇಶವು ಪೂರ್ತಿಯಾಗುವುದು. ಅರ್ಥಾತ್ 'ನಾನು' ಎಂದು ನುಡಿಯುತ್ತಿರುವುದು ಮನುಷ್ಯನ ಅಂತರಂಗದಲ್ಲಿ ಅಡಕವಾದ ಒಂದು ಶಕ್ತಿಯಾಗಿದೆ. ಆ ಚೈತನ್ಯದ ಪ್ರಭಾವದಿಂದ ಮನುಷ್ಯನು ಪ್ರಯತ್ನಿಸುತ್ತಾನೆ, ಮತ್ತು ಚಿಂತಿಸುತ್ತಾನೆ. ಆ ಶಕ್ತಿಯೇ ಜೀವನದ ಸಾರಥಿಯು! ಆ ಸಾರಥಿಯನ್ನು ತಿಳಿಯಬೇಕಾದರೆ ನಾವು ಜ್ಞಾನವನ್ನು ಸಂಪಾದಿಸಬೇಕಾಗಿದೆ. ವಿದ್ಯೆಯೆಂದರೆ, ಉದರ ನಿರ್ವಹಣ ಮಾಡಲಿರುವ ಒಂದು ವಸ್ತುವಲ್ಲ. ಅದಕ್ಕಿಂತ ಎಷ್ಟೋ ಮಿಗಿಲಾದುದಾಗಿದೆ. ನಾವು ಸದ್ಯಕ್ಕೆ ಆಧ್ಯಾತ್ಮಿಕ ತತ್ವಗಳನ್ನು ತ್ಯಜಿಸಿದರೂ, ಸಾಧಾರಣ ಜೀವನವನ್ನು ಸುಖಕರವಾಗಿ

ನಡೆಸುವದಕ್ಕಾಗಿಯಾದರೂ ವಿದ್ಯೆಯು ಅತ್ಯಾವಶ್ಯಕವಾಗಿದೆ.''

''ಅದು ಹೇಗೆ?'' ಎಂದು ಪ್ರಶ್ನಿಸಿದಳು ಹೊನ್ನಮ್ಮನೆಂಬಾ ಹೆಸರಿನ ಹೆಂಗಸು.

''ನಿನ್ನ ಮಗುವಿಗೆ ಕೆಮ್ಮಲಾಯಿತೆಂದು ತಿಳಿದುಕೋ. ಆ ಬೇನೆಯು ವಾಸಿಯಾಗಬೇಕಾದರೆ, ಏನು ಮಾಡಬೇಕು?

''ನನಗೆ ತಿಳಿಯದು''

''ವಿದ್ಯೆಯನ್ನು ಕಲಿತರೆ ಅದನ್ನು ತಿಳಿದುಕೊಳ್ಳಬಹುದು; ಮಕ್ಕಳನ್ನು ಹೇಗೆ ಆರೈಕೆ ಮಾಡಬೇಕು, ಬೇನೆಯಾದರೆ ಯಾವ ಔಷಧಿಯನ್ನು ಕೊಡಬೇಕು? ಎಂಬಿತ್ಯಾದಿ ಕುಟುಂಬ ಜೀವನಕ್ಕೆ ಅತ್ಯಾವಶ್ಯಕವಾದ ಸಂಗತಿಗಳನ್ನೆಲ್ಲ ವಿದ್ಯೆಯನ್ನು ಕಲಿತರೆ ಓದಿತಿಳಿದುಕೊಳ್ಳಬಹುದು. ಮಕ್ಕಳಿಗೆ ಬುದ್ಧಿಯನ್ನು ಕಲಿಸುವ ಬಗೆ ಹೇಗೆ? ಎಂಬುದನ್ನು ತಿಳಿದು, ಅವರ ಶಿಕ್ಷಣವನ್ನು ನಡೆಸಬಹುದು. ಹೀಗೆ ಅನೇಕ ಸಂಗತಿಗಳಿರುತ್ತವೆ. ಕುಟುಂಬ ಜೀವನದ ಸೌಂದರ್ಯವನ್ನು ಚಿಂತಿಸಿಯಾದರೂ ಹೆಂಗಸರು ವಿದ್ಯೆಯನ್ನು ಕಲಿಯುವದು ಅತ್ಯಾವಶ್ಯಕವಾದುದು. ಒಂದು ಕುಟುಂಬದ ಆಗು-ಹೋಗುಗಳು ಹೆಂಗಸರ ಕರಗಳಲ್ಲಿರುತ್ತವೆ. ಅವಳು ವಿದ್ಯಾವತಿಯೂ ಗುಣವತಿಯೂ ಆದರೆ, ಕುಟುಂಬವು ಅಭಿವೃದ್ಧಿಯನ್ನು ಹೊಂದುತ್ತದೆ, ಇಲ್ಲದಿದ್ದರೆ ಆ ಕುಟುಂಬವು ಅಧಃಪಾತವ ದಾರಿಯನ್ನು ಅವಲಂಬಿಸುತ್ತದೆ.''

ಈ ರೀತಿ ಪದ್ಮಳು ಹಳ್ಳಿಯ ಹೆಂಗಸರ ಮಧ್ಯದಲ್ಲಿ ವಿದ್ಯಾಸಂಪಾದನೆಗಿರುವ ಆಸಕ್ತಿಯನ್ನು ಹೆಚ್ಚಿಸಲು ಉದ್ಯಮಿಸಿದಳು. ತನ್ನ ಸದುಪದೇಶಗಳಿಂದ ಕತ್ತಲೆಯಲ್ಲಿ ಬಿದ್ದಿರುವ ಗ್ರಾಮೀಣ ಮಹಿಳೆಯರಲ್ಲಿ ಬೆಳಕು ಉದಯವನ್ನು ಹೊಂದುವಂತೆ ಪ್ರಯತ್ನ ಮಾಡಿದಳು. ಅವಳ ಸಹವಾಸದಿಂದಲೂ ಸದುಪದೇಶಗಳಿಂದಲೂ ಆ ಹೆಂಗಸರಲ್ಲಿ ವಿದ್ಯೆಯನ್ನು ಸಂಪಾದಿಸಲಿರುವ ಅಭಿರುಚಿಯು ಹೆಚ್ಚಿತು. ಅವಳು ಹೇಳುತ್ತಿರುವ ಕತೆಗಳು, ಪೌರಾಣಿಕ ಸಂಗತಿಗಳು ಹೊಸೂರ ಗ್ರಾಮದ ಹೆಂಗಸರಿಗೆ ಪದ್ಮಳನ್ನು ಕುರಿತು ಗೌರವವು ಉದಯಿಸುವಂತೆ ಮಾಡಿದುವು. ಪದ್ಮಳು ತನ್ನ ಮನೆಗೆ ಸಾಧಾರಣವಾಗಿ ಬರುತ್ತಿರುವ ಹೆಂಗಸರಿಗೆ ಅಕ್ಷರಗಳನ್ನು ಕಲಿಸತೊಡಗಿದಳು. ವಿರಾಮ ವೇಳೆಯಲ್ಲಿ ಪ್ರತಿಯೊಬ್ಬರ ಮನೆಗಳಿಗೂ ತೆರಳಿ, ಅವರ ಕೆಲಸಗಳಲ್ಲಿ ನೆರವಾಗುತ್ತಿದ್ದಳು. ಪ್ರೇಮವು ಬೆಳಗಿತು. ಗ್ರಾಮೀಣ ಲಲನೆಯರು ಅನಿರ್ವ್ಯಾಜವಾಗಿ ಪದ್ಮಳನ್ನು ಪ್ರೀತಿಸತೊಡಗಿದರು. ಅವಳು ಅವರ ಮಾರ್ಗದರ್ಶಕಿ-ಗುರುವಾದಳು.

ಪದ್ಮಳ ಸತತ ಪ್ರಯತ್ನಗಳಿಂದ ಹೊಸೂರ ಗ್ರಾಮದ ಲಲನಾ ಸಮೂಹವು ಜಾಗೃತವಾಯಿತು. ಅವರ ಮಧ್ಯದಲ್ಲಿ ಜ್ಞಾನಸೂರ್ಯನು ಉದಯವನ್ನು ಹೊಂದಲಾರಂಭಿಸಿದನು. ಕತ್ತಲೆಯು ಕವಿದಿದ್ದ ಆ ವಲಯದಲ್ಲಿ ಬೆಳಕು ಗೋಚರವಾಗಲಾರಂಭಿಸಿತು!

---

# ೧೪ ತಾನೊಂದು ನೆನೆದರೆ ದೈವವೊಂದು ನೆನೆವುದು.

ಹೊಸೂರ ಗ್ರಾಮದಲ್ಲಿ ವಾಸಿಸುತ್ತಿರುವ ಪದ್ಮಳಿಗೆ ಒಂದು ಕಾಗದವು ಬಂದಿತು. ಅದು ವೆಂಕಟರಾಮನದಾಗಿದ್ದಿತು. ಅದು ಹೆಚ್ಚು ಮಹತ್ವವುಳ್ಳದ್ದಾಗಿರಲಿಲ್ಲ ಅವನು ವಿನಯಪೂರ್ವಕವಾಗಿ ತನ್ನ ಅಕ್ಕನನ್ನು,--ಅವನು ಪದ್ಮಳ ದೊಡ್ಡ ತಂದೆಯ ಮಗನಿದ್ದು, ಪ್ರಾಯದಲ್ಲಿ ಅವಳಿಗಿಂತ ಚಿಕ್ಕವನಾದುದರಿಂದ ಪದ್ಮಳು ಅವನ ಅಕ್ಕನಾಗಿರುವಳೆಂಬದನ್ನು ವಾಚಕರು ಈ ಮೊದಲೇ ತಿಳಿದುಕೊಂಡಿರಬಹುದು-ಇನ್ನೊಂದು ವಾರದಲ್ಲಿಯೇ ಜರುಗಲಿರುವ ತನ್ನ ಹುಟ್ಟಿದ ಹಬ್ಬದ ಉತ್ಸವಕ್ಕೆ ಬರಬೇಕೆಂದು ಆಮಂತ್ರಿಸಿದ್ದನು. ಇಲ್ಲಿ ಒಂದು ಮಾತು ಹೇಳಬೇಕಾಗಿದೆ: ವೆಂಕಟರಾಮನು ತನ್ನ ದುಂದುಗಾರಿಕೆಯಿಂದ ಭಿಕ್ಷಾಪಾತ್ರೆಗೆ ಅಧಿಪತಿಯಾಗಬೇಕಾಗುವ ಸಮಯವು ಸಂಪ್ರಾಪ್ತವಾಗಲು, ಅವನ ದಯನೀಯ ಸ್ಥಿತಿಯನ್ನು ವೀಕ್ಷಿಸಿ, ಪದ್ಮಳು ಅವನ ಕುಟುಂಬಕ್ಕೆ ಹೆಚ್ಚಿನ ವಿಪತ್ತುಗಳು ಒದಗದಂತೆ ಅವನ ಜೀವನೋತ್ಪಾದನಕ್ಕಾಗಿ ಆಗಾಗ ಧನಸಹಾಯವನ್ನು ಮಾಡುತ್ತಿದ್ದಳು. ಅವಳು ಈ ರೀತಿ ವರ್ತಿಸಲು ಕಾರಣವೂ ಇದ್ದಿತು. ವೆಂಕಟರಾಮನ ಪತ್ನಿ ಸರೋಜಳ ಮೇಲೆ ಪದ್ಮಳಿಗೆ ಇದ್ದ ಅಪಾರ ಮಮತೆಯು ವೆಂಕಟರಾಮನ ಜೀವನ ನಿರ್ಮಾಣಕ್ಕೆ ಆವಶ್ಯವಿರುವ ಸಹಾಯವನ್ನು ನೀಡುವಂತೆ ಪದ್ಮಳನ್ನು ಪ್ರೇರೇಪಿಸಿತು; ಆದರೆ ಆ ಪಾಪಿಯು ಅವಳ ಔದಾರ್ಯಕ್ಕೆ ಅಪಾತ್ರನಿದ್ದನು. ತನ್ನ ಬಾಯೊಳಗೆ ವಿಷವನ್ನು ಅಡಗಿಸಿಕೊಂಡು ಬಹು ಸೌಮ್ಯವಾಗಿ ತೋರುತ್ತಿರುವ ನಾಗರಹಾವಿನ ಸ್ವಭಾವವು ಅವನದಾಗಿದೆ ಎಂಬುದನ್ನು ವಾಚಕರು ಈ ಮೊದಲೇ ತಿಳಿದುಕೊಂಡಿರಬಹುದು. ಅವನು ಪದ್ಮಳೊಡನೆ ತಾನು ಸನ್ಮಾರ್ಗವನ್ನು ಅವಲಂಬಿಸಲು ಪ್ರಯತ್ನಿಸುತ್ತಿರುವೆನೆಂದು ನಟಿಸಿ, ಅವಳನ್ನು ವಂಚಿಸಲು ಯತ್ನಿಸುತ್ತಿದ್ದನು. ಪದ್ಮಳು ಸರಳಹೃದಯಳಾದುದರಿಂದ, ವೆಂಕಟರಾಮನ ಮಾತುಗಳನ್ನು ನಂಬುತ್ತಿದ್ದಳು. ಅವನ ಮುಖದ ಮೇಲೆ ಮೂಡುತ್ತಿರುವ ವರ್ಣವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ, ಅವನ ಹೃದಯದಲ್ಲಿ ತುಂಬಿರುವ ಕಹಿ ವಿಷವನ್ನು ನೋಡಲು ಅವಳು ಶಕ್ತಳಾಗಲಿಲ್ಲ. ಯಾವಾಗಲೂ ಅವಳೊಡನೆ ಪದ್ಮಳು ವರ್ತಿಸುತ್ತಿದ್ದ ರೀತಿಯು ಬಹು ಪ್ರೇಮಪೂರ್ಣವಾಗಿದ್ದಿತು. ತನ್ನ ಉಪದೇಶ ಸುಧೆಯಿಂದ ಅವನಲ್ಲಿ ವ್ಯಾಪಿಸಿರುವ ವಿಷವನ್ನು ಪರಿಹರಿಸಲು ಪದ್ಮಳು ಯತ್ನಿಸಿದಳು; ಆದರೆ ವೆಂಕಟರಾಮನು ಹೃದಯವಿರುವ ಜೀವಿಯಾಗಿರಲಿಲ್ಲ; ಹಾಗಾಗಿದ್ದರೆ ಈ ಮೊದಲೇ ಅವನು ತನ್ನ ಪಾಪಮಯ ದಾರಿಯನ್ನು ಪರಿತ್ಯಜಿಸಿ ಸನ್ಮಾರ್ಗವನ್ನು ಹಿಡಿಯುತ್ತಿದ್ದನು. ಏಕೆಂದರೆ, ಪ್ರಯತ್ನಶೀಲರಲ್ಲಿ ಅಗ್ರೇಸರನಾದ ಮಾಧವನು ವೆಂಕಟರಾಮನನ್ನು ಪಾಪದ ಕೆಸರಿನ ಹೊಂಡದಿಂದ ಮೇಲಕ್ಕೆತ್ತುವದಕ್ಕಾಗಿ ಉದ್ಯಮಿಸಿದನು, ಆದರೆ ಎಲ್ಲ ಕೆಲಸಗಳಲ್ಲಿಯೂ ವಿಜಯವನ್ನು ಸಂಪಾದಿಸಿದ ಮಾಧವನ ಆ ಉದ್ಯಮವು,-ವೆಂಕಟರಾಮನನ್ನು ಉದ್ಧರಿಸುವ ಕಾರ್ಯವನ್ನು ಸಂಬಂಧಿಸಿ,-ಪರಾಜಯವನ್ನು ಹೊಂದಿತು. ಆ ಸಂದರ್ಭದಲ್ಲಿ ಮಾಧವನು

ಹೇಳಿದ ನುಡಿಗಳು ಮರೆಯತಕ್ಕವುಗಳಲ್ಲ. "ಅವನು ಮನುಷ್ಯನಲ್ಲ, ಮನುಷ್ಯ ಹೃದಯದವನು ಅವನಾಗಿದ್ದರೆ ಈ ಮೊದಲೇ ಪಾಪಮೋಚನೆಯನ್ನು ಹೊಂದಿ, ಅವನು ಸನ್ಮಾರ್ಗವನ್ನು ಅವಲಂಬಿಸುತ್ತಿದ್ದನು."

ವೆಂಕಟರಾಮನ ಆಮಂತ್ರಣ ಪತ್ರವನ್ನು ನೋಡಿದ ಅನಂತರ ಪದ್ಮಳು ನಗರಕ್ಕೆ ತೆರಳಲು ನಿರ್ಧರಿಸಿದಳು. ಕೆಲವು ತಿಂಗಳುಗಳ ಕಾಲವನ್ನು ಅವಳು ಹಳ್ಳಿಯಲ್ಲಿಯೇ ಕಳೆದುದರಿಂದ, ಒಮ್ಮೆ ನಗರಕ್ಕೆ ತೆರಳಿ ತನ್ನ ಗೆಳತಿಯನ್ನು ನೋಡಿಕೊಂಡು ಬರಬೇಕೆಂಬ ಆಶೆಯು ಅವಳ ಎದೆಯಲ್ಲಿ ಜನಿಸಿತು. ಈ ಆಮಂತ್ರಣದ ಕಾಗದವು ಕರಗತವಾಗಲು, ಅವಳು ರಾಮನಗರಕ್ಕೆ ತೆರಳಿ ಸರೋಜಳನ್ನು ಕಂಡು ಮಾತಾಡಿ, ಮಾಧವನ ದರ್ಶನವನ್ನು ಪಡೆದು, ಮರಳಿ ಬರಬೇಕೆಂದು ನಿಶ್ಚಯಿಸಿದಳು, ಇದಲ್ಲದೆ ನಗರಕ್ಕೆ ತೆರಳಿದರೆ, ಮಾಧವನಿಂದ ತನ್ನ ಪತಿಗೆ ಸಂಬಂಧಿಸಿದ ಯಾವುದಾದರೂ ಒಂದು ವಾರ್ತೆಯನ್ನು ತಿಳಿದುಕೊಳ್ಳಬಹುದೆಂಬ ಆಶೆಯೂ ಅವಳಿಗಿದ್ದಿತು. ಈ ಎಲ್ಲಾ ಸಂಗತಿಗಳು ನಗರಪ್ರವಾಸವನ್ನು ಕೈಕೊಳ್ಳಲು ಅವಳನ್ನು ಪ್ರೇರೇಪಿಸಿದುವು.

ವೆಂಕಟರಾಮನ ಹುಟ್ಟಿದ ಹಬ್ಬಕ್ಕೆ ಎರಡು ದಿನಗಳಿಗೆ ಮೊದಲೇ ಪದ್ಮಳು ತನ್ನ ಕಂದ ರಾಮಚಂದ್ರನೊಡನೆ ನಗರಕ್ಕೆ ತಲುಪಿದಳು. ಅಕಸ್ಮಾತ್ತಾಗಿ ಪದ್ಮಳು ನಗರಕ್ಕೆ ಆಗಮಿಸಿದುದನ್ನು ವೀಕ್ಷಿಸಿ, ಮಾಧವನು ಆಶ್ಚರ್ಯಚಕಿತನಾದನು! ಒಂದು ವೇಳೆ ಹಳ್ಳಿಯ ವಾಸವು ಅವಳಿಗೆ ಒಪ್ಪಿರಲಾರದು, ಎಂದು ಅವನು ಊಹಿಸಿದನು. ಪದ್ಮಳು ನಗರವನ್ನು ಸೇರಿದ ದಿನವೇ ಅವನು ಅವಳ ಗೃಹಕ್ಕೆ ಬಂದನು. ಪದ್ಮಳ ವದನಾರವಿಂದದಲ್ಲಿ ದೃಗ್ಗೋಚರವಾಗುತ್ತಿರುವ ಶಾಂತತೆಯು ಮತ್ತು ಹರ್ಷದ ಕಿರಣಗಳಿಂದ ಗ್ರಾಮಜೀವನವು ಅವಳ ಹೃದಯಕ್ಕೆ ನೆಮ್ಮದಿಯನ್ನು ನೀಡಿದೆ, ಎಂಬ ಸಂಗತಿಯನ್ನು ಮಾಧವನು ಗ್ರಹಿಸಿದನು. ಅವನು ಮನೆಯ ಹಜಾರದಲ್ಲಿರುವ ಒಂದು ಆಸನದ ಮೇಲೆ ತನ್ನ ಶರೀರಭಾರವನ್ನಿಟ್ಟ ಮೇಲೆ, ಒಂದು ಎಳೆಯ ನಗೆಯೊಡನೆ ನುಡಿದನು: "ಅಕ್ಕಾ! ಹಳ್ಳಿಯ ಜೀವನವು ನಿನಗೆ ಶಾಂತಿಯನ್ನು ನೀಡಿತೇ?"

"ಶಾಂತಿಯ ಸುಧೆಯು ಅಲ್ಲಿ ದೊರೆತಿತು ಎಂದು ಮಾತ್ರವಲ್ಲ, ನನ್ನ ಹೃದಯ ಮಂದಿರವನ್ನು ಆವರಿಸಿದ ಕತ್ತಲೆಯನ್ನು ಹೊಡೆದೋಡಿಸಲು ಒಬ್ಬ ಯೋಗಿರಾಜನ ದರ್ಶನವೂ ಅಲ್ಲಿ ನನಗೆ ಲಭಿಸಿತು."

"ಯೋಗಿರಾಜನ ದರ್ಶನವು ಲಭಿಸಿತೇ?"

"ಹೌದು; ಚಿಂತಾಕಡಲಿನಲ್ಲಿ ಬಿದ್ದು ಬಳಲಿದಾಗ, ಅಪ್ರತೀಕ್ಷಿತವಾಗಿ ಲಭಿಸಿತು ಆ ಮಹಾತ್ಮರ ದರ್ಶನವು! ಅವರು ನನ್ನ ದುಃಖವನ್ನು ನೀಗಿದರು, ಇದಲ್ಲದೆ ನನ್ನ ಜೀವನವು ಶೋಭಾಯಮಾನವಾಗುವದೆಂದು ಅವರು ಭವಿಷ್ಯವನ್ನು ಕೂಡ ನುಡಿದಿರುತ್ತಾರೆ."

"ಅಕ್ಕಾ, ನಿನ್ನ ವಿಚಾರನೀತಿಯು ಮಾಯವಾಯಿತೇ? ಭವಿಷ್ಯವಾದಿಗಳ ನುಡಿಗಳನ್ನು ನೀನು ನಂಬುತ್ತಿರುವೆಯಾ?" ತನ್ನ ಕಣ್ಣುಗಳನ್ನು ಅಗಲಿಸಿ ತನ್ನ ಲಲಾಟದ

ಮೇಲೆ ತನ್ನ ಹಸ್ತವನ್ನಿಟ್ಟು ಅವನು ನುಡಿದನು. ಅವನ ಈ ನುಡಿಗಳು ಸನಿಸ್ಯಾದಿ ಗಳಲ್ಲಿ ಅವನಿಗೆ ಎಷ್ಟರಮಟ್ಟಿಗೆ ಅಪನಂಬಿಕೆಯಿದೆ, ಎಂಬುದನ್ನು ಸೂಚಿಸುತ್ತಿದ್ದುವು. ಅವನು ಬೈರಾಗಿಗಳು ನುಡಿಯುತ್ತಿರುವ ಭವಿಷ್ಯಗಳನ್ನು ನಂಬತಕ್ಕ ಒಬ್ಬ ವ್ಯಕ್ತಿ ಯಾಗಿರಲಿಲ್ಲ. ಅದಲ್ಲದೆ ಅವನು ಅಷ್ಟರಮಟ್ಟಿಗೆ ಭಾವನಾಪ್ರಧಾನಿಯೂ ಆಗಿರಲಿಲ್ಲ. ಪ್ರಯತ್ನವು ಮಾತ್ರ ಅವನಿಗೆ ಬೇಕಾದದ್ದು. "ಮಾಡಬೇಕಾದುದನ್ನು ಮಾಡು" ಅಂದರೆ 'ಆಗಬೇಕಾದುದು ಆಗುವುದು!' ಇದಲ್ಲವೆ ವಿಧಿವಿಲಾಸವೆಂಬುವು ಜೊಳ್ಳು ಮಾತುಗಳೆಂದಾಗಿದ್ದಿತು ಅವನ ಅಭಿಪ್ರಾಯವು. ಆದುದರಿಂದ ಪದ್ಮಳ ನುಡಿಗಳಲ್ಲಿ ಅವನಿಗೆ ವಿಶ್ವಾಸವು ಜನಿಸಲಿಲ್ಲ.

"ಮಾಧೂ, ಅವನು ಸಾಮಾನ್ಯ ಸನ್ಯಾಸಿಯಲ್ಲ, ಅವರ ಹೊಳೆಯುತ್ತಿರುವ ಕಣ್ಣುಗಳನ್ನು ನೋಡಿದೊಡನೆಯೇ ಯಾವುದೋ ಒಂದು ಬಗೆಯ ಪೂಜ್ಯ ಭಾವ ನೆಯು ಆ ಸನ್ಯಾಸಿಯನ್ನು ಕುರಿತು ಪ್ರೇಕ್ಷಕನ ಹೃದಯದಲ್ಲಿ ಆವಿರ್ಭವಿಸುತ್ತದೆ. ಅವರ ನುಡಿಗಳು ಎಷ್ಟು ಪ್ರಕ್ಷುಬ್ಧ ಹೃದಯವನ್ನಾದರೂ ಸಹಾ ತಣಿಸಬಲ್ಲವು. ಯಾವ ಆಗ್ರ ಹವೂ ಅವರಿಗಿರುವದಿಲ್ಲ. ಇಂಥ ಒಬ್ಬ ಮಹಾತ್ಮರು ನುಡಿದ ವಚನಗಳು ಅಸತ್ಯವಾಗ ಬಲ್ಲವೇ?"

"ಅದರಲ್ಲಿ ನನಗೆ ಹೆಚ್ಚಿನ ನಂಬಿಕೆಯಿಲ್ಲ; ಆ ವಿಶ್ವಾಸವು ನಿನ್ನ ಆತ್ಮಕ್ಕೆ ಶಾಂತಿ ಯನ್ನು ಪ್ರದಾನ ಮಾಡುತ್ತಿದ್ದರೆ ಅದನ್ನು ನಿವಾರಿಸಲು ನಾನು ಪ್ರಯತ್ನಿಸುವದಿಲ್ಲ. ನಿನಗೆ ಗ್ರಾಮಜೀವನವು ಸೊಗಸೆನಿಸಿತೆ?"

"ಅಪಾರವಾದ ಹರ್ಷವನ್ನು ನಾನು ಅಲ್ಲಿ ಉಂಡೆನು, ಅದಲ್ಲವೆ ಗ್ರಾಮಿಣ ಲಲ ನೆಯರ ಮಧ್ಯದಲ್ಲಿ ಜ್ಞಾನದ ಬೆಳಕನ್ನು ಬೀರಿ, ಅವರ ಸೇವೆಯನ್ನು ಮಾಡುವ ಮಹಾ ಭಾಗ್ಯವು ನನಗೆ ಸಿದ್ಧಿಸಿತು. ಜನಜೀವನದ ನೈಜ ಚರಿತ್ರವನ್ನು ಅವಲೋಕಿಸಿ ಅಲ್ಲಿ ನಾನು ಆನಂದಿಸಿದೆ. ನಗರ ಜೀವನಕ್ಕಿಂತ ಅದು ಎಷ್ಟು ಮಿಗಿಲಾದುದೆಂಬದನ್ನು ನೀನು ಬಲ್ಲೆಯಾ? ನಗರದಲ್ಲಿ ದುಡಿದು ಬಳಲುತ್ತಿರುವ ನಿನಗೆ ಗ್ರಾಮವಾಸವು ಶಾಂತಿ ಯನ್ನೂ, ಆಹ್ಲಾದವನ್ನೂ ನೀಡಬಲ್ಲುದು. ನಾನು ನಾಲ್ಕಾರು ದಿನಗಳಲ್ಲಿಯೇ ಹಿಂದಿ ರುಗಿ ಹೋಗುವಾಗ ನೀನೂ ನನ್ನೊಡನೆ ಬಾ. ಎರಡು ದಿನಗಳ ಪರ್ಯಂತ ಆ ಬಾಳಿನ ಸವಿಯನ್ನು ಅಲ್ಲಿ ನೀನು ಬಣ್ಣಿಸಬಹುದು."

"ನಗರ ಜೀವನದಲ್ಲಿ ಬೇಸರವಿಲ್ಲ ನನಗೆ. ಅದೆಷ್ಟು ಭಾರವಾಗಿದ್ದರೂ ಹೊರ ಬಲ್ಲೆನು. ಆಹ್ಲಾದಿಸಲು ಇದು ತಕ್ಕ ಸಮಯವಲ್ಲ; ಪ್ರಯತ್ನಿಸಬೇಕು. ಕಳೆದು ಕೊಂಡ ಶಕ್ತಿಯನ್ನು ಸಂಪಾದಿಸಬೇಕು! ಅಕ್ಕಾ, ಅದಿರಲಿ; ನೀನು ಹಿಂದಿರುಗಿದುದನ್ನು ವೀಕ್ಷಿಸಿ, ಹಳ್ಳಿಯ ಜೀವನದಲ್ಲಿ ನೀನು ಬೇಸತ್ತಿರಬಹುದೆಂದು ನಾನು ಬಗೆದಿದ್ದೆನು."

"ಮಾಧೂ, ನನ್ನ ಗೆಳತಿಯರನ್ನೂ ನಿನ್ನನ್ನೂ ನೋಡಿ ಮಾತಾಡಿಕೊಂಡು ಹೋಗಕೂಡದೆಂದು ನೀನು ಹೇಳುವೆಯಾ? ಇದಲ್ಲದೆ ಒಂದು ಆಮಂತ್ರಣವೂ ನನ್ನನ್ನು ನಗರಕ್ಕೆ ಆಗಮಿಸಲು ಪ್ರೇರಿಸಿತು."

"ಆ ಆಮಂತ್ರಣವು ಯಾವುದು?"

"ನಾಡದು ವೆಂಕಟರಾಮನ ಹುಟ್ಟಿದ ಹಬ್ಬವಲ್ಲವೇ!"

"ಹೌದು, ನನಗೂ ಆಮಂತ್ರಣವು ಬಂದಿದೆ. ಈಗಲೂ ವೆಂಕಟರಾಮನಲ್ಲಿ ನೀನು ಇಷ್ಟು ಮಮತೆಯನ್ನಿಟ್ಟಿರುವೆಯೆಂಬುದಾಗಿ ನಾನು ನೆನೆದಿರಲಿಲ್ಲ."

"ಅದೇಕೆ ಹಾಗೆ ಹೇಳುತ್ತಿರುವೆ? ಅವನ ಸ್ವಭಾವವು ನೀಚ ತರಗತಿಯದೇ ಆಗಿದ್ದರೂ, ಅವನು ನನ್ನ ದೊಡ್ಡ ತಂದೆಯ ಮಗನಲ್ಲವೇ? ಮಾಧೂ, ಅವನಲ್ಲದೆ ಈ ಜಗತ್ತಿನಲ್ಲಿ ಬಂಧುಗಳೆಂಬುವವರು ನನಗೆ ಬೇರೆ ಯಾರಿರುವರು?"

"ಅಕ್ಕಾ, ಅವನು ನಿನ್ನ ದೊಡ್ಡ ತಂದೆಯ ಮಗನಾದ ಮಾತ್ರದಿಂದ ಅವನ ಮೇಲೆ ಇಷ್ಟು ಅಪಾರವಾದ ಸ್ನೇಹವನ್ನಿಡುವುದು ವಿಹಿತವಲ್ಲ. ಒಂದು ವೇಳೆ ನಾನು ನುಡಿಯುತ್ತಿರುವುದು ನಿನಗೆ ಅಪ್ರಿಯವಾಗಿ ತೋರಬಹುದು. ವೆಂಕಟರಾಮನು ಹೃದಯವಿಲ್ಲದ ಒಂದು ಪಶುವು! ಲೋಕದಲ್ಲಿರುವ ಯಾವ ಶಕ್ತಿಗೂ ಅವನನ್ನು ಉನ್ನತಿಯ ಮಾರ್ಗದಲ್ಲಿ ಪ್ರವೇಶಿಸುವಂತೆ ಮಾಡಲು ಸಾಧ್ಯವಿಲ್ಲ. ಅವನನ್ನು ಕೆಸರಿನ ಹೊಂಡದಿಂದ ಎತ್ತಲು ನಾನು ಪ್ರಯತ್ನಿಸಿದ ಹಾಗೆ ಇನ್ನಾರೂ ದುಡಿದಿರಲಾರರು; ಆದರೆ ನನ್ನ ಆ ಪ್ರಯತ್ನವು ವಿಫಲವಾಯಿತು. ಆ ನೀಚಾತ್ಮನನ್ನು ಅವನ ಪಾಡಿಗೆ ಬಿಟ್ಟು ದೂರವಿರುವುದೇ ಲೇಸು. ಹಾವಿಗೆ ಹಾಲನ್ನೆರಿಯುವುದರಿಂದ ಯಾವ ಪ್ರಯೋಜನವಿದೆ? ಅವನಿಗೆ ಸಹಾಯವನ್ನು ಮಾಡುತ್ತಿರುವ ನಿನಗೆ ಎರಡನ್ನು ಬಗೆಯಲು ಹಿಂಜರಿಯುವವನು ಅವನಲ್ಲ. ನಿನ್ನ ಬಾಳಿನಲ್ಲಿ ವಿಷವನ್ನು ಬಿತ್ತುವ ಕೆಲಸದಲ್ಲಿ ಅವನಿಗೂ ಒಂದು ಪಾಲಿದೆಂಬುದಾಗಿ ನಾನು ಊಹಿಸಿದ್ದೇನೆ."

"ಆದರೆ ಮಾಧೂ, ಸ್ನೇಹವು ಅವನನ್ನು ಪರಿಶುದ್ಧನನ್ನಾಗಿ ಮಾಡಬಹುದು. ಪಾಪಿಗಳಿಗೆ ಕರುಣೆಯನ್ನು ತೋರಬೇಕೆಂಬ ತತ್ವವು ನಿನ್ನ ನೆನಪಿಗೆ ಬರುವುದಿಲ್ಲವೇ? ಸ್ನೇಹಪೂರ್ಣಳಾಗಿ ಅವನ ಅಭ್ಯುದಯವನ್ನು ಕಾಂಕ್ಷಿಸಿ, ನಾನು ಮಾಡಬೇಕಾದುದನ್ನು ಮಾಡುತ್ತೇನೆ ಈ ಜಗತ್ತಿನಲ್ಲಿ ನಾವೆಷ್ಟರವರು ಈ ನರಕೀಟಕಗಳನ್ನು ಕಾಪಾಡಲು? ಶಕ್ತನು ದಯಾನಿಧಿಯಾದ ಆ ಪರಂಜ್ಯೋತಿಯೇ!"

"ಅಕ್ಕ, ನಿನ್ನ ಸರಳತೆಯನ್ನೂ ನಿರ್ವಂಚನೆಯನ್ನೂ ನೋಡಿ ನನಗೆ ಸಂತೋಷವಾಗುತ್ತದೆ."

"ವೆಂಕಟರಾಮನ ಹುಟ್ಟಿದ ಹಬ್ಬಕ್ಕೆ ನೀನು ಬರುವದಿಲ್ಲವೇ?" ಮೇಜದ ಮೇಲೆ ಬಿದ್ದಿರುವ ಒಂದು ಪತ್ರಿಕೆಯ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸುತ್ತ ಪದ್ಮಳು ಪ್ರಶ್ನಿಸಿದಳು.

"ಇದು ವರೆಗೆ ತೆರಳಬಾರದೆಂದಿದ್ದೆನು; ಆದರೆ ಈಗ ನಾನು ಆ ಅಭಿಪ್ರಾಯವನ್ನು ಪಲ್ಲಟಿಸಿದೆನು." "ಅದೇಕೆ?"

"ವೆಂಕಟರಾಮನು ಪಾಪಿಯಾಗಿದ್ದರೂ ಅವನ ಹುಟ್ಟಿದ ಹಬ್ಬದುತ್ಸವದಲ್ಲಿ ಭಾಗವನ್ನು ವಹಿಸಿ ಅವನ ಅಭ್ಯುದಯಕ್ಕಾಗಿ ಪ್ರಾರ್ಥಿಸುವದು ವಿಹಿತವಲ್ಲವೇ?"

"ಅದು ನಿಜ; ಹಾಗಾದರೆ ನಾಡಿದ್ದು ನಾವಿಬ್ಬರೂ ಒಟ್ಟಿಗೆ ಅವನ ವಸತಿಗೆ ಗಮಿಸೋಣ."

"ಹಾಗೆಯೇ ಆಗಲಿ! ನಾನು ಹೋಗುತ್ತೇನೆ!" ಎಂದು ನುಡಿದು, ಮಾಧವನು ತನ್ನ ಆಸನವನ್ನು ತ್ಯಜಿಸಿ ಹೊರಗೆ ತೆರಳಿದನು.

ಆ ದಿನವು ಬಂದಿತು. ವೆಂಕಟರಾಮನ ನಿಲಯಕ್ಕೆ ಪದ್ಮಳೂ ಮಾಧವನೂ ತೆರಳಿದರು. ಅವರಿಬ್ಬರನ್ನೂ ವೆಂಕಟರಾಮನು ಆದರಪೂರ್ವಕವಾಗಿ ಸ್ವಾಗತಿಸಿದನು. ವಿನಯಪೂರ್ವಕವಾಗಿ ಪದ್ಮಳ ಕುಶಲ ವಾರ್ತೆಗಳನ್ನು ಕೇಳಿ ತಿಳಿದುಕೊಂಡನು. ಅವನ ಆ ದಿನದ ವರ್ತನೆಯನ್ನು ನೋಡಿದರೆ, ಅವನು ಪರಿಪೂರ್ಣವಾಗಿ ಪರಿವರ್ತನೆಯನ್ನು ಹೊಂದಿರುವನೆಂದು ತೋರುತ್ತಿದ್ದಿತು. ಅಗೌರವದ ನುಡಿಗಳಾಗಲೀ ಮನಸ್ಸಿನಲ್ಲಿ ಹೇಸಿಗೆಯನ್ನು ಹುಟ್ಟಿಸುವ ಕೃತ್ಯಗಳಾಗಲೀ ಆ ದಿನ ಅವನನ್ನು ತಿಲಾಂಶದಷ್ಟೂ ಸ್ಪರ್ಶಿಸಿರಲಿಲ್ಲ. ಈ ನಡತೆಯನ್ನು ನೋಡಲು ಮಾಧವನಿಗೆ ಸೋಜಿಗವಾಯಿತು! ಅವನು ತೀಕ್ಷ್ಣವಾದ ತನ್ನ ದೃಷ್ಟಿಯನ್ನು ಬೀರಿ, ಅವನ ಕಣ್ಣುಗಳಲ್ಲಿ ಹೊಳೆಯುತ್ತಿರುವ ಕಿಡಿಗಳಿಂದ ಅವನ ಹೃದಯದಲ್ಲಿರುವುದೇನು? ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದನು. ವೆಂಕಟರಾಮನ ಆ ದಿನದ ಸ್ವಭಾವವು ಮಾಧವನಿಗೆ ಒಂದು ರಹಸ್ಯವಾಗಿ ಕಂಡಿತು. ಅವನ ಮುಖದಲ್ಲಿ ಮಿನುಗುತ್ತಿರುವ ಮಂದಸ್ಮಿತದ ಹಿಂದೆ ಯಾವದೋ ಒಂದು ಪಾಪವಿಚಾರವು ಕರಾಳ ಬಣ್ಣವನ್ನು ತಾಳಿ ನಿಂತಿದೆ, ಎಂಬುದಾಗಿ ಮಾಧವನು ಊಹಿಸಿದನು. ವೆಂಕಟರಾಮನ ವರ್ತನೆಯು ಅವನಿಗೆ ಒಂದು ನಟನೆಯಂತೆ ತೋರಿತು, ಆದರೆ ಅದು ಪದ್ಮಳನ್ನು ಆಹ್ಲಾದಗೊಳಿಸಿತು. ಅದು ವೆಂಕಟರಾಮನು ಸನ್ಮಾರ್ಗದಲ್ಲಿ ಪ್ರವೇಶಿಸುತ್ತಿರುವುದರ ಲಾಂಛನವೆಂದು ಅವಳು ಗ್ರಹಿಸಿದಳು. ತನ್ನ ಪ್ರಯತ್ನಗಳು ಯಶಸ್ವಿಯಾದುವೆಂದು ಅವಳು ಬಗೆದಳು.

ತನ್ನ ಗೆಳತಿಯ ದರ್ಶನವನ್ನು ಪಡೆದುದರಿಂದ ಸರೋಜಳ ಮುಖವುಲ್ಲಿಗೆಯು ಅರಳಿತು. ಅವಳು ಪದ್ಮಳನ್ನು ಆದರಿಸಿ ಕುಶಲವಾರ್ತೆಗಳನ್ನು ತಿಳಿದುಕೊಂಡಳು. ಅವಳಿಗೆ ಪದ್ಮಳಲ್ಲದೆ ಇತರರಾರೂ ಆಪ್ತರಿರಲಿಲ್ಲವೆಂಬುದನ್ನು ವಾಚಕರು ತಿಳಿದುಕೊಂಡಿರಬಹುದು. ಅವಳ ಪತಿಯು ನೀಚಮಾರ್ಗಾವಲಂಬಿಯಾದುವರಿಂದ, ಅವಳ ಆತ್ಮಕ್ಕೆ ಶಾಂತಿ ಸುಖ ಚೈತನ್ಯಗಳು ಲಭಿಸಿರಲಿಲ್ಲ. ಪದ್ಮಳು ಗ್ರಾಮವಾಸವನ್ನು ಕೈಗೊಂಡ ಅನಂತರ ಸರೋಜಳ ಜೀವನದಲ್ಲಿ ಅದುವರೆಗೆ ತೋರುತ್ತಿದ್ದ ಅಲ್ಪಸ್ವಲ್ಪ ಹರ್ಷದ ಬಿಸಿಲೂ ಮಾಯವಾಗಿ, ಗಾಢವಾದ ಯಾಮಿನಿಯು ಅವಳ ಬಾಳಿನಲ್ಲಿ ವ್ಯಾಪಿಸಿತು. ಕೆಲವು ತಿಂಗಳ ಅನಂತರ ತನ್ನ ಗೆಳತಿಯ ದರ್ಶನವು ಲಭಿಸಲು, ಕಂದಿದ್ದ ಅವಳ ವದನದಾವರೆಯು ಅರಳಿದುದರಲ್ಲಿ ಆಶ್ಚರ್ಯವಿಲ್ಲ.

"ಪದ್ಮಾ, ಎಷ್ಟೋ ದಿನಗಳಿಂದ ನಾನು ನಿನ್ನ ದಾರಿಯನ್ನು ಎದಿರು ನೋಡುತ್ತಲಿದ್ದೆನು. ಈಗಲಾದರೂ ಈ ಪಾಪಿಯನ್ನು ಬಂದು ಕಾಣುವ ಔದಾರ್ಯವು ನಿನಗುಂಟಾದುದಕ್ಕೆ ನಾನು ಸಂತೋಷಿಸುತ್ತೇನೆ!"

"ಸರೋಜ, ಈ ಮಂಗಳ ದಿವಸದಲ್ಲಿ-ನಿನ್ನ ಸ್ವಾಮಿಯ ಹುಟ್ಟಿದ ಹಬ್ಬವನ್ನು ಆಚರಿಸುತ್ತಿರುವ ಈ ದಿನದಲ್ಲಿ-ಇಂಥ ಅಭದ್ರವಾದ ನುಡಿಗಳನ್ನು ಆಡುತ್ತಿರುವದು ಶ್ರೇಯಸ್ಕರವಲ್ಲವು. ನಾನು ಆತ್ಮಶಾಂತಿಯನ್ನು ಪಡೆಯಲು ಗ್ರಾಮವಾಸವನ್ನು ಕೈಕೊಂಡೆನು. ನೀನು ನಿನ್ನ ಪತಿಯ ಸೇವೆಯಿಂದ ಬಿಸಿಲನ್ನು ಹೊಂದು! ನಿನ್ನ ಪುಣ್ಯವು ಅವನನ್ನು ರಕ್ಷಿಸಲಿ!"

"ಪದ್ಮಾ, ಎಷ್ಟರವರೆಗೆ ಜೀವಿಸಲು ಸಾಧ್ಯವು ಈ ಆಶೆಯಿಂದ? ಅಂತ್ಯವಿಲ್ಲದ ದುಃಖದ ಕಡಲಿನಲ್ಲಿ ದಡವನ್ನು ಕಾಣದೆ ಮುಳುಗೇಳುತ್ತಿರುವಾಗ, ಹೆಣ್ಣು ಹೃದಯವು ಈ ಆಶೆಯಿಂದ ನೆಲೆ ನಿಲ್ಲಲು ಸಾಧ್ಯವೇ? ಈ ಆಶೆಗೆ ಒಂದು ಮಿತಿಯಿಲ್ಲವೇ?"

"ನಿನ್ನ ದುಃಖವನ್ನು ವೀಕ್ಷಿಸುವಾಗ ನನಗೆ ದುಃಖವಾಗುವುದಿಲ್ಲವೆಂದು ಬಗೆದಿರುವೆಯಾ? ಸತ್ಯದಲ್ಲಿ ನೀನು ವಿಶ್ವಾಸವಿಡು"

ಪದ್ಮಳು ಈ ರೀತಿಯಲ್ಲಿ ಸರೋಜಳನ್ನು ಸಂತೈಸುತ್ತಿರುವಾಗ, ಒಳಮನೆಯಲ್ಲಿದ್ದ ವೆಂಕಟರಾಮನು ಹಜಾರಕ್ಕೆ ಬಂದನು. ಸರೋಜಳು ತನ್ನ ಸಂಭಾಷಣೆಯನ್ನು ನಿಲ್ಲಿಸಿ ಒಳಮನೆಗೆ ತೆರಳಿದಳು. ವೆಂಕಟರಾಮನು ಹೊರಗೆ ಉರಿಯುತ್ತಿರುವ ಬಿಸಿಲನ್ನು ವೀಕ್ಷಿಸುತ್ತ ನುಡಿದನು. "ಅಕ್ಕ, ಎಷ್ಟು ತೀವ್ರವಾದ ಬಿಸಿಲು! ಈ ಬಿಸಿಲಿನಲ್ಲಿ ನಡೆದು ಬಂದ ನೀವಿಬ್ಬರೂ ಬಹಳ ಬಳಲಿರಬಹುದಲ್ಲವೇ?"

"ಹೌದು ವೆಂಕಟ, ಬಿಸಿಲು ಬಹಳ ತೀವ್ರವಾಗಿದೆ. ನನಗಂತೂ ಈ ಬಿಸಿಲಿನಲ್ಲಿ ನಡೆದು ಬಂದುದರಿಂದ ಬಹಳ ಬಾಯಾರಿಕೆಯಾಗುತ್ತಿರುವುದು."

"ಹಾಗಾದರೆ ಸ್ವಲ್ಪ ಲಿಂಬೇಹಣ್ಣಿನ ಪಾನಕವನ್ನು ಮಾಡಿಕೊಡಲಿ?" ಅವಳ ಮೋರೆಯ ಕಡೆಗೆ ತನ್ನ ದೃಷ್ಟಿಯನ್ನು ಚೆಲ್ಲಿ ವೆಂಕಟರಾಮನು ಅಂದನು.

"ಹೌದು, ಸ್ವಲ್ಪ ಶೀತಲವಾದ ಲಿಂಬೇಹಣ್ಣಿನ ಪಾನಕವು ಸಿಗುವುದಾದರೆ ಒಳ್ಳೆಯದು"

"ಈಗಲೇ ಲಿಂಬೇಹಣ್ಣಿನ ಪಾನಕವನ್ನು ಸಿದ್ಧಪಡಿಸಿ ತರುತ್ತೇನೆ." ಎಂದೆಂದು ಅವನು ತನ್ನ ಮೋರೆಯನ್ನು ಮಾಧವನ ಕಡೆಗೆ ತಿರುಗಿಸಿ "ಮಾಧವರಾಯರೇ, ನೀವು ಸ್ಮೋಕು ಮಾಡುವ ಹವ್ಯಾಸಕ್ಕೆ ಬಿದ್ದ ಜನರಲ್ಲವೇ? ತಮಗೆ ಸಿಗರೇಟನ್ನು ಕೊಡಲು ನಾನು ಮರೆತಿದ್ದೆನು!"

ವೆಂಕಟರಾಮನು ಹತ್ತಿರಿದ್ದ ಕೋಣೆಯೊಳಗೆ ಪ್ರವೇಶಿಸಿದನು. ಮಾಧವನು ತನ್ನ ಒಂದು ಓರೆ ನೋಟವನ್ನು ಕೋಣೆಯೊಳಕ್ಕೆ ಬೀರಿ ಅದರೊಳಗೆ ವೆಂಕಟರಾಮನು ಮಾಡುತ್ತಿರುವುದೇನೆಂಬುದನ್ನು ತಿಳಿದುಕೊಂಡನು, ಆದರೆ ತಾನು ಮಾಡುತ್ತಿರುವ ಕೆಲಸವನ್ನು ಮಾಧವನು ನಿರೀಕ್ಷಿಸುತ್ತಲಿರುವನೆಂಬದು ವೆಂಕಟರಾಮನು ಸಂದೇಹಪಡದಿರಲು, ತನ್ನ ದೃಷ್ಟಿಯನ್ನು ಬೇರೊಂದು ಬದಿಗೆ ಚೆಲ್ಲಿದಂತೆ ಮಾಧವನು ನಟಿಸಿದನು, ಆದರೆ ಅವನು ಕೋಣೆಯೊಳಗೆ ಮಾಡುತ್ತಿರುವ ಕೃತ್ಯಗಳನ್ನು ಅವಲೋಕಿಸಿ ತಿಳಿದುಕೊಳ್ಳುತ್ತಿದ್ದನು. ಆ ಕೊರಡಿಯೊಳಗಿರುವ ಒಂದು ಸಂದೂಕದಿಂದ

ಒಂದು ಹಳದೀವರ್ಣದ ಪೊಟ್ಟಣವನ್ನು ತೆಗೆದು ತನ್ನ ಜೇಬಿನಲ್ಲಿ ಹಾಕುತ್ತಿರುವುದನ್ನು ಮಾಧವನು ನಿರೀಕ್ಷಿಸಿದನು. ಇನ್ನೊಂದು ನಿಮಿಷದಲ್ಲಿಯೇ ವೆಂಕಟರಾಮನು ಸಿಗರೇಟು ಪ್ಯಾಕಿನೊಡನೆ ಹಜಾರಕ್ಕೆ ಬಂದನು. ಅವನು ಕೊಟ್ಟ ಸಿಗರೇಟು ಪ್ಯಾಕೆಟ್ಟನ್ನು ಮಾಧವನು ಸ್ವೀಕರಿಸಿದನು. ಮನೆಗೆ ಬಂದ ಅತಿಥಿಗಳ ಪಿಪಾಸೆಯನ್ನು ಪರಿಹರಿಸಲು ಪಾನಕವನ್ನು ಸಿದ್ಧಪಡಿಸುವುದಕ್ಕಾಗಿ ವೆಂಕಟರಾಮನು ಮನೆಯೊಗೆ ತೆರಳಿದನು. ಮಾಧವನು ಒಂದು ಸಿಗರೇಟನ್ನು ತೆಗೆದು ಅದನ್ನು ಹತ್ತಿಸಿ ಹೊಗೆಯನ್ನು ಸೇದುತ್ತ ವಿಚಾರತಲ್ಲೀನನಾದನು. ಅವನು ತನ್ನ ಮನಸ್ಸಿನಲ್ಲಿಯೇ ವೆಂಕಟರಾಮನು ಸಂದೂಕದಿಂದ ತೆಗೆದ ಹಳದೀ ಪೊಟ್ಟಣವೇನೆಂದು ಚಿಂತಿಸಿದನು. ಆ ಹಳದೀಪೊಟ್ಟಣದಲ್ಲಿರುವದೇನು? ಅವನು ಈ ಸಂದರ್ಭದಲ್ಲಿ ಅದನ್ನು ತೆಗೆದುದೇಕೆ? ಯಾವ ಉದ್ದೇಶವು ಅವನು ಅದನ್ನು ಸಂದೂಕದಿಂದ ತೆಗೆಯಲು ಪ್ರೇರಿಸಿರಬಹುದು? ಎಂಬಿತ್ಯಾದಿ ವಿವಿಧ ವಿಚಾರಗಳು ಮಾಧವನ ಮನೋಮಂಡಲದಲ್ಲಿ ವ್ಯಾಪಿಸಿದುವು. ವೆಂಕಟರಾಮನು ಹೀನತರಗತಿಯ ಮನುಷ್ಯನಾಗಿರುವುದರಿಂದ, ಅವನು ಯಾವ ಹೀನಕೃತ್ಯವನ್ನು ಮಾಡಲೂ ಹಿಂಜರಿಯನು, ಎಂಬುದು ಮಾಧವನಿಗೆ ವೇದ್ಯವಾದ ಸಂಗತಿಯಾಗಿದ್ದಿತು. ಹಿಂದೆ ಹೇಳಿದಂತೆ ವೆಂಕಟರಾಮನು ಅನ್ಯರಿಗೆ ಕೇಡು ಬಗೆಯುವದಲ್ಲದೆ, ಇನ್ನಾವ ತತ್ವವೂ ಇಲ್ಲವೆಂಬುದನ್ನು ಮಾಧವನು ಅರಿತಿದ್ದನು.

ಐದು ನಿಮಿಷಗಳು ಗತಿಸುವುದರೊಳಗಾಗಿ ಎರಡು ಗ್ಲಾಸುಗಳಲ್ಲಿ ಪಾನಕವನ್ನು ತುಂಬಿಸಿಕೊಂಡು ವೆಂಕಟರಾಮನು ಹಜಾರದೊಳಗೆ ಪ್ರವೇಶಿಸಿದನು. ಅವನು ಪಾನೀಯವನ್ನು ಮೇಜದ ಮೇಲೆ ಮಡುಗಿದನು. ಮಾಧವನು ವೆಂಕಟರಾಮನ ಮೋರೆಯನ್ನು ನೋಡುತ್ತಾ "ನೀವು ಪಾನೀಯವನ್ನು ತೆಗೆದುಕೊಳ್ಳುವುದಿಲ್ಲವೇ?" ಎಂದನು.

"ನನಗೆ ದಾಹವಿಲ್ಲ."

"ಆದರೂ ನಮಗೋಸುಗ ನೀವೂ ಸ್ವಲ್ಪ ಸೇವಿಸುವಿರಾಗಿ ಬಗೆಯುತ್ತೇನೆ."

ವೆಂಕಟರಾಮನು ಈ ಮೊದಲೇ ತಂದ ಎರಡು ಗ್ಲಾಸುಗಳಲ್ಲಿ ಒಂದನ್ನು ಪದ್ಮಳ ಮುಂದೆಯೂ ಇನ್ನೊಂದನ್ನು ಮಾಧವನ ಮುಂದೆಯೂ ಮಡುಗುವುದರಲ್ಲಿ ವಿಶೇಷ ಶ್ರದ್ಧೆಯನ್ನು ಪತಿಸಿದ್ದನು. ಆ ರೀತಿ ಶ್ರದ್ಧೆಯನ್ನು ವತಿಸಿದುದು ಯಾವುದೋ ಒಂದು ಉದ್ದೇಶದಿಂದ ವೆಂಕಟರಾಮನು ವರ್ತಿಸಿರುವನೆಂಬುದನ್ನು ಮಾಧವನು ತಿಳಿದನು. ವೆಂಕಟರಾಮನಲ್ಲಿ ಪರಿಭ್ರಮವು ರೂಪಗೊಂಡಿತ್ತು. ಅಕಸ್ಮಿಕವಾಗಿ ಈ ರೀತಿ ಮೂಡಿದ ಭಾವವ್ಯತ್ಯಾಸವು ಯಾವುದೋ ಒಂದು ದುಶ್ಚಿಂತನೆಯ ಪರಿಣಾಮವೆಂದು ಆ ಚಾಣಾಕ್ಷಮತಿಯು ಗ್ರಹಿಸಿದನು. ಇತ್ತ ಮಾಧವನ ನಿರ್ಬಂಧದಿಂದ ವೆಂಕಟರಾಮನು ಪಾನಕವನ್ನು ಕುಡಿಯಬೇಕಾಗಿ ಬಂದಿತು. ಅಲ್ಲಿ ಎರಡು ಗ್ಲಾಸುಗಳಲ್ಲಿ ಮಾತ್ರ ಪಾನಕವಿದ್ದುದರಿಂದ, ಅವನ್ನು ಒಳಮನೆಯೊಳಗಿರುವ ತನ್ನ ಮಡದಿಯನ್ನು ಕೂಗಿ ಹೇಳಿದನು. "ಸರೋಜ, ಇನ್ನೊಂದು ಗ್ಲಾಸು ಪಾನಕವನ್ನು ತೆಗೆದುಕೊಂಡು ಬಾ!"

ಸರೋಜಳು ಇನ್ನೊಂದು ಲೋಟದಲ್ಲಿ ಪಾನಕವನ್ನು ತಂದು ಮೇಜದ ಮೇಲೆ ಮಡುಗಿದಳು. ವೆಂಕಟರಾಮನು ಆ ಗ್ಲಾಸನ್ನು ಕುಡಿಯುವದಕ್ಕಾಗಿ ಕೈಯಲ್ಲಿ ಹಿಡಿದುಕೊಂಡನು; ಆದರೆ ಮಾಧವನು ತನ್ನ ಮುಂದೆ ಇರುವ ಪಾತ್ರವನ್ನು ವೀಕ್ಷಿಸುತ್ತಲಿದ್ದನು. ಮಾಧವನು ಪಾನೀಯವನ್ನು ಕುಡಿಯದಿರಲು ಪದ್ಮಳು ಸಹಾ ಸುಮ್ಮನಿದ್ದಳು. ಮನೆಗೆ ಬಂದ ಅತಿಥಿಗಳ ಈ ವರ್ತನೆಯನ್ನು ನೋಡಿ, ವೆಂಕಟರಾಮನು ಹಜಾರದಲ್ಲಿ ವ್ಯಾಪಿಸಿದ್ದ ಮೌನತೆಯ ವಾತಾವರಣವನ್ನು ಭಂಜಿಸಿದನು: "ಅಕ್ಕಾ, ಏನು ನೋಡುತ್ತಿರುವೆ? ಬಹಳ ದಾಹವಾಗುತ್ತಿದೆ ಎಂದು ನೀನು ಹೇಳಿದೆಯಲ್ಲವೇ? ಮಾಧವರಾಯರೇ, ಈ ಬಡವನ ಸೇವೆಯನ್ನು ಸ್ವೀಕರಿಸಿ, ನಿಮ್ಮ ಪಿಪಾಸೆಯನ್ನು ಶಾಂತಗೊಳಿಸಿರಿ!"

ವೆಂಕಟರಾಮನ ಈ ನುಡಿಗಳನ್ನು ಆಶ್ರಾವಿಸುತ್ತಲೆ ಮಾಧವನು ಗೋಡೆಯ ಮೇಲಿರುವ ಚಿತ್ರದಿಂದ ತನ್ನ ಹೃದಯವನ್ನು ಪ್ರತಿಚಲಿಸಿ, ಬೀದಿಯ ಕಡೆಗೆ ಬೀರಿದನು. ಬೀದಿಯಲ್ಲಿ ವಿವಿಧ ವರ್ಣದ ಉಣ್ಣೆಯ ನೂಲಿನಿಂದ ಪೋಣಿಸಿದ ಮನೋಹರ ಹಾರಗಳನ್ನು ವಿಕ್ರಯಿಸಲು ತೆರಳುತ್ತಿರುವ ಒಬ್ಬ ಬಾಲಕನನ್ನು ಅವನು ದರ್ಶಿಸಿದನು. ಇದುವರೆಗೆ ತಾನು ಅವಲಂಬಿಸಿದ್ದ ಮೌನವನ್ನು ಪರಿತ್ಯಜಿಸಿ, ಅವನು ಮಾತಾಡಿದನು: "ಬೀದಿಯಲ್ಲಿ ವಿಕ್ರಯಿಸುವುದಕ್ಕಾಗಿ ಆ ಹುಡುಗನು ಒಯ್ಯುತ್ತಿರುವ ಆ ಹಾರಗಳು ಎಷ್ಟು ಮನೋಹರವಾಗಿವೆ!"

ಈ ನುಡಿಗಳನ್ನು ಆಶ್ರಾವಿಸುತ್ತಲೆ ಹಜಾರದಲ್ಲಿದ್ದವರೆಲ್ಲರೂ ತಮ್ಮ ನೋಟಗಳನ್ನು ಬೀದಿಯ ಕಡೆಗೆ ಚಲ್ಲಿದರು. ನಿಜವಾಗಿಯೂ ಆ ಹಾರಗಳು ಸುಂದರವಾಗಿದ್ದುದರಿಂದ ಆ ದೃಶ್ಯವು ಅವರೆಲ್ಲರ ಮನಸ್ಸುಗಳನ್ನು ಆಕರ್ಷಿಸಿತು. ವೆಂಕಟರಾಮನಾದರೂ ತಾನು ಕೈಯಲ್ಲಿ ಹಿಡಿದಿರುವ ಗ್ಲಾಸನ್ನು ಮೇಜದ ಮೇಲೆ ಇಟ್ಟು, ಬೀದಿಯ ಕಡೆಗೆ ನೋಡಿದನು. ವೆಂಕಟರಾಮನು ತಾನು ಹಿಡಿದಿದ್ದ ಗ್ಲಾಸನ್ನು ಮೇಜದ ಮೇಲೆ ಮಡುಗಿದೊಡನೆಯೇ ಮಾಧವನು ಆ ಗ್ಲಾಸನ್ನು ತೆಗೆದು ಪದ್ಮಳ ಮುಂದೆಯೂ ಪದ್ಮಳ ಮುಂದಿರುವ ಗ್ಲಾಸನ್ನು ವೆಂಕಟರಾಮನ ಮುಂದೆಯೂ ಮಡುಗಿದನು. ಅವನು ಈ ರೀತಿ ಪಾತ್ರೆಗಳ ಸ್ಥಾನಗಳನ್ನು ಪಲ್ಲಟಿಸಿದುದು ಇತರರ ದೃಷ್ಟಿಗೆ ಕಾಣಿಸಲಿಲ್ಲ; ಏಕೆಂದರೆ, ಅವರೆಲ್ಲರ ನೋಟಗಳು ಬೀದಿಯ ಮೇಲೆ ಪತಿಸಿದ್ದುವು.

ಕೆಲವು ನಿಮಿಷಗಳು ಗತಿಸಲು, ಅವರು ತಮ್ಮ ದೃಷ್ಟಿಗಳನ್ನು ಬೀದಿಯಿಂದ ತಿರುಗಿಸಿದರು. ಮಾಧವನು ತಾನು ಯಾವುದನ್ನೂ ತಿಳಿಯದವನಂತೆ ನಟಿಸುತ್ತಾ ನುಡಿದನು. "ಆ ಹಾರಗಳು ಚೆಲುವಾಗಿಲ್ಲವೇ?"

"ಅತ್ಯಂತ ಸುಂದರವಾಗಿವೆ; ಅವುಗಳನ್ನು ಪೋಣಿಸಿದವನು ನಿಜವಾಗಿಯೂ ಒಬ್ಬ ಕಲೋಪಾಸಕನಿರುತ್ತಾನೆ." ಹಾರಗಳ ಸೊಬಗಿಗೆ ಮನಸೋತ ಪದ್ಮಳು ಅಂದಳು.

"ಪಾನಕವು ಎಷ್ಟೋ ಹೊತ್ತಿನಿಂದ ನಿಮ್ಮ ಪಿಪಾಸೆಯನ್ನು ಶಾಂತಗೊಳಿಸುವುದಕ್ಕಾಗಿ ಕಾದಿರುತ್ತದೆ!" ಎಂದನು ವೆಂಕಟರಾಮನು.

"ಹೌದು, ಆ ಸಂಗತಿಯನ್ನೇ ಮರೆತಿದ್ದೆವು. ಅಕ್ಕಾ, ಪದ್ಮಾ ನೀನು ಬಿಸಿಲಿನಲ್ಲಿ ನಡೆದು ಬಂದುದರಿಂದ ಬಹಳ ದಣಿದಿರಬಹುದು. ವೆಂಕಟರಾಮನ ಔದಾರ್ಯದಿಂದ ನಮಗಿಂದು ಈ ಪಾನಕವು ದೊರೆತಿದೆ. ನಮ್ಮ ಪಿಪಾಸೆಯನ್ನು ಪರಿಹರಿಸಿಕೊಳ್ಳೋಣ.'

ಮಾಧವನ ನುಡಿಯನ್ನು ಕೇಳುತ್ತಲೆ ಪದ್ಮಳು ತನ್ನ ಮುಂದಿರುವ ಗ್ಲಾಸನ್ನು ತೆಗೆದುಕೊಂಡಳು. ಮಾಧವನೂ ಆ ಪಾನೀಯದಿಂದ ತನ್ನ ಬಾಯಾರಿಕೆಯನ್ನು ಪರಿಹರಿಸಿಕೊಂಡನು. ವೆಂಕಟರಾಮನಾದರೂ ತನ್ನ ಮುಂದಿರುವ ಗ್ಲಾಸನ್ನು ತೆಗೆದುಕೊಂಡು ಪಾನೀಯವನ್ನು ಕುಡಿಯತೊಡಗಿದನು.

ಪಾನಕ ಪಾನದಿಂದ ಅವರು ತಮ್ಮ ದಣುವನ್ನು ಆರಿಸಿಕೊಂಡರು. ಪದ್ಮಳನ್ನು ಆವರಿಸಿದ್ದ ಬಳಲಿಕೆಯು ಅವಳನ್ನು ತ್ಯಜಿಸಿ ಹೊರಟು ಹೋಯಿತು. ಒಂದೊಂದು ವಿನೋದ ಸಂಗತಿಗಳನ್ನು ಕುರಿತು ಅವರು ಮಾತಾಡುತ್ತ ಉಲ್ಲಾಸದಲ್ಲಿ ತಮ್ಮ ಸಮಯವನ್ನು ಕಳೆದರು. ಮಧ್ಯಾಹ್ನದ ಭೋಜನವು ಬಹು ಸಡಗರದಿಂದ ಜರುಗಿತು. ವೆಂಕಟರಾಮನು ತನ್ನ ನಿಲಯಕ್ಕೆ ಬಂದ ಅತಿಥಿಗಳನ್ನು ಸತ್ಕರಿಸಲು ಹಿಂದೆಗೆಯಲಿಲ್ಲ. ಸಂಜೆಯಾಗಲು ಪದ್ಮಳು ತನ್ನ ನಿಲಯಕ್ಕೆ ಹೊರಟಳು. ಪ್ರೇಮಪೂರ್ಣ ನುಡಿಗಳಲ್ಲಿ ಸನ್ಮಾರ್ಗವನ್ನು ಅವಲಂಬಿಸಬೇಕೆಂದು ವೆಂಕಟರಾಮನಿಗೆ ಅವಳು ಉಪದೇಶಿಸಿದಳು; ಶೋಕಭರಿತೆಯಾದ ಸರೋಜಳನ್ನು ಸಂತೈಸಿದಳು.

ವೆಂಕಟರಾಮನ ಹುಟ್ಟಿದ ಹಬ್ಬವು ಕಳೆದು ಮೂರು ದಿನಗಳು ಗತಿಸಿದುವು. ಒಂದೆರಡು ವಾರಗಳ ಪರ್ಯಂತ ನಗರದಲ್ಲಿಯೇ ವಾಸಿಸಬೇಕೆಂದು ಪದ್ಮಳು ನಿರ್ಧರಿಸಿದುದರಿಂದ, ಅವಳಿನ್ನೂ ಹಳ್ಳಿಗೆ ನಿರ್ಗಮಿಸಿರಲಿಲ್ಲ. ತನ್ನ ಗೃಹದಲ್ಲಿಯೇ ಇದ್ದು ಯಾವುದೋ ಒಂದು ಆಧ್ಯಾತ್ಮಿಕ ಗ್ರಂಥವನ್ನು ಪಠಿಸುವದರಲ್ಲಿ ಅವಳು ಮರುದಿನದ ಸಂಜೆಯನ್ನು ವಿನಯೋಗಿಸಿದಳು. ಪತಿವಿಯೋಗಾನಂತರ ಅವಳ ಹೃದಯದಲ್ಲಿ ಭೌತಿಕಜೀವನವನ್ನು ಕುರಿತು ವಿರಕ್ತಿಯುಂಟಾದ ಸಂಗತಿಯನ್ನು ವಾಚಕರು ತಿಳಿದುಕೊಂಡಿರಬಹುದು. ಅವಳು ತನ್ನ ಸಮಯವನ್ನು ತನ್ನ ನಾಡಿನ ಅಕ್ಕ-ತಂಗಿಯರ ಜ್ಞಾನಾಭಿವೃದ್ಧಿಗಾಗಿಯೂ, ಅಧ್ಯಾತ್ಮಿಕ ತತ್ವಗಳನ್ನು ತಿಳಿದುಕೊಳ್ಳುವುದರಲ್ಲಿಯೂ ವಿನಿಯೋಗಿಸುತ್ತಿದ್ದಳು. ಆ ಪದ್ಧತಿಯಂತೆ ಆ ದಿನದ ಸಂಜೆಯನ್ನೂ ಅವಳು ಆಧ್ಯಾತ್ಮಿಕ ಜ್ಞಾನಾರ್ಜನೆಯಲ್ಲಿ ವ್ಯಯಗೊಳಿಸಿದಳು.

ಸಂಧ್ಯಾಸಮಯದಲ್ಲಿ ಸರೋಜಳು ತನ್ನ ಗೆಳತಿಯ ಮನೆಗೆ ಬಂದಳು. ಆಗ ಅವಳ ಅವಸ್ಥೆಯು ಅತ್ಯಂತ ದಯನೀಯವಾದುದರಿಂದ, ನೋಡುವವರ ಹೃದಯಗಳಲ್ಲಿ ಕರುಣೆಯನ್ನು ಹುಟ್ಟಿಸಲು ಪರ್ಯಾಪ್ತವಾದ ಒಂದು ವಿಧವಾಗಿದ್ದಿತು. ಅವಳ ನೇತ್ರಗಳು ಕೆಂಪಗಿದ್ದು ಬಾತುಕೊಂಡಿದ್ದವು. ಶೋಕವು ತನ್ನ ಕರಾಳ ರೂಪವನ್ನು ತಾಳಿ ಅವಳ ವದನ ಮಂಡಲದಿಂದ ಹೊರಚಲ್ಲುತ್ತಿತ್ತು. ಅವಳ ನಾಸಿಕರಂಧ್ರಗಳಿಂದ ಬಿಸಿಯಾದ ಶ್ವಾಸಗಳು ಹೊರಗೆ ಬರುತ್ತಿದ್ದುವು. ಅವಳ ತುರುಬು ಬಿಚ್ಚಿ ಹೋಗಿ, ಕೂದಲುಗಳು ಅವ್ಯವಸ್ಥಿವಾಗಿ ಭುಜಗಳ ಮೇಲೆ ಬಿದ್ದಿದ್ದುವು. ತನ್ನ ಕೋಣೆಯಲ್ಲಿ

ಕುಳಿತು ಪುಸ್ತಕ ಪಾರಾಯಣದಲ್ಲಿ ನಿರತಳಾದ ತನ್ನ ಗೆಳತಿಯನ್ನು ಗದ್ಗದಕಂಠದಲ್ಲಿ "ಪದ್ಮ!" ಎಂಬುದಾಗಿ ಅವಳು ಸಂಬೋಧಿಸಿದಳು.

ಸರೋಜಳ ಕಂಠನಾದವನ್ನು ಆಲಿಸುತ್ತಲೆ, ತಾನು ಹಿಡಿದಿರುವ ಪುಸ್ತಕವನ್ನು ಮುಚ್ಚಿ ಶಿರವೆತ್ತಿ ನೋಡಿದಳು ಪದ್ಮಳು. ಶೋಕದಿಂದ ತುಂಬಿ ತುಳುಕುತ್ತಿರುವ ಸರೋಜಳ ದಯನೀಯ ಬಿಂಬವು ಪದ್ಮಳಿಗೆ ಗೋಚರವಾಯಿತು. ಸರೋಜಳ ಈ ಅವಸ್ಥೆಯನ್ನು ವೀಕ್ಷಿಸುತ್ತಲೆ ಪದ್ಮಳು ಭಯಕಂಪಿತ ಸ್ವರದಲ್ಲಿ ನುಡಿದಳು: 'ಇದೇನು ಸರೋಜ?"

"ಪದ್ಮಾ! ಪದ್ಮಾ! ನನ್ನ ಸರ್ವನಾಶವಾಯಿತು!" ಎನ್ನುತ್ತಾ ಆ ಹಕ್ಕಿಯು ತನ್ನ ನೇತ್ರಗಳಿಂದ ಕಂಬನಿಯನ್ನು ಹರಿಸಲಾರಂಭಿಸಿತು. ಅವಳು ತನ್ನ ಕರಗಳನ್ನು ಚಾಚಿ ಪದ್ಮಳ ಕಂಠವನ್ನು ಬಿಗಿತಪ್ಪಿದಳು.

"ಸರೋಜ! ಏನಾಯಿತು? ಏಕೆ ಇಷ್ಟು ಹತಾಶಳಾಗಿರುವೆ?"

"ಅಯ್ಯೋ! ವಿಧಿಯು ನನ್ನನ್ನು ಅತ್ಯಂತ ತೀವ್ರವಾಗಿ ಪೀಡಿಸುತ್ತಲಿರುವುದು! ಇದುವರೆಗೆ ಪತ್ತಿರದಲ್ಲಿಯೇ ಇರುವ ನನ್ನ ಸ್ವಾಮಿಯ ದರ್ಶನದಿಂದ ಸಂತಸವನ್ನು ತಾಳುತ್ತಲಿದ್ದೆನು, ಆದರೆ ಈಗ—" ಅನಂತರ ಮಾತಾಡಲು ಶಕ್ತಳಾಗದೆ ಚಿಕ್ಕ ಶಿಶುವಿನಂತೆ ಅಳುತ್ತಾ, ಸರೋಜಳು ತನ್ನ ಗೆಳತಿಯನ್ನು ಬಿಗಿದಪ್ಪಿಕೊಂಡು ಅತ್ತಳು.

"ಏನಾಯಿತು?"

'ಪದ್ಮಾ! ನಿನ್ನೆಯ ಸಂಜೆಯಿಂದ ಅವರಿಗೆ ಮತಿಭ್ರಂಶವಾದಂತೆ ತೋರುತ್ತದೆ!

"ವೆಂಕಟರಾಮನಿಗೆ ಹುಚ್ಚು ಹಿಡಿದಿತೇ?"

"ಹೌದು. ನಿನ್ನೆದಿನ ಸಂಜೆಯಿಂದ ಉನ್ಮಾದದ ಲಕ್ಷಣಗಳು ಗೋಚರಿಸಲಾರಂಭಿಸಿದುವು. ತಾವು ಯಾರೆಂಬುದಾಗಲೀ, ನಾನು ಯಾರೆಂಬುದಾಗಲೀ ಇರುವ ಜ್ಞಾನವು ಅವರಿಗಿಲ್ಲ. ನಿನ್ನೇ ದಿನ ರಾತ್ರಿ ನಿದ್ರೆಯನ್ನೇ ಮಾಡಲಿಲ್ಲ, ರಾತ್ರಿಯಲ್ಲಾ ಏನನ್ನೋ ನುಡಿಯುತ್ತಾ ಓಡಾಡುತ್ತಿದ್ದರು ಮನೆಯಲ್ಲೆಲ್ಲಾ! ಈ ದಿನ ಪ್ರಭಾತದಲ್ಲಿ ಒಂದು ಪಂಚೆಯನ್ನು ಮಾತ್ರ ಉಟ್ಟುಕೊಂಡು, ಅಂಗಿಯನ್ನಾಗಲೀ ಜುಬ್ಬವನ್ನಾಗಲೀ ಧರಿಸದೆ ಬರಿಮೈಯಲ್ಲಿ ಹೊರಟು ಹೋಗಿರುತ್ತಾರೆ! ಇದುವರೆಗೂ ಅವರು ಹಿಂದಿರುಗಿ ಬಂದಿರುವುದಿಲ್ಲ. ಅಯ್ಯೋ! ಆ ಪರಂಜ್ಯೋತಿಗೆ ನನ್ನ ಮೇಲೆ ದಯವಿಲ್ಲವೇ? ಇದುವರೆಗೆ ಅವರು ಎಷ್ಟು ಹೀನ ಮಾರ್ಗವನ್ನವಲಂಬಿಸಿದ್ದರೂ ಅವರ ಬುದ್ಧಿಯು ಸ್ಥಿರವಾಗಿರುವುದಲ್ಲಾ ಎಂದು ನೆನೆದು ಹರ್ಷವನ್ನು ತಾಳುತ್ತಲಿದ್ದನು. ಆದರೆ ಈಗ-ಈಗ—"

"ನಿರಾಶೆಯನ್ನು ಹೊಂದಬೇಡ; ಈಶ್ವರ ಕಟಾಕ್ಷದಿಂದ ವೆಂಕಟರಾಮನಿಗೆ ವಿಪತ್ತು ಸಂಭವಿಸಲಾರದು."

ಈ ಸಮಯದಲ್ಲಿ ಹೊರಗಿನಿಂದ ಮಾಧವನು ಮನೆಯೊಳಗೆ ಪ್ರವೇಶಿಸಿದನು. ಪದ್ಮಳು ಸರೋಜಳಿಗೆ ಪ್ರಾಪ್ತವಾದ ವಿಪತ್ತನ್ನು ಅವನೊಡನೆ ವಿವರಿಸಿ ಹೇಳಿದಳು.

ದರೆ ಅವನು ಮಾತಾಡಲಿಲ್ಲವು. ಒಂದು ಆಸನದ ಮೇಲೆ ಕುಳಿತುಕೊಂಡು ಅವನು ಮೌನವನ್ನು ಅವಲಂಬಿಸಿದನು

"ಮಾಧೂ, ಇದೇನು ಹೀಗೆ ವೆಂಕಟರಾಮನಿಗೆ ಹುಚ್ಚು ಹಿಡಿಯಲು ಕಾರಣ ವೇನಿರಬಹುದು? ನಮ್ಮ ಕುಟುಂಬದಲ್ಲಂತೂ ಉನ್ಮಾದವು ಒಂದು ಪಾರಂಪರ್ಯ ರೋಗವಲ್ಲ" ಮಾಧವನನ್ನು ಈ ರೀತಿ ಆಕೆಯು ಪ್ರಶ್ನಿಸಿದಳು.

"ತಾನೊಂದು ನೆನೆದರೆ ದೈವವು ಬೇರೊಂದು ನೆನೆಯುವದು!"

"ನಿನ್ನ ನುಡಿಯ ಅರ್ಥವು ನನಗಾಗಲೊಲ್ಲದು."

"ವೆಂಕಟರಾಮನು ಇನ್ನೊಬ್ಬರಿಗೆ ಕೇಡನ್ನು ಬಗೆದು, ಆ ವ್ಯಕ್ತಿಯ ಬಾಳನ್ನು ಕೆಡಿಸಲು ಪ್ರಯತ್ನಿಸಿದನು; ಆದರೆ ಈಶ್ವರ ಸಂಕಲ್ಪದಿಂದ ಅವನು ಮಾಡಿದ ಕೆಡಕು ಅವನನ್ನೇ ಬಾಧಿಸಿತು. ಅವನ ಪ್ರಯತ್ನವು ಸತ್ಯದೊಡನೆ ಹೋರಾಡಲು ಶಕ್ತ ವಾಗದೆ ಪರಾಜಯವನ್ನು ಹೊಂದಿತು. ಇದನ್ನು ಕುರಿತು ಹೆಚ್ಚಿಗೆ ಚಿಂತಿಸಿ ಪ್ರಯೋ ಜನವೇನು? ಅವರವರು ಮಾಡಿದ ಅಡಿಗೆಯನ್ನು ಅವರವರೇ ಉಣಬೇಕಾಗಿಬರುತ್ತದೆ!"

---

## ೧೫ ಹುಚ್ಚನಾದ ವೆಂಕಟರಾಮನು!

"ಕುಸುಮ!" ಒಂದು ಭೀಷಣ ಕಂಠನಾದವು ಕೋಣೆಯಲ್ಲಿ ಹರಡಿತು. ನಾಯಕಸಾನಿಯು ದಿಗಿಲಿನಿಂದ ಕೂಡಿದವಳಾಗಿ ತಾನು ಓದುತ್ತಿದ್ದ ಮಾಸಪತ್ರಿಕೆ ಯಿಂದ ತನ್ನ ದೃಷ್ಟಿಯನ್ನೆತ್ತಿ ಬಾಗಿಲ ಕಡೆಗೆ ಅವಲೋಕಿಸಿದಳು. ಒಂದು ವ್ಯಕ್ತಿಯು ತನ್ನ ಹೆಸರನ್ನು ಭೀಷಣಸ್ವರದಲ್ಲಿ ಕೂಗುತ್ತಿರುವ ನೋಟವನ್ನು ಅವಳು ದರ್ಶಿಸಿ ದಳು. ಬಾಗಿಲ ಬಳಿಯಲ್ಲಿ ಒಬ್ಬನು ಅವಳ ಹೆಸರನ್ನೇ ಹಿಡಿದು ಕರ್ಕಶಸ್ವರದಲ್ಲಿ ಕೂಗುತ್ತಿದ್ದನು.

"ಹಾ! ಯಾರೋ ನೀನು?"

"ಹಾ! ಭಲಾ! ಕುಸುಮಾ, ನೀನು ನನ್ನನ್ನು ಮರೆತೆಯಾ?" ಎನ್ನುತ್ತ ಒಂದು ಭಯಂಕರ ನಗುವನ್ನು ಹೊರಚೆಲ್ಲಿ ಆ ವ್ಯಕ್ತಿಯು ಕುಸುಮಳಿದ್ದ ಕೋಣೆಯೊಳಗೆ ಪ್ರವೇಶಿಸಿತು. ಆ ವ್ಯಕ್ತಿ ಒಂದು ಪುರುಷಸ್ವರೂಪವು; ಅದರ ನೇತ್ರಗಳು ಕೆಂಡದಂತೆ ಉರಿಯುತ್ತಲಿದ್ದವು. ತಲೆಯ ಮೇಲಿನ ಕೂದಲುಗಳು ಅವನ ಲಲಾಟದ ಮೇಲೆ ಬಿದ್ದಿದ್ದುವು. ಅವನು ಉಟ್ಟಿರುವ ಒಂದು ಪಂಜೆಯಲ್ಲದೆ, ಇತರ ಯಾವ ವಸ್ತ್ರ ಗಳೂ ಅವನ ದೇಹದ ಮೇಲಿರಲಿಲ್ಲ. ಶರೀರವು ವಿದ್ಯುತ್ಪಾತಕ್ಕೆ ಒಳಗಾದ ಹಾಗೆ ಕಂಪಿಸುತ್ತಲಿದ್ದಿತು. ಅವನ ಕರ್ಕಶವಾದ ಸ್ವರವು ಭೀತಿಯನ್ನು ಹುಟ್ಟಿಸುತ್ತಲಿ ದ್ದಿತು. ಆ ಸ್ವರೂಪವನ್ನು ನೋಡಿ ಭಯದಿಂದ ಬಿಳುಪೇರಿನ ಮೊಗದೊಡನೆ ವಾರ ವನಿತೆಯು ಶಿಲಾಬಿಂಬದಂತೆ ನಿಂತಳು.

"ನನ್ನನ್ನು ಮರೆತೆಯಾ!" ಎಂದು ಆ ವ್ಯಕ್ತಿಯು ಪುನಃಗರ್ಜಿಸಿತು; ಅವನು

ಯಾರೆಂಬುದನ್ನು ಕುಸುಮಳು ತಿಳಿದುಕೊಂಡಳು. ಅವಳು ನಡುಗುತ್ತಿರುವ ತುಟಿಗಳೊಡನೆ ಹೇಳಿದಳು:-"ಇದೇನು, ಈ ಭಯಂಕರ ವೇಷ?"

"ಭಯಂಕರ! ಲೋಕವೇ ಭಯಂಕರವು!" ಎಂದು ಆ ಪುರುಷನು ಪುನಃ ಅಟ್ಟಹಾಸವನ್ನು ಮಾಡಿದನು. ಅವನು ಬೇರೆ ಯಾರೂ ಆಗಿರಲಿಲ್ಲ; ನಮ್ಮ ಚಿರ ಪರಿಚಿತನಾದ ವೆಂಕಟರಾಮನಾಗಿದ್ದನು. ಒಂದೇ ದೇಹವಾಗಿದ್ದರೂ, ಹಿಂದಿನ ವೆಂಕಟರಾಮನು ಅವನಾಗಿರಲಿಲ್ಲ. ಅವನ ಮತಿಯು ಅತ್ಯಂತ ವಿಚಿತ್ರವಾದ ಒಂದು ಅವಸ್ಥೆಗೆ ಬಂದು ತಲುಪಿದ್ದಿತು. ಅವನ ವಿಚಾರಶಕ್ತಿಯು ಲೋಪವಾಗಿ ಕನಸುಗಳ ಜಗತ್ತಿನಲ್ಲಿ ಅವನು ಪ್ರವೇಶಿಸಿದ್ದನು. ಅದು ಅವನು ಇದುವರೆಗೆ ಗೈದ ಪಾಪಗಳ ಫಲವಾಗಿದ್ದಿತೆಂದು ಹೇಳಬಹುದು. ಅವನ ಚಿತ್ತವು ಅವ್ಯವಸ್ಥಿತವಾಗಿತ್ತು. ಅವನಿಗೆ ಜಗತ್ತು ಬೇರೊಂದು ಬಣ್ಣದಲ್ಲಿ ತೋರತೊಡಗಿದ್ದಿತು.

ಅವನು ತನ್ನ ಹೆಜ್ಜೆಗಳನ್ನು ಮುಂದಿಡುತ್ತ ಬಂದು ಕುಸುಮಳ ಹಸ್ತವನ್ನು ಹಿಡಿದುಕೊಂಡನು. ತೆರೆದಿರುವ ತನ್ನ ರೆಪ್ಪೆಗಳನ್ನು ಮುಚ್ಚದೆ ಅವನು ವಾರವನಿತೆಯ ನೇತ್ರಗಳನ್ನು ವೀಕ್ಷಿಸಿದನು. ಅವಳ ಕಣ್ಣುಗಳಲ್ಲಿ ಅವನು ಏನನ್ನು ಕಂಡನು? ಎಂಬುದನ್ನು ಇಲ್ಲಿ ನುಡಿಯಲು ಬರುವಂತಿಲ್ಲ. ಅನಂತರ ಅವನು ಅವಳ ಕರವನ್ನು ಪರಿತ್ಯಜಿಸಿದನು. ಅವನ ತುಟಿಗಳಿಂದ ನುಡಿಯು ಹೊರಬೀಳಲಿಲ್ಲ ಭೀಷಣವಾದ ಅವನ ಮುಖವು ತನ್ನ ಕೆಂಬಣ್ಣವನ್ನು ಪರಿತ್ಯಜಿಸಿ ಬಿಳುಪೇರತೊಡಗಿತು. ಅರುಣವರ್ಣವನ್ನು ತಾಳಿದ ಕಣ್ಣುಗಳಿಂದ ಬಾಷ್ಪ ಬಿಂದುಗಳು ಉದುರಲಾರಂಭಿಸಿದುವು. ಅವನ ಈ ವಿಚಿತ್ರ ವರ್ತನೆಯನ್ನು ವೀಕ್ಷಿಸಿ ಕುಸುಮಳು ಪರಿಭ್ರಮಯುಕ್ತಳಾದಳು. ಅವಳು ವೆಂಕಟರಾಮನ ಮೋರೆಯನ್ನು ನೋಡುತ್ತ ಪ್ರಶ್ನಿಸಿದಳು:—"ನೀವೇಕೆ ಅಳುತ್ತಿರುವಿರಿ?"

"ಕುಸುಮಾ! ಕುಸುಮಾ! ಭಯಂಕರ!-ತೀವ್ರವಾದ ಒಂದು ಜ್ವಾಲೆಯು ನನ್ನನ್ನು ಸುಡುತ್ತಲಿರುವುದು. ನಾನು ಎಲ್ಲಿಗೆ ಓಡಿದರೂ ಅದು ನನ್ನನ್ನೇ ಹಿಂಬಾಲಿಸಿಕೊಂಡು ಬರುತ್ತಿವೆ! ಹಾ! ಎಲ್ಲಿಗೋಡಿದರೂ ಅದು ಭಯಂಕರವಾಗಿ ಉರಿಯುತ್ತಲಿವೆ!" ಭಯಪೀಡಿತನಾದ ವೆಂಕಟರಾಮನು ನಡುಗುತ್ತ ತಲೆ ಬಾಗಿಲ ಕಡೆಗೆ ತೋರಿಸಿದನು. ಕುಸುಮಳು ಆ ಕಡೆಗೆ ತನ್ನ ನೋಟವನ್ನು ಚೆಲ್ಲಿದಳು; ಆದರೆ ಅಲ್ಲಿ ಯಾವುದೂ ಗೋಚರಿಸಲಿಲ್ಲ. "ನನಗೆ ಯಾವುದೂ ಗೋಚರಿಸದು."

"ಹಾಗಾದರೆ ನಿನ್ನ ದರ್ಶನಶಕ್ತಿಯು ಲೋಪವಾಗಿದೆ; ಒಂದು ಕರಾಳ ಸ್ವರೂಪವು ಉರಿಯುತ್ತಿರುವ ಒಂದು ಪಂಜನ್ನು ಹಿಡಿದುಕೊಂಡು ನನ್ನನ್ನು ನೋಡುತ್ತ ಹಲ್ಲುಕಿರಿದು ನಿಂತಿದೆ! ಕೋರಪ್ಪ ನಾಯರ! ಕೋರಪ್ಪ ನಾಯರ! ನೀನೆಲ್ಲಿ ಹೋದೆ?- ನೀನು ಮಾಡಿದ ಮಾಟವು ನನ್ನನ್ನೇ ನುಂಗುತ್ತಿದೆ."

"ಏನಾಗಿದೆ ನಿಮಗೆ? ಅಸಂಬದ್ಧವಾದ ಈ ನುಡಿಗಳಿಂದ ನಾನು ಏನನ್ನೂ ತಿಳಿಯಲಾರೆನು."

"ಹಾ! ತಿಳಿದುಕೊಂಡು ಪ್ರಯೋಜನವಿಲ್ಲ; ನನ್ನನ್ನು ತಿಳಿಯಲು ಸಾಧ್ಯವಿಲ್ಲ. ನಾನು ಯಾರೆಂಬುದು ನನಗೇ ತಿಳಿಯದು. ಹಾ! ಸರ್ವನಾಶ! ಲೋಕವೇ ನಶಿಸಲಿ! ಈ ನಗರವೆಲ್ಲಾ ಅಗ್ನಿಜ್ವಾಲೆಯಿಂದ ಪ್ರಜ್ವಲಿಸುತ್ತಿರುವ ಒಂದು ಚಿತ್ರವನ್ನು ನಾನು ನೋಡಬಯಸುತ್ತಿರುವೆನು. ಆ ಜಯವು ನನಗಿಲ್ಲ; ಏಕೆಂದರೆ, ಈ ಮೊದಲು ನನ್ನನ್ನು ನಾನೇ ಸುಟ್ಟುಕೊಂಡಿರುತ್ತೇನೆ!" ಅನಂತರ ಬಾಗಿಲ ಕಡೆಗೆ ಪುನಃ ತನ್ನ ದೃಷ್ಟಿಯನ್ನು ಚೆಲ್ಲಿ ಭಯದಿಂದ ನಡುಗುತ್ತ ವೆಂಕಟರಾಮನು ನುಡಿದನು:-"ಭಯಂಕರ ಸ್ವರೂಪವೇ! ತುಸ ತಾಳು; ನಿನಗೆ ನಾನು ಹೆದರುವುದಿಲ್ಲ. ಸಾವು ನನ್ನ ಬಳಿಗೆ ಬರುವುದಕ್ಕೆ ಮುಂಚೆಯೇ ಎಷ್ಟೋ ಮರಣಗಳನ್ನು ನಾನು ಪಡೆದಿರುತ್ತೇನೆ. ಇನ್ನೆಲ್ಲಿಯ ಸಾವು? ಆದರೆ ಎಲ್ಲವೂ ಆ ಪ್ರಳಯಾಗ್ನಿಯಲ್ಲಿ ನಾಶವಾಗುತ್ತಿರುವ ಆ ಚಿತ್ರವನ್ನು ನೋಡಿ ಆನಂದಿಸಲು ತುಸ ಸಮಯವನ್ನು ನನಗೆ ಕೊಡು."

ಈ ಮಾತುಗಳನ್ನು ಕೇಳಲು ವೆಂಕಟರಾಮನ ಬುದ್ಧಿಯು ನಾಶವಾಗಿದೆಯೆಂಬುದನ್ನು ಕುಸುಮಳು ಊಹಿಸಿದಳು. ತನ್ನ ಮುಂದೆ ನಿಂತಿರುವವನು ಒಬ್ಬ ಹುಚ್ಚನೆಂಬುದು ವಿದಿತವಾಗಲು, ಅವಳಲ್ಲಿ ಸ್ವಲ್ಪ ಭಯವು ಹುಟ್ಟಿತು. ಆಲೋಚನಾ ಶಕ್ತಿಯಿಲ್ಲದ ಹುಚ್ಚನು ಎಂಥ ಭಯಂಕರ ಕೃತ್ಯವನ್ನು ಸಹ ಎಸಗಲು ಹಿಂಜರಿಯನು, ಎಂಬುದನ್ನು ಅವಳು ತಿಳಿದಿದ್ದಳು. ಈಗ ಅವಳ ಮುಂದೆ ನಿಂತಿರುವವನು ಅವಳ ಕಾಮುಕನಲ್ಲ; ಭ್ರಾಂತಿವಿಲಾಸದಲ್ಲಿ ಮುಳುಗಿದ ಒಬ್ಬ ಹುಚ್ಚನು! ತನ್ನ ಕಾಮುಕನು ಈ ದುರವಸ್ಥೆಗೆ ಬಲಿಯಾದುದನ್ನು ನೋಡಿ, ಪಾಪಪರಿಪೂರ್ಣವಾದ ಅವಳ ಹೃದಯದಲ್ಲಿ ಸ್ವಲ್ಪ ಕನಿಕರವು ಜನಿಸಿತು. ವೆಂಕಟರಾಮನು ಒಂದು ಬಾರಿ ಕುಸುಮಳನ್ನೂ, ಇನ್ನೊಂದು ಬಾರಿ ಕೋಣೆಯ ಕದಗಳನ್ನೂ ವೀಕ್ಷಿಸುತ್ತ ಒಂದು ಆಸನದಲ್ಲಿ ಕುಳಿತುಕೊಂಡನು. ಸ್ವಲ್ಪ ಸಮಯದ ವರೆಗೆ ಮೌನವನ್ನವಲಂಬಿಸಿದ ಮೇಲೆ ಅವನು ಹೇಳಿದನು:—"ಕುಸುಮಾ! ನಿನಗೆ ಶಕ್ತಿಯಿಲ್ಲವೇ, ನನ್ನನ್ನು ಪೀಡಿಸುವದಕ್ಕಾಗಿ ಬರುತಿರುವ ಆ ಕರಾಳ ಸತ್ವದ ಕರಗಳಿಂದ ರಕ್ಷಿಸಲು? ನಿನ್ನಲ್ಲಿ ಎಷ್ಟು ವಿಪುಲವಾದ ಪ್ರೇಮವನ್ನು ಇಟ್ಟಿರುವೆನೆಂಬುದನ್ನು ನೀನು ತಿಳಿಯಲಾರೆಯಾ? ನಿನಗಾಗಿ ನಾನು ಏನೆಲ್ಲಾ ಮಾಡಿದೆನು! ನನ್ನ ಮಡದಿಯನ್ನು ಪೀಡಿಸಿದೆನು; ಶಾಂತಿ-ಹರುಷಗಳಿಂದ ಕೂಡಿದ ಪದ್ಮಳ ಕುಟುಂಬದಲ್ಲಿ ವಿಷವನ್ನು ಚೆಲ್ಲಿದೆನು! ಅಯ್ಯೋ! ನಾನು ನೆಟ್ಟ ವಿಷಗಿಡದ ಹಣ್ಣನ್ನು ನಾನೇ ಉಣಬೇಕಾಗಿ ಬಂದಿತು. ಈ ಭಯಂಕರ ಭೂತವು ನನ್ನ ಬೆನ್ನ ಹಿಂದೆಯೇ ಬಂದು ನನ್ನನ್ನು ಹೆದರಿಸುತ್ತಿದೆ. ನನ್ನನ್ನು ರಕ್ಷಿಸಲು ನಿನಗೆಲ್ಲಿಯ ಶಕ್ತಿಯು? ಸೌಂದರ್ಯದ ಬಾಣವನ್ನು ಪ್ರಯೋಗಿಸಿ, ಸನ್ನ ಹಣವನ್ನು ಸುಲಿಗೆ ಮಾಡುವುದಕ್ಕಲ್ಲದೆ, ಬೇರೆ ಯಾವ ಬಲವಿದೆ ನಿನ್ನಲ್ಲಿ? ದೇವಾ! ಈ ಪಾಪಿಯನ್ನು ರಕ್ಷಿಸು!"

ತನ್ನನ್ನು ಅವಹೇಲನ ಮಾಡುತ್ತಿರುವ ಈ ನುಡಿಗಳನ್ನು ಆಶ್ರಾವಿಸಲು, ವೇಶ್ಯೆಯ ಮನಸ್ಸಿನಲ್ಲಿ ಸ್ವಲ್ಪ ಕೋಪವು ಉದಯಿಸಿತು. ಅವಳು ತನ್ನ ಹಲ್ಲು

ಗಳನ್ನು ಕಡಿಯುತ್ತ ನುಡಿದಳು:—"ಹೌದು, ಈಗ ನನ್ನ ರೂಪದಿಂದ ನಿಮ್ಮ ಹಣ-ಕಾಸುಗಳನ್ನು ಸುಲಿದೆನೆಂದು ಹೇಳಿ! ಆಗ ಕಣ್ಣುಗಳಿರಲಿಲ್ಲವೆ? ನನ್ನ ರೂಪವನ್ನು ಸವಿಯುತ್ತಿರುವಾಗ ಈ ಬುದ್ಧಿಯು ಎಲ್ಲಿಗೆ ಹೋಗಿತ್ತು?"

"ಹೂಂ, ಹಾ, ಹೂಂ!" ಹುಚ್ಚನು ನುಡಿದನು:—"ಕುಸುಮಾ, ಆ ಪುರಾಣವೆಲ್ಲ ಇರಲಿ! ಆ ಬ್ರಾಂಡಿ ಸೀಸೆಯನ್ನು ಇತ್ತ ತೆಗೆದುಕೊಂಡು ಬಾ! ಕೊನೆಯ ಬಾರಿ ಆ ಅಮೃತವನ್ನು ಪಾನ ಮಾಡುತ್ತೇನೆ. ಅನಂತರ ಆ ಭೂತವು ಬಂದು ನನ್ನನ್ನು ಕೊಲ್ಲಲಿ!-ಆನಂದ-ಸುಖ ಇವುಗಳು ಹೊರಟು ಹೋದುವು! ಹೋಗಲಿ, ಮದ್ಯ!-ಮದ್ಯ!"

ಹೀಗೆಂದು ಬಡಬಡಿಸುತ್ತ ವೆಂಕಟರಾಮನು ತನ್ನ ಪೀಠದಿಂದ ಎದ್ದು ಕುಸುಮಳ ಕೈ ಹಿಡಿದುಕೊಂಡನು. ಅವನು ಮೆಲ್ಲನೆ ಅವಳ ತುಟಿಗಳನ್ನು ಚುಂಬಿಸಿದನು. ತತ್ಕ್ಷಣವೇ ತುಟಿಗಳನ್ನು ದೂರಕ್ಕೆ ಎಳೆದು:—"ಕಹಿ, ನಿನ್ನ ತುಟಿಗಳು ವಿಷದಿಂದ ತುಂಬಿರುತ್ತವೆ! ಆ ಸ್ಪರ್ಶನವನ್ನು ಸಹಿಸಲಾರೆನು. ನಿನ್ನ ಕರಗಳ ಮೇಲಿರುವ ರೋಮಗಳು ಮುಳ್ಳುಗಳಂತೆ ನನ್ನ ಮೈಯನ್ನು ಚುಚ್ಚುತ್ತಲಿರುವವು" ಎಂದೆನ್ನುತ್ತ ವೆಂಕಟರಾಮನು ಕುಸುಮಳ ಕರವನ್ನು ತ್ಯಜಿಸಿ ದೂರ ಸರಿದನು "ಇರಲಿ, ಕುಸುಮಾ! ಕೊನೆಯ ಬಾರಿ ನಿನ್ನ ಕರಗಳಿಂದ ಮದ್ಯವನ್ನು ಸ್ವೀಕರಿಸಿ ಕುಡಿಯುತ್ತೇನೆ ಬ್ರಾಂಡಿ ಕುಪ್ಪಿಯನ್ನು ಇತ್ತ ತೆಗೆದುಕೊಂಡು ಬಾ!"

ಹುಚ್ಚನಿಗೆ ಪ್ರತಿಹೇಳಲು ಕುಸುಮಳು ಧೈರ್ಯಪಡಲಿಲ್ಲ. ಅವನ ಮಾತಿಗೆ ಪ್ರತಿಹೇಳದೆ, ವೆಂಕಟರಾಮನ ಆಜ್ಞೆಯನ್ನು ನೆರವೇರಿಸುವುದಕ್ಕಾಗಿ ಒಳಮನೆಗೆ ಗಮಿಸಿದಳು. ವೆಂಕಟರಾಮನು ಕೈ ಚಪ್ಪಾಳೆ ಹೊಡೆದು ಹಾಡತೊಡಗಿದನು:

ಹೆಂಡವೇ ನೀನೇ ನನ್ನಯ ದೇವರು!
ನಿತ್ಯವು ಶಾಂತಿಯ ನೀಡುವ ಮೂರುತಿಯು!
ಹೆಂಡದ ಸ್ಪರ್ಶನವೆ ದುಃಖಕೆ ಮದ್ದೂ;
ಹೆಂಡದ ಪಾನವೆ ಸಾವನು ಗೆಲುವುದೂ!
ಹಾಹಾ! ಹಹ, ಹಾಹ—ಹೀಹಾ!

ಹೀಗೆಂದು ತನಗೆ ತೋರಿದ ರೀತಿಯಲ್ಲಿ ಬಾಯಿಗೆ ಬಂದಂತೆ ವೆಂಕಟರಾಮನು ಹಾಡುತ್ತಿರುವಾಗ, ವೇಶ್ಯೆಯು ಬ್ರಾಂಡಿ ಸೀಸೆಯನ್ನೂ ಗ್ಲಾಸನ್ನೂ ತಂದು ಮೇಜದ ಮೇಲೆ ಮಡುಗಿದಳು. ಕೆಂಬಣ್ಣದ ಆ ಮದಿರೆಯನ್ನು ನೋಡಿದೊಡನೆಯೇ ಹುಚ್ಚನ ನೇತ್ರಗಳಲ್ಲಿ ಕಿಡಿಗಳು ಸ್ಫುರಿಸಿದುವು. ಎರಡು ನಿಮಿಷಗಳ ವರೆಗೆ ರೆಪ್ಪೆ ಮುಚ್ಚದೆ ಅವನು ಮದ್ಯವನ್ನೇ ನೋಡಿದನು. ಅನಂತರ ಗ್ಲಾಸಿನಲ್ಲಿ ತುಂಬಿಸಿದ ಮದಿರೆಯನ್ನು ತೆಗೆದುಕೊಂಡು, ಅದನ್ನು ತನ್ನ ಗಂಟಲೊಳಗೆ ಸುರಿದನು. ಮದ್ಯವನ್ನು ಕುಡಿಯಲು ಈ ಮೊದಲೇ ರಕ್ತವರ್ಣವನ್ನು ತಾಳಿದ್ದ ಅವನ ನೇತ್ರಗಳು ಇನ್ನಷ್ಟು ಕೆಂಪಾದುವು; ಮೋರೆಯು ಉಗ್ರಭಾವವನ್ನು ಹೊಂದಿತು.

ಮದ್ಯವನ್ನು ಕುಡಿದಾದ ನಂತರ ಅವನು ತಾನು ಹಿಡಿದಿರುವ ಗ್ಲಾಸನ್ನು ಮೇಜದ ಮೇಲೆ ಮಡುಗಿ, ತನ್ನ ಮುಷ್ಟಿಯನ್ನು ಗಟ್ಟಿ ಹಿಡಿದು ವೆಂಕಟರಾಮನು ಆ ಗ್ಲಾಸಿನ ಮೇಲೆ ಅಪ್ಪಳಿಸಿದನು. ಗಾಜಿನಿಂದ ನಿರ್ಮಿತವಾದ ಆ ಪಾತ್ರೆಯು ಒಡೆದು ನೂರು ಚೂರಾಗಿ ಹೋಯಿತು! ಮೊನೆಯಾದ ಗಾಜಿನ ಚೂರುಗಳು ಅವನ ಹಸ್ತಕ್ಕೆ ತಗಲಿ ಗಾಯುವಾದುದರಿಂದ ನೆತ್ತರು ಹರಿಯಲಾರಂಭಿಸಿತು. ಅವನು ತನ್ನ ಕೈಯನ್ನು ಎತ್ತಿ ಹಿಡಿದು ಹರಿಯುತ್ತಿರುವ ರುಧಿರವನ್ನು ನೋಡಲಾರಂಭಿಸಿದನು. ಗಾಜಿನ ಚೂರುಗಳು ತಗಲುವುದರಿಂದ ಉಂಟಾದ ನೋವಿನ ಯಾವ ಲಕ್ಷಣವೂ ಅವನ ಮೋರೆಯ ಮೇಲೆ ತೋರಲಿಲ್ಲ. ಅವನ ತುಟಿಗಳಲ್ಲಿ ಭೀಷಣವಾದ ಒಂದು ನಗುವು ಕಳೆಯಾಗುತ್ತಿತ್ತು. ತನ್ನ ಹಸ್ತದಿಂದ ಪ್ರವಹಿಸುತ್ತಿರುವ ರಕ್ತವನ್ನು ವೀಕ್ಷಿಸುತ್ತಾ ಅವನು ಹಾಡಿದನು:

ಎಲ್ಲವು ಎಲ್ಲವು ಕೆಂಪು
ಮದಿರೆಯ ಬಣ್ಣವು ಕೆಂಪು.
ಗುಲಾಬಿಯ ಹೂ ಕೆಂಪು
ನೆತ್ತರ ಬಣ್ಣವು ಕೆಂಪು!

ಎನ್ನುತ್ತಾ ತನ್ನ ಕರವನ್ನು ತುಟಿಗಳ ಹತ್ತರ ತೆಗೆದುಕೊಂಡು ಹೋಗಿ ಗಾಯದಿಂದ ಹರಿಯುತ್ತಿರುವ ನೆತ್ತರವನ್ನು ಅವನು ಚೀಪಲಾರಂಭಿಸಿದನು.

"ಎಲ್ಲಾದರೂ ಉಂಟೇ ತನ್ನ ನೆತ್ತರವನ್ನು ತಾನೇ ಹೀರುವದು?" ಹೀಗೆ ನುಡಿದು, ಕುಸುಮಳು ಅವನ ಕರವನ್ನು ಹಿಡಿದುಕೊಂಡಳು. ವೆಂಕಟರಾಮನು ತನ್ನ ಕಣ್ಣುಗಳನ್ನು ಅಗಲಿಸಿ, ವೇಶ್ಯೆಯನ್ನು ದುರದುರನೆ ನೋಡುತ್ತ ಅಂದನು:-"ನಾನು-ನನ್ನ ಶರೀರ; ನನ್ನ ಗಾಯದಿಂದ ಹರಿಯುತ್ತಿರುವ ನೆತ್ತರವನ್ನು ಹೀರಿದರೆ, ಪ್ರಶ್ನಿಸಲು ನೀನು ಯಾರು?"

ಅವನು ಗರ್ಜಿಸಿದನು; "ಇನ್ನೊಂದು ಬ್ರಾಂಡಿಸೀಸೆಯನ್ನು ತೆಗೆದುಕೊಂಡು ಬಾ!" ಭಯವಿಹ್ವಲಳಾಗ ಕುಸುಮಳು ಮರುಮಾತಾಡದೆ ಇನ್ನೊಂದು ಬ್ರಾಂಡಿ ಸೀಸೆಯನ್ನು ತಂದು ಕೊಟ್ಟಳು. ವೆಂಕಟರಾಮನು ಮದ್ಯದ ಸೀಸೆಯನ್ನು ನೋ-ಡುತ್ತ ಹೇಳಿದನು. "ಹೆಂಡ, ಬ್ರಾಂಡಿ, ವಿಸ್ಕಿ! ಇದು ವರೆಗೆ ನನ್ನ ಜೀವನದ ಸತ್ವಗಳು ನೀವಾಗಿದ್ದಿರಿ! ನೀವಿಲ್ಲದೆ ಜಗತ್ತಿನಲ್ಲಿ ಬಾಳಲು ಸಾಧ್ಯವಿಲ್ಲವೇ? ಹಾಹಾ!" ಬಾಗಿಲ ಕಡೆಗೆ ನೋಡುತ್ತ ಅವನು ಅಂದನು. "ಕರಾಳರೂಪದ ಭೂತವೇ, ನೀನು ನನ್ನನ್ನು ಕೊಲ್ಲುವದಕ್ಕಾಗಿ ಬಂದಿರುವಿಯೆಂಬುದನ್ನು ನಾನು ಬಲ್ಲೆನು. ಆದರೂ ನಾನು ನಿನಗೆ ನನ್ನ ಔದಾರ್ಯವನ್ನು ತೋರಿಸುತ್ತೇನೆ! ಈ ಕುಪ್ಪಿಯಲ್ಲಿ ಮದ್ಯವು ಹೊಳೆಯುತ್ತಲಿದೆ; ತೆಗೆದುಕೋ! ಅದನ್ನು ನೀನು ಕುಡಿದ ಮೇಲೆ ನಾವಿಬ್ಬರೂ ಕಾದಾಡೋಣ!'"

ತಾನು ಕುಳಿತಲ್ಲಿಂದ ಎದ್ದು ಪ್ರಜ್ಞೆಯನ್ನು ಹೊಂದಿದವನಂತೆ ನಟಿಸುತ್ತಾ,

ವೆಂಕಟರಾಮನು ಕುಸುಮಳನ್ನು ನೋಡಿದನು. ಈ ಮಾತುಗಳು ಅವನ ತುಟಿ ಗಳಿಂದ ಹೊರಬಿದ್ದವು: "ಕುಸುಮಾ, ಹಿಂದಿನ ವೆಂಕಟರಾಮನು ನಾನಲ್ಲ; ನನ್ನ ಬುದ್ಧಿಯು ಲೋಪವಾಗಿದೆ! ಇದುವರೆಗೆ ನಾನು ಆಚರಿಸಿದ ಪಾಪಗಳ ಸಂಕೋಲೆಯು ನನ್ನನ್ನು ಬಂಧಿಸಿರುತ್ತದೆ! ನನ್ನ ಆತ್ಮವನ್ನು ನಾನೇ ಕೆಡಿಸಿಕೊಂಡೆನು. ಅನ್ಯರಿಗೆ ಕೇಡನ್ನು ಬಯಸಿ ಹೊರಟ ನಾನು, ಆ ವಿಷವನ್ನು ನಾನೇ ಉಣಬೇಕಾಗಿ ಬಂದಿತು. ನಾನು ಮಾಡಿದ ಅನ್ನವನ್ನು ಭಕ್ಷಿಸಲು ಬೇರೆ ಯಾರೂ ಬರುವಂತಿಲ್ಲ! ನನ್ನ ಪ್ರಾರಬ್ಧ! ನನ್ನ ಕರ್ಮಗಳ ಫಲ! ಈ ನನ್ನ ಬದುಕಿನಿಂದ ಒಂದು ಪಾಠವನ್ನು ಕಲಿತುಕೊಂಡೆನು. ಎಂದೆಂದಿಗೂ ಮರೆಯಲು ಸಾಧ್ಯವಿಲ್ಲದ ಒಂದು ತತ್ವವನ್ನು ಪಠಿಸಿದೆನು. ಸತ್ಯವನ್ನು ಗೆಲ್ಲಲು ಲೋಕದ ಯಾವ ಶಕ್ತಿಗೂ ಸಾಧ್ಯವಿಲ್ಲವೆಂಬುದು ಈಗ ನನಗೆ ತಿಳಿಯಿತು. ಹರಿತವಾದ ಆ ಕರಾಳವನ್ನು ಸ್ಪರ್ಶಿಸಲು, ನನ್ನ ಹಸ್ತವೇ ಗಾಯವನ್ನು ಹೊಂದಿತು. ಕುಸುಮಾ! ನಾನು ರಸವಿಲ್ಲದ ಹಿಂಡಿಯು; ಇನ್ನು ನನ್ನಿಂದ ನೀನು ಸುಖವನ್ನು ಆಸ್ವಾದಿಸಲಾರೆ. ನಾನು ತೆರಳುತ್ತೇನೆ. ಎಲ್ಲಿಗೆ? ಈ ಜಗತ್ತು ನನ್ನ ಭಾರವನ್ನು ಹೊರಲಾರದು. ನನಗೆ ಸ್ಥಾನವಿಲ್ಲ. ಮೃಗಗಳಿಗಿಂತ ಹೀನವಾದ ಒಂದು ಮೆಟ್ಟಲಿಗೆ ನಾನು ಇಳಿದು ಬಂದಿರುತ್ತೇನೆ. ನನ್ನ ಕೈ ಹಿಡಿದು ಎತ್ತುವವರು ಯಾರು? ಕತ್ತಲೆಯ ಗವಿಯಲ್ಲಿದ್ದೇನೆ. ಬೆಳಕನ್ನು ನೀಡುವವರು ಯಾರು? ಎಲ್ಲಿಗೆ ಗಮಿಸಿದರೂ ಈ ಪಾಪದ ಭೂತವು ನನ್ನ ಬೆನ್ನಹಿಂದೆಯೇ ಬರುತ್ತಿದೆ. ಸುಖಿಯಾಗು; ಸರ್ವರೂ ಸುಖವನ್ನು ಹೊಂದಲಿ!"

ವೆಂಕಟರಾಮನಿಗೆ ಹುಚ್ಚು ಬಾಧಿಸಿತೆಂಬದು ನಿಜವು; ಆ ಭಯಂಕರ ವ್ಯಾಧಿಯೊಡನೆಯೇ, ತಾನು ಗೈದ ಪಾಪಗಳ ತಿಳುವಾದರೂ ಅವನಿಗುಂಟಾಯಿತು. ಅವನು ಗೈದ ಪಾಪಕರ್ಮಗಳ ರಾಶಿಯು ತನ್ನನ್ನು ಬೆನ್ನ ಬಿಡದೆ ಹಿಂಬಾಲಿಸುತ್ತಿರುವ ಒಂದು ಮಹತ್ತಾದ ಭೂತವಾಗಿ ಅವನಿಗೆ ತೋರಿತು ಅದರ ಕೈಯಿಂದ ಪಾರಾಗಲು ಯತ್ನಿಸುತ್ತಾ, ಅವನು ಆ ದಿನ ಬೆಳಿಗ್ಗೆ ನಗರದಲ್ಲೆಲ್ಲ ಓಡಾಡಿದ ಅನಂತರ ಕುಸುಮಳ ಗೃಹಕ್ಕೆ ಬಂದನು; ಆದರೆ ಅವನ ಮನಸ್ಸಿನಲ್ಲಿ ಮೂಡಿದ್ದ ಭಯವು ಮಾಯವಾಗಲಿಲ್ಲ. ಅವನು ಹುಚ್ಚನಾಗಿದ್ದರೂ, ಕೆಲವು ವೇಳೆ ತನಗೆ ಪ್ರಾಪ್ತವಾದ ದುರ್ದೆಶೆಯು ಅವನ ಮನಶ್ಚಕ್ಷುಸ್ಸುಗಳಿಗೆ ಗೋಚರವಾಗುತ್ತಿದ್ದಿತು ಆ ನೆನಪು ಬರಲು, ಅವನ ಹೃದಯದಲ್ಲಿ ಪಶ್ಚಾತ್ತಾಪದ ಕಿಡಿಯು ಉದಯಿಸಿ, ತನ್ನನ್ನು ಆದರಿಸಿರುವ ಪಾಪಶೃಂಖಲೆಯಿಂದ ವಿಮುಕ್ತವಾಗಬೇಕೆಂಬ ವಿಚಾರವು ಉತ್ಪನ್ನವಾಗುತ್ತಿತ್ತು; ಆದರೆ ಆ ಬೆಳಕು ಬಹುಕಾಲ ನೆಲೆಸಿಂತಿರಲಿಲ್ಲ. ಆ ಕಾರ್ಮುಗಿಲು ಅವನ ಮನೋಬಲಯುವನ್ನು ಇನ್ನೊಂದು ನಿಮಿಷದಲ್ಲಿಯೇ ಆವರಿಸಿತು. ಹುಚ್ಚನ ವಿಚಾರ ಮತ್ತು ಕೆಲಸ ಇವುಗಳನ್ನು ಊಹಿಸಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಅವನ ಮನಸ್ಸೆಂಬ ಕನ್ನಡಿಯಲ್ಲಿ ಹೊಳೆದ ವಿಚಾರಗಳು,-ಅವುಗಳ ಸ್ವರೂಪವೇನೇ ಇರಲಿ,—ಒಡನೆಯೇ ಪ್ರಯತ್ನರೂಪದಲ್ಲಿ ಯುಕ್ತಾಯುಕ್ತ ವಿವೇಚನೆಯಿಲ್ಲದೆ, ಕೊಂಡು ಬರಲು ಶ್ರಮಿಸು

ವುದೇ, ಉನ್ಮತ್ತನಾದವನ ಒಂದು ಪ್ರಧಾನ ಲಕ್ಷಣವಾಗಿರುತ್ತದೆ. ಆಲೋಚನಾ ಶಕ್ತಿಯು ಲೋಪವಾಗಿರುವದರಿಂದ ಮನಸ್ಸಿನಲ್ಲಿ ಹೊಳೆದ ಸಂಗತಿಗಳನ್ನು ಕುರಿತು ಚಿಂತಿಸುವದಿಲ್ಲ ಹುಚ್ಚನು ಇದಾಗಿದೆ. ಎಂಥ ಭಯಂಕರ ಕೃತ್ಯವಾದರೂ ಸರಿ ನೆರವೇರಿಸಲು ಉನ್ಮತ್ತನಾದವನು ಹಿಂಜರಿಯದೇ ಇರುವುದಕ್ಕೆ ಒಂದು ಕಾರಣವು.

ವೆಂಕಟರಾಮನು ತನ್ನ ಸದ್ಯಃ ಪರಿಸ್ಥಿತಿಯನ್ನು ಕುರಿತು ಆಡಿದ ಮಾತುಗಳು ಅವನ ಮನಸ್ಸು ಸ್ಥಿಮಿತಗತಿಗೆ ಬಂದಿತೆಂಬುದನ್ನು ಸೂಚಿಸುತ್ತಲಿದ್ದುವು; ಆದರೆ ಬಹಳ ವೇಳೆಯ ವರಿಗೆ ಆ ಅವಸ್ಥೆಯು ಉಳಿಯಲಿಲ್ಲ ಸ್ವಲ್ಪ ಸಮಯದವರೆಗೆ ಶಾಂತವಾಗಿದ್ದ ಆ ಮಹಾವ್ಯಾಧಿಯು ಪುನಃ ಪ್ರಜ್ವಲಿಸುತ್ತ ತನ್ನ ಕ್ರೌರ್ಯವನ್ನು ಪ್ರದರ್ಶಿಸಲಾರಂಭಿಸಿತು. ಅವನು ಮೇಜದ ಮೇಲಿರುವ ಬ್ರ್ಯಾಂಡಿ ಸೀಸೆಯನ್ನೊಡೆದು ಅದರೊಳಗಿರುವ ಮದ್ಯವನ್ನು ತನ್ನ ಮಸ್ತಕದ ಮೇಲೆ ಅಭಿಷೇಕ ಮಾಡಿಕೊಂಡನು. ಇನ್ನೊಂದು ಸೀಸೆಯಲ್ಲಿರುವ ಮದ್ಯವನ್ನು ತೆಗೆದು ಕುಸುಮಳ ಶಿರಸ್ಸಿನ ಮೇಲೆ ಅಭಿಷೇಕಿಸುವುದಕ್ಕಾಗಿ ಯತ್ನಿಸಿದನು. ಅವಳು ಚೀರುತ್ತ ಒಳಮನೆಯೊಳಕ್ಕೆ ಓಡಿದಳು.

ಕೋಣೆಯ ಒಂದು ಮೂಲೆಯಲ್ಲಿದ್ದ ಡೊಣ್ಣೆಯನ್ನು ಹಿಡಿದುಕೊಂಡು ವೆಂಕಟರಾಮನು ಆ ಬೆಲೆವೆಣ್ಣಿನ ನಿಲಯವನ್ನು ಪರಿತ್ಯಜಿಸಿದನು. ಅವನು ಎಲ್ಲಿಗೆ ತೆರಳುತ್ತಿರುವನೆಂಬುದನ್ನು ಬಲ್ಲವರು ಯಾರು? ತಾನೆಲ್ಲಿಗೆ ಗಮಿಸುತ್ತಿರುವೆನೆಂಬುದು ಅವನಿಗೇ ತಿಳಿಯದು. ವೆಂಕಟರಾಮನ ಸದ್ಯದ ಪರಿಸ್ಥಿತಿಯನ್ನು ಅವಲೋಕಿಸಿದರೆ, ಯಾರ ಹೃದಯದಲ್ಲಿಯೂ ಕರುಣೆಯು ತಲದೋರದೆ ಇರಲಾರದು. ಬಹು ಭೀಕರವಾದ ವ್ಯಾಧಿಯಿಂದ ಅವನು ಬಳಲುತ್ತಿದ್ದನು; ಆದರೆ ಮಾಡುವುದೇನು? ಅದು ನಿವಾರಣಾತೀತವು; ತಾನು ಗೈದ ಕರ್ಮಗಳ ಫಲಗಳನ್ನು ವೆಂಕಟರಾಮನು ಅನುಭವಿಸುತ್ತಲಿದ್ದನು!

---

## ೧೬ ಎರಡು ಬೆಂದ ಹೃದಯಗಳು.

ಯೋ ಮಾಂ ಪಶ್ಯತಿ ಸರ್ವತ್ರ ಮಯಿ ಸರ್ವಂಚ ಪಶ್ಯತಿ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇನ ಪ್ರಣಶ್ಯತಿ'

ಶೋಕಭಾವವನ್ನು ಧರಿಸಿದ ಸರೋಜಳು ಶ್ರೀ ಭಗವದ್ಗೀತೆಯ ಆರನೇ ಅಧ್ಯಾಯದ 30ನೇ ಶ್ಲೋಕವನ್ನು ವಾಚಿಸಿದಳು. ಅವಳ ಗೀತಾ ವಾಚನವನ್ನು ಆಶ್ರಾವಿಸುತ್ತಾ ಪದ್ಮಳು ಅವಳ ಮುಂದೆ ಕುಳಿತಿದ್ದಳು. ಸರೋಜಳು ತನ್ನ ವಾಚನವನ್ನು ನಿಲ್ಲಿಸಿ ಪದ್ಮಳ ವದನವಾವರೆಯನ್ನು ನೋಡಿದಳು. ಆಗ ಅವಳ ಲೋಚನಗಳಲ್ಲಿ ಬಾಷ್ಪಕಣಗಳು ತುಂಬಿದ್ದವು. ಅವಳು ಹೇಳಿದಳು: 'ಪದ್ಮಾ, ಈ ಗ್ರಂಥವಾಚನ

ದಿಂದ ನನ್ನ ಆತ್ಮವು ಶಾಂತಿಯನ್ನು ಹೊಂದುವುದಿಲ್ಲ. ನಾನೆಷ್ಟು ಪ್ರಯತ್ನಿಸಿದರೂ ದಟ್ಟವಾದ ಕಾರ್ಮುಗಿಲು ಬಂದು ನನ್ನ ಚಿತ್ತವನ್ನು ವ್ಯಾಪಿಸುತ್ತಲಿದೆ! ಆ ಭಯಂಕರ ಪಾಶದಿಂದ ಮೋಚನೆಯನ್ನು ಹೊಂದಲು ಸಾಧ್ಯವಿಲ್ಲವೆ? ಈ ದುರವಸ್ಥೆಯು ಎಂದಿಗೆ ಅಂತ್ಯವಾಗುವದು? ನನ್ನ ಜೀವನವು ವ್ಯರ್ಥವಾಗುತ್ತಿದೆ!"

"ವ್ಯರ್ಥವೆಂದರೇನು? ಈ ಶೋಕದಿಂದ ಬಿಡುಗಡೆಯನ್ನು ಹೊಂದಲು ಸಾಧ್ಯವಿಲ್ಲವೆಂದು ಬಗೆದಿರುವೆಯಾ? ಬರೀ ಗ್ರಂಥ ಪಾರಾಯಣದಿಂದ ಆತ್ಮವನ್ನು ಆವರಿಸಿದ ಚಿಂತೆಯು ಮಾಯವಾಗಲಾರದು. ನಮ್ಮ ಜೀವನದಲ್ಲಿ ಆ ತತ್ವಗಳನ್ನು ನಾವು ಆಚರಣೆಯಲ್ಲಿ ತರಬೇಕು. ಹಾಗಾದರೆ ಮಾತ್ರ ಈ ವಿಪತ್ತುಗಳಿಂದ ಬಿಡುಗಡೆಯನ್ನು ಹೊಂದಲು ಸಾಧ್ಯವಿದೆ. ಈ ತತ್ವಗಳನ್ನು ನೂರು ಬಾರಿ ಓದಿದ ಮಾತ್ರದಿಂದ ಶಾಂತಿಯೋ, ಉನ್ನತಿಯೋ ಸಿದ್ಧಿಸಲಾರವು. ಈ ತತ್ವಗಳನ್ನು ತಿಳಿದು ನಮ್ಮ ದೈನಂದಿನ ಜೀವನದಲ್ಲಿ ಆಚರಣೆಗೆ ತರಬೇಕು."

"ಹೇಗೆ ಆಚರಣೆಯಲ್ಲಿ ತರುವುದು?"

"ಜನತೆಯಲ್ಲಿಯೇ ವಿಶ್ವನಾಯಕನ ಪ್ರತಿಬಿಂಬವನ್ನು ದರ್ಶಿಸುವುದಾಗಿದೆ ಆ ಸಾಧನೆಯ ಉಪಾಯವು! ಜನರನ್ನು ಪ್ರೀತಿಸಲೂ, ಅವರು ನಮಗಿಂತ ವಿಭಿನ್ನರಲ್ಲವೆಂದು ತಿಳಿದುಕೊಳ್ಳಲೂ ನಾವು ಮೊದಲು ಪ್ರಯತ್ನಿಸಬೇಕು ನಮ್ಮ ನಾಡದೇವಿಯಲ್ಲಿ ಭಕ್ತಿಯನ್ನಿಟ್ಟು ಅವಳ ಅಭ್ಯುದಯಕ್ಕಾಗಿ ಹೋರಾಡಲು ನಾವು ಉದ್ಯಮಿಸತಕ್ಕುದಾಗಿದೆ; ಇದಲ್ಲದೆ ನಮ್ಮ ಜೀವನದ ಉದ್ದೇಶವನ್ನು ನಾವು ತಿಳಿದುಕೊಳ್ಳಬೇಕಾಗಿದೆ."

"ಪದ್ಮಾ, ಜೀವನದ ಉದ್ದೇಶವಾವುದು? ಈ ಬದುಕಿಗೆ ಗುರಿಯಿದೆಯೆ?"

"ಆ ವಿಶ್ವನಾಯಕನು ಉದ್ದೇಶವಿಲ್ಲದೆ ಈ ನಾಟ್ಯರಂಗವನ್ನು ಸೃಷ್ಟಿಸಿದನೆಂಬುದನ್ನು ನಾನು ನಂಬುವದಿಲ್ಲ. ಈ ಬದುಕಿಗೆ ನಿಜವಾಗಿಯೂ ಒಂದು ಉದ್ದೇಶವಿದೆ. ಅದು ತನ್ನನ್ನು ತಾನು ತಿಳಿಯುವುದಾಗಿದೆ. ಪ್ರೇಮಮಂತ್ರವನ್ನು ಜಪಿಸುತ್ತ, ಆ ವಿಶ್ವವಿಭುವಿನಲ್ಲಿ ಐಕ್ಯವನ್ನು ಹೊಂದುವುದೇ ಬಾಳಿನ ಗುರಿಯು! ಅದನ್ನು ಸಾಧಿಸಲು ನಾವು ಪ್ರಯತ್ನಿಸುವುದು ನಮ್ಮ ಕರ್ತವ್ಯವಾಗಿದೆ. ಆ ದಾರಿಯಲ್ಲಿ ಬರುತ್ತಿರುವ ಸುಖ-ದುಃಖಗಳಿಗೆ ನಾವು ಯಾವ ವಿಧದ ಭಾವ ವ್ಯತ್ಯಾಸವನ್ನೂ ಹೊಂದದೆ, ಸುಸ್ವಾಗತವನ್ನು ಬಯಸಬೇಕಾಗಿದೆ."

"ಸುಖ-ದುಃಖಗಳೆರಡನ್ನೂ ಒಂದೇ ದೃಷ್ಟಿಕೋನದಲ್ಲಿ ಅವಲೋಕಿಸುವುದು ಸಾಧ್ಯವೇ?" ಎಂದು ತನ್ನ ಕಣ್ಣುಗಳನ್ನು ಅಗಲಿಸುತ್ತ ಎಳೆನಗೆಯೊಡನೆ ಸರೋಜಳು ಪ್ರಶ್ನಿಸಿದಳು. ಆ ನಗುವಿನಲ್ಲಿ ಹರ್ಷಕ್ಕಿಂತ ಹೆಚ್ಚಾಗಿ ಅವಳ ಅಂತರಂಗದಲ್ಲಿ ಉರಿಯುತ್ತಿರುವ ಕಿಡಿಗಳು ಬೆರಕೆಯಾಗಿದ್ದುವು. ಆ ನಗುವು, ಅವಳಿಗೆ ಸಂಪ್ರಾಪ್ತವಾದ ದುಃಖದ ಪರಂಪರೆಗಳಿಂದ ಅವನ ಮನಸ್ಸು ಅಷ್ಟರಮಟ್ಟಿಗೆ ಶಿಥಿಲವನ್ನು ಹೊಂದಿದ ಚಿತ್ರವನ್ನು ಪ್ರದರ್ಶಿಸುತ್ತಲಿದ್ದಿತು.

"ಸರೋಜ! ಸೋಲು-ಗೆಲುವು ಸುಖ-ದುಃಖ ಇವುಗಳು ಒಂದು ವಸ್ತುವಿನ ಎರಡು ಬೇರೆ ಬೇರೆ ಭಾಗಗಳಾಗಿರುತ್ತವೆ. ಸುಖವೆಂಬುದು ತಾತ್ಕಾಲಿಕವಾಗಿ ಸಂತೃಪ್ತಿಯನ್ನು ನೀಡುತ್ತಿರುವ ಒಂದು ಭಾವನೆಯಾಗಿದೆ ಸುಖವೆಂಬುವ ಶಾಶ್ವತವಾದ ಒಂದು ವಸ್ತುವಲ್ಲ ಈ ದಿನ ಸುಖವೆಂದು ತೋರುತ್ತಿರುವದು ನಾಳೆ ದಿನವೂ ಸುಖವಾಗಿಯೇ ಇರುತ್ತದೆ ಎಂಬ ಭರವಸೆಯು ಆ ಮನುಷ್ಯನಿಗಿರುವದಿಲ್ಲ ಇದಲ್ಲದೆ ಸುಖದ ಹಿಂದೆಯೇ ದುಃಖವು ತಾನು ಆಮಂತ್ರಿತವಾಗದಿದ್ದರೂ, ತಾನಾಗಿಯೇ ಬಂದು ಮನುಷ್ಯನನ್ನು ಬಾಧಿಸುತ್ತದೆ ಸುಖ ದುಃಖಗಳೆಂಬುವುಗಳು ಒಂದು ನಾಣ್ಯದ ಎರಡು ಪಾರ್ಶ್ವಗಳಿದ್ದಂತೆ! ಮನುಷ್ಯನು ಸುಖವನ್ನು ಹಂಬಲಿಸಿ ಪ್ರಯತ್ನಿಸುತ್ತಿರುವಾಗ, ಸುಖದೊಡನೆಯೇ ಆ ಪ್ರಯತ್ನದ ಫಲವಾಗಿ ಸಂಪ್ರಾಪ್ತವಾಗಬಹುದಾದ ದುಃಖವನ್ನೂ ಸಹಾ ಆ ಮಾನವನು ಅನುಭವಿಸಬೇಕಾಗಿ ಬರುತ್ತದೆ. ಆದುದರಿಂದಲೇ ಗೀತೆಯಲ್ಲಿ ಪರಮಾತ್ಮನು ಅರ್ಜುನನಿಗೆ ಈ ರೀತಿ ಉಪದೇಶಿಸಿರುತ್ತಾನೆ:

ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ॥

ಸುಖದುಃಖಗಳನ್ನೂ, ಜಯಾಪಜಯಗಳನ್ನೂ ಸಮವೆಂದೆಣಿಸಿ ಪ್ರಯತ್ನಿಸಿದರೆ ಪಾಪವು ನಮಜೀವಿಯನ್ನು ಸ್ಪರ್ಶಿಸಲಾರದು ಅಂದರೆ ನಮ್ಮಲ್ಲಿರುವ ಆಗ್ರಹಗಳೇ ನಮ್ಮ ದುಃಖಗಳಿಗೆ ಕಾರಣಗಳಾಗಿರುತ್ತವೆ. ಸುಖಭೋಗಗಳ ಮೇಲಿನ ಆಸಕ್ತಿಯಿಂದ ನಾವು ಉದ್ಯಮಿಸುತ್ತಲಿದ್ದೇವೆ, ಈ ಉದ್ಯಮಗಳು ಪರಾಜಯದಲ್ಲಿ ಕಲಾಶಿಸಿದರೆ, ನಾವು ಶೋಕಕ್ಕೆ ಒಳಗಾಗುತ್ತೇವೆ. ಈ ಸುಖದ ಮೇಲಿನ ಆಸಕ್ತಿಯು ನಮ್ಮ ಸಂತಾಪಕ್ಕಿರುವ ಕಾರಣವಾಗಿದೆ. ನಮಗೆ ಆ ಬಯಕೆಯು ಇಲ್ಲದಿದ್ದರೆ, ದುಃಖದ ದಾವಾಗ್ನಿಯು ಈ ರೀತಿ ನಮ್ಮ ಎದೆಗಳನ್ನು ಸುಡಲಾರದು. ಆದುದರಿಂದ ಶ್ರೀಕೃಷ್ಣನು ಲೋಕಕ್ಕೆ ಸಾರಿದ್ದಾನೆ 'ಕರ್ಮಣ್ಯೇ ವಾಧಿಕಾರಸ್ಥೇ, ಮಾ ಫಲೇಷು ಕದಾಚನ।' ಎಂಬುದಾಗಿ"

ಇದು ಆ ಗೆಳತಿಯರ ನಡುವೇ ನಡೆದ ಸಂಭಾಷಣೆಯ ಒಂದು ಭಾಗವಾಗಿರುತ್ತದೆ ಇಬ್ಬರವೂ ಹೆಣ್ಣು ಹೃದಯಗಳು! ಒಂದು ತನ್ನ ಪತಿಯು ತನ್ನ ಸತೀತ್ವದಲ್ಲಿ ಶಂಕಿಸಿ ಆಕೆಯನ್ನು ಪರಿತ್ಯಜಿಸಿದ ವಿರಹ ಸಂತಾಪದಿಂದ ಬಾಡಿದೆ! ಇನ್ನೊಂದು ತನ್ನ ನಲ್ಲನ ದುರಾಚಾರಗಳ ಮೂಲಕ ಪ್ರಾಪ್ತವಾದ ಉನ್ಮಾದದಿಂದ ನಾಡನ್ನು ತ್ಯಜಿಸಿದ ವಿಯೋಗಾಗ್ನಿಯಲ್ಲಿ ಬೆಯ್ಯುತ್ತಲಿದೆ! ವಿಧಿಯು ಲೀಲಾಸಾಗರದಲ್ಲಿ ಆ ಎರಡೂ ನೌಕೆಗಳು ತಮ್ಮ ದುಃಖಗಳ ಭಾರವನ್ನು ಹೊತ್ತುಕೊಂಡು ತೇಲುತ್ತಲಿದ್ದುವು.

ಈ ಎರಡು ಹೃದಯಗಳೂ ತಮ್ಮ ಇನಿಯರಿಂದಿರ ವಿಯೋಗದಿಂದ ಶೋಕ ಪರಿಪೂರ್ಣವಾಗಿದ್ದರೂ, ಅವುಗಳೆರಡಕ್ಕೂ ಅಂತರವಿದೆ. ಒಂದನೆಯದು ಆಧ್ಯಾತ್ಮಿಕ ವಿಚಾರಗಳ ಲೋಕದಲ್ಲಿ ಪ್ರವೇಶಿಸಿ ಆತ್ಮಶಾಂತಿಯನ್ನು ಹುಡುಕುತ್ತಲಿರುವುದು.

ಅಂಧಕಾರಾವೃತವಾದ ಆ ಹೃದಯದಲ್ಲಿ ಕೆಲವು ಬೆಳಕಿನ ಕಿರಣಗಳು ಬೀಳಲಾರಂಬಿಸಿದ್ದುವು; ಆದರೆ ಎರಡನೆಯವರಲ್ಲಿ ನಿರಾಶೆ, ಅಂಧಕಾರ, ಶೋಕಜ್ವಾಲೆ ಇವುಗಳಿಗಲ್ಲದೆ ಬೇರೆ ಯಾವುದಕ್ಕೂ ಅಲ್ಲಿ ಸ್ಥಾನವಿರಲಿಲ್ಲ. ಮೊದಲನೆಯದು ಜೀವನದ ದೋಣಿಯ ಅಂಬಿಗನು ಯಾರೆಂಬುದನ್ನೂ, ಅವನ ಲೀಲಾಜಾಲಗಳ ಮೂಲಕ ದುಃಖದ ಇರುಳೂ, ಸುಖದ ಬಿಸಿಲೂ ಬರುತ್ತಿರುವದರಿಂದ ಅವುಗಳನ್ನು ಕುರಿತು ಹಂಬಲಿಸಿ ಪ್ರಯೋಜನವಿಲ್ಲವೆಂಬುದನ್ನೂ ಅರಿತಿದ್ದಿತು. ಎರಡನೆಯದಕ್ಕೆ ಆ ಜ್ಞಾನವು ಲಭಿಸಿರಲಿಲ್ಲ; ಇವೇ ಆ ಎರಡು ಹೃದಯಗಳಿಗಿರುವ ಅಂತರವು!

ಸರೋಜಳ ಪತಿ ವೆಂಕಟರಾಮನು ಉನ್ಮಾದಗ್ರಸ್ತನಾದ ಅನಂತರ ಅವನು ತನ್ನ ನಿಲಯಕ್ಕೆ ಹಿಂದಿರುಗಿ ಬಂದಿರಲಿಲ್ಲ. ಅವನು ಒಂದೆರಡು ದಿನಗಳವರೆಗೆ ರಾಮನಗರದ ಬೀದಿಗಳಲ್ಲಿ ಅಲೆಯುತ್ತಲಿದ್ದನು. ಅನಂತರ ಅವನು ಎಲ್ಲಿಗೆ ಗಮಿಸಿದನೆಂಬುದನ್ನು ಬಲ್ಲವರು ಯಾರೂ ಇರಲಿಲ್ಲ. ಅವನ ಈ ವರ್ತನೆಯು ಯಾರನ್ನಾದರೂ ಶೋಕಸಾಗರದಲ್ಲಿ ಕೆಡಹಿದ್ದರೆ, ಅವಳು ಅವನ ಮಡದಿಯಾದ ಸರೋಜಳಾಗಿದ್ದಳು. ಆ ತರುಣಿಯ ದಾಂಪತ್ಯ ಜೀವನವೆಲ್ಲಾ ಅತ್ಯಂತ ಭಯಾನಕವಾದ ಒಂದು ಚಿತ್ರವಾಗಿದ್ದಿತು. ಅವಳ ಆ ಎಳೆಯ ಹೃದಯವನ್ನು ವೆಂಕಟರಾಮನ ದುರ್ವರ್ತನೆಗಳು ಹೇಗೆ ಗಾಯಪಡಿಸಿದುವು ಎಂಬುದನ್ನು ವಾಚಕರು ಈ ಮೊದಲೇ ತಿಳಿದುಕೊಂಡಿರಬಹುದು. ಅವಳ ದಾಂಪತ್ಯ ಜೀವನವು ನರಕತುಲ್ಯವಾಗಿದ್ದಿತು. ಆಹ್ಲಾದದ ಬಿಸಿಲನ್ನು ಅವಲೋಕಿಸಲು ಅವಳಿಗೆ ಸಾಧ್ಯವಾಗಲಿಲ್ಲ. ಭಯಂಕರವಾದ ಶೂನ್ಯತೆಯ ನಗ್ನರೂಪವಲ್ಲದೆ ಇನ್ನಾವುದೂ ಅವಳ ಬದುಕಿನಲ್ಲಿ ಗೋಚರಿಸಲಿಲ್ಲ. ಯಾರನ್ನು ಅವಳು ಆರಾಧಿಸುತ್ತಲಿದ್ದಳೋ, ಯಾರನ್ನು ತನ್ನ ಜೀವನಪ್ರವಾಸದ ಸಹಪಥಿಕನೆಂದು ನಂಬಿದ್ದಳೋ, ಆ ಪುರುಷನಿಗೆ-ಅವಳ ಜೀವನೇಶ್ವರನಿಗೆ ಅವಳ ಮೇಲೆ ತಿಲಾಂಶದಷ್ಟು ಮಮತೆಯಿರಲಿಲ್ಲ. ಅವಳ ಹೃದಯಾಂತರಾಳದಿಂದ ಹೊರಟ ಮೊರೆಯನ್ನು ಕೇಳಲು ಅವನ ಕಿವಿಗಳು ಕಿವುಡಾಗಿದ್ದುವು. ಆದರೂ ಅವಳು ಆ ದುಃಖಗಳನ್ನೆಲ್ಲವನ್ನೂ ಮೌನದಿಂದ ಸಹಿಸಿದಳು. ತನ್ನ ಗೆಳತಿಯಾದ ಪದ್ಮಳ ಮಾತುಗಳಲ್ಲಿ ನಂಬಿಕೆಯನ್ನಿಟ್ಟು ಸತ್ಯವೇ ಅಂತ್ಯದಲ್ಲಿ ಗೆಲುವುದೆಂದು ಅವಳು ಬಗೆದಳು.

ಆದರೆ ವೆಂಕಟರಾಮನು ಉನ್ಮಾದಪೀಡಿತನಾಗಲು ಅವಳ ಎದೆಯಲ್ಲಿ ದಾರುಣವಾದ ವ್ಯಸನಾಗ್ನಿಯು ಇನ್ನಷ್ಟು ತೀವ್ರವಾಗಿ ಉರಿಯತೊಡಗಿತು. ವಿಧಿಗೆ ಅವಳ ಕರುಣೆಯಿರಲಿಲ್ಲ. ಜೀವನವೇ ವಿಪತ್ತುಗಳಿಂದ ನಿಬಿಡವಾದ ಒಂದು ಭಯಂಕರ ಕಾಳರಾತ್ರಿಯೆಂದು ಅವಳಿಗೆ ಭಾಸವಾಯಿತು. ಸಹನೆಯನ್ನು ಮನುಷ್ಯನು ಎಲ್ಲಿಯವರೆಗೆ ಅನುಸರಿಸಬಹುದು? ಈ ಸಹನಾತ್ಮಕ ಬುದ್ಧಿಗೆ ಒಂದು ಮೇರೆಯಿಲ್ಲವೇ? ತಾನು ಇದುವರೆಗೆ ಎಲ್ಲವನ್ನೂ ಸಹಿಸಿದುದಕ್ಕೆ, ಸತ್ಯವನ್ನು ನಂಬಿ ತ್ಯಾಗದಲ್ಲಿ ಬಾಳಿದುದಕ್ಕೆ, ದೊರಕಿದ ಫಲವು ಮೊದಲಿಗಿಂತಲೂ ದಾರುಣವಾದ ವಿಪತ್ತುಗಳಾಗಿದ್ದುವು. ನಾನು ಇದುವರೆಗೆ ಅನುಷ್ಠಿಸಿದ್ದ ಧರ್ಮವು ಏಕೆ ಕೆಸರಿನ ಕೂಪದಲ್ಲಿ ಬಿದ್ದಿರುವ ತನ್ನ

ಪತಿಯನ್ನು ರಕ್ಷಿಸಲಿಲ್ಲ? ಕಾರುಣ್ಯನಿಧಿಯು ಜಗದೀಶ್ವರನೆಂದು ಜನರು ಹೇಳುತ್ತಾರೆ; ಆದರೆ ಅವನೇಕೆ ಈ ಬೆಂಕಿಯಿಂದ ತನ್ನನ್ನು ಕೈ ಹಿಡಿಯಲಿಲ್ಲ?" ಎಂಬಿತ್ಯಾದಿ ವಿವಿಧ ಚಿಂತೆಗಳು ಆ ಹೆಣ್ಣಿನ ಹೃದಯದಲ್ಲಿ ಮೂಡಿದುವು. ಶೂನ್ಯತೆಯನ್ನಲ್ಲದೆ ಇನ್ನಾವುದನ್ನು ವೀಕ್ಷಿಸಲೂ ಅವಳಿಗೆ ಸಾಧಿಸಲಿಲ್ಲ.

ವೆಂಕಟರಾಮನು ಹುಚ್ಚು ಹಿಡಿದು, ತನ್ನ ಊರನ್ನು ತ್ಯಜಿಸಿದ ಅನಂತರ ಸರೋಜಳನ್ನು ಸಂತೈಸಲು ಪದ್ಮಳಿಲ್ಲದೆ ಹೋಗಿದ್ದರೆ, ಅವಳೂ ಆ ಶೋಕಭಾರವನ್ನು ಸಹಿಸದೆ ಹುಚ್ಚಳಾಗುತ್ತಿದ್ದಳು! ಆದರೆ ಅವಳ ಗೆಳತಿಯ ಸ್ನೇಹವು ಸರೋಜಳನ್ನು ಆ ವಿಪತ್ತಿನಿಂದ ರಕ್ಷಿಸಿತು. ಪದ್ಮಳು ತನ್ನ ಗೆಳತಿಯನ್ನು ಹೊಸೂರಿನಲ್ಲಿರುವ ತನ್ನ ಗುಡಿಸಿಲಿಗೆ ಕರೆದೊಯ್ದಳು. ಅಲ್ಲಿನ ಸೃಷ್ಟಿಸೌಂದರ್ಯವೂ, ಶಾಂತತೆಯ ವಾತಾವರಣವೂ ಪ್ರಕ್ಷುಬ್ಧವಾದ ಸರೋಜಳ ಮನಸ್ಸನ್ನು ಸ್ತಿಮಿತ ಗತಿಗೆ ತರಲು ಪರ್ಯಾಪ್ತವಾಗಬಹುದೆಂದು ಬಗೆದಿದ್ದಳು; ಆದರೆ ನಿರಾಶೆಯನ್ನು ಹೊಂದಿದ ಸರೋಜಳ ಎದೆಯು ಚಿಗುರುವಂತಿರಲಿಲ್ಲ. ಪದ್ಮಳ ಉಪದೇಶಗಳಾಗಲೀ, ಸತ್ಯವೇ ಗೆಲ್ಲುವುದು ಎಂಬ ತತ್ವವಾಗಲೀ ಅವಳ ಮನಸ್ಸನ್ನು ಗಣಿಸದೆ ಹೋದುವು. ಅವಳಿಗೆ ಬದುಕು ಒಂದು ರಹಸ್ಯವಾಗಿ ತೋರಿತು. ಶೋಕವಲ್ಲದೆ ಇನ್ನಾವುದೂ ಬಾಳಿನಲ್ಲಿ ಇಲ್ಲವೆಂದು ಅವಳು ಬಗೆದಳು. ಇದುವರೆಗೆ ಅವಳು ಅನುಭವಿಸಿದ್ದ ದಾರುಣವಾದ ಸಂಕಟಗಳು ಅವಳನ್ನು ಈ ರೀತಿ ಚಿಂತಿಸುವಂತೆ ಪ್ರೇರೇಪಿಸಿದುವು. "ತಾನು ಸಾಯುವದಕ್ಕೆ ಮೊದಲೇ ಶೋಕದಿಂದ ನೂರು ಬಾರಿ ತನ್ನ ಎದೆಯನ್ನು ಸುಟ್ಟುಕೊಳ್ಳುವದಕ್ಕಾಗಿ ಮನುಷ್ಯನು ಬಾಳುತ್ತಾನೆ" ಇದಾಗಿತ್ತು ಅವಳ ಅಭಿಪ್ರಾಯ!

ಪದ್ಮಳ ನಿರ್ದೇಶದಂತೆ ಗೀತಾವಾಚನವನ್ನು ಸರೋಜಳು ಕೈಗೊಂಡಿದ್ದಳು. ಶ್ರೀ ಭಗವದ್ಗೀತೆಯನ್ನು ಓದಿ ಅದರ ತಾತ್ಪರ್ಯವನ್ನು ತಿಳಿದುಕೊಂಡರೆ, ಆತ್ಮಕ್ಕೆ ಅಪಾರವಾದ ಶಾಂತಿಯು ದೊರಕುವುದೆಂದು ಪದ್ಮಳು ನುಡಿದಿದ್ದಳು; ಆದರೆ ಆ ಶಾಂತಿಯನ್ನು ಪಡೆಯಲು ಸರೋಜಳು ಅಸಮರ್ಥಳಾದಳು. ಕಾರಣವಿಷ್ಟೇ, ಅವಳು ಇದುವರೆಗೆ ಅನುಭವಿಸಿದ ಕಷ್ಟಗಳ ಮೂಲಕ ಅವಳ ಬುದ್ಧಿಯು ಕುಂಠಿತಭಾವವನ್ನು ಹೊಂದಿದ್ದಿತು; ತಿಳಿದುಕೊಳ್ಳುವದಕ್ಕಿರುವ ಚೈತನ್ಯವು ಅವಳಲ್ಲಿರಲಿಲ್ಲ. ಆದುದರಿಂದ ಗೀತಾವಾಚನವು ಅವಳಿಗೆ ಶಾಂತಿಯನ್ನು ನೀಡಲಿಲ್ಲ.

ಸರೋಜಳು ಈ ರೀತಿ ನಿರಾಶಾಭರಿತಳಾಗಿ ಕಾಲಹರಣೆಯನ್ನು ಮಾಡುತ್ತಿದ್ದರೆ, ಪದ್ಮಳ ಹೃದಯವು ನಿರಾಶೆಯನ್ನು ಹೊಂದಿರಲಿಲ್ಲ. ತನ್ನ ಪತಿಯ ವಿಯೋಗದಿಂದ ಅವಳು ಅಪಾರವಾದ ದುಃಖವನ್ನು ಅನುಭವಿಸಿದಳೆಂಬುದು ನಿಜವು. ಕೆಲವು ತಿಂಗಳುಗಳ ವರೆಗೆ ತನ್ನ ಬಾಳಿನಲ್ಲಿ ಭಯಂಕರವಾದ ಯಾಮಿನಿಯನ್ನಲ್ಲದೆ ಇನ್ನಾವುದನ್ನೂ ಅವಳು ಅವಲೋಕಿಸಲಿಲ್ಲ; ಆದರೆ ಅವಳ ಆತ್ಮಕ್ಕೆ ಶಾಂತಿಪಿಯೂಷದ ಒಂದು ಬಿಂದುವು ಲಭಿಸಿತು. ವಿಪತ್ಕಾಲದಲ್ಲಿ ಅವಳಿಗೆ ದೊರಕಿದ ಆ ಯೋಗಿರಾಜನ ಉಪದೇಶಗಳು ಅವಳಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸಿದುವು. ಅವಳು ಕೇವಲ

ಭಾವನಾಪ್ರಧಾನಳಾಗಿ, ಗಾಳಿಯ ಗೋಪುರಗಳನ್ನು ರಚಿಸುತ್ತಾ ಕುಳಿತುಕೊಳ್ಳುವ ಹೆಂಗಸಾಗಿರಲಿಲ್ಲ ಪ್ರಯತ್ನವು ಬಾಲ್ಯಕಾಲದಿಂದಲೇ ಅವಳಿಗಿರುವ ಗುಣವಾಗಿದ್ದುದರಿಂದ ಒಂದು ನಿಮಿಷವಾದರೂ ಅಲಸಳಾಗಿರಲು ಅವಳಿಗೆ ಸಾಧಿಸಲಿಲ್ಲ. ಇದಲ್ಲದೆ ಅವಳ ಗ್ರಾಮವಾಸಕಾಲದಲ್ಲಿ ತನ್ನ ಭಾವನೆಗಳನ್ನು ಉದ್ಯಮರೂಪದಲ್ಲಿ ಕೊಡುಬರಲು ಅನುವು ದೊರಕಿತು. ಗ್ರಾಮೀಣ ಹೆಂಗಸರ ಮಧ್ಯದಲ್ಲಿ ವಿದ್ಯಾಪ್ರಚಾರವನ್ನು ಮಾಡುವ ಕೆಲಸವನ್ನು ಅವಳು ಕೈಗೊಂಡಳು. ಈ ಕೃತ್ಯಕ್ಕೆ ಅವಳನ್ನು ಪ್ರೇರಿಸಿದುದು ಅವಳಲ್ಲಿ ಬೆಳಗುತ್ತಿರುವ ದೇಶಾಭಿಮಾನವಾಗಿದಿತು. "ಲಲನೆಯರೇ ನಾಡ ಏಳಿಗೆಗೆ ಕಾರಣಭೂತರು" ಎಂಬ ಅವಳ ಸಿದ್ಧಾಂತವನ್ನು ಹಿಂದೊಮ್ಮೆ ಅವಳು ಸರೋಜಳಿಗೆ ನೀಡಿದ ಉಪದೇಶದಿಂದ ವಾಚಕರು ತಿಳಿದುಕೊಂಡಿರಬಹುದು. ಜನಾಂಗದ ಜನನಿಯರು ಅವಿದ್ಯಾವತಿಯರಾದರೆ ರಾಷ್ಟ್ರವು ಏಳಿಗೆಯನ್ನು ಹೊಂದುವುದು ಅಶಕ್ಯವು; ಪುರುಷನನ್ನು ಮಹತ್ಕಾರ್ಯಗಳನ್ನು ಸಾಧಿಸುವಂತೆ ಪ್ರೇರಿಸುವ ಶಕ್ತಿಯು ಹೆಂಗುಸಾಗಿದ್ದಾಳೆ, ಎಂಬುದನ್ನು ಅವಳು ಮರೆತಿರಲಿಲ್ಲ.

ಪದ್ಮಳ ಗ್ರಾಮವಾಸವು ಒಂದು ತಪಸ್ಸಾಗಿದಿತು; ಇನಿಯನ ವಿಯೋಗದಿಂದ ಅವಳಲ್ಲಿ ಉದ್ಭವಿಸಿದ ವಿರಕ್ತಿಯು ಜನಸೇವೆಯಲ್ಲಿ ನಿರತಳಾಗುವಂತೆ ಅವಳನ್ನು ಪ್ರೇರೇಪಿಸಿತು. ಸರೋಜಳಂತೆ ಅವಳಿಗೂ ಲೌಕಿಕಜೀವನದಲ್ಲಿ ಆಗ್ರಹವಿರಲಿಲ್ಲ; ಆದರೆ ಅವಳು ನಿರಾಶೆಯನ್ನು ಹೊಂದಲಿಲ್ಲ. ಉತ್ಸಾಹದಿಂದ ತನ್ನ ಆತ್ಮವನ್ನೂ ತನ್ನ ನಾಡಿನ ಲಲನೆಯರನ್ನೂ ಉದ್ಧರಿಸುವ ಯತ್ನದಲ್ಲಿ ಅವಳು ನಿರತಳಾದಳು ಅವಳು ವಾಸಿಸುತ್ತಿರುವ ಗುಡಿಸಿಲೇ ಹಳ್ಳಿಯ ಹೆಂಗಸರಿಗೆ ವಿದ್ಯಾದಾನವನ್ನು ಮಾಡಲಿರುವ ಶಾಲೆಯಾಯಿತು ತಮ್ಮ ವಿರಾಮ ವೇಳೆಯಲ್ಲಿ ತನ್ನ ನಿಲಯಕ್ಕೆ ಆಗಮಿಸುತ್ತಲಿರುವ ಹೆಂಗಸರಿಗೆ ಜ್ಞಾನದ ಬೆಳಕನ್ನು ಯಾವ ಬೇಸರವೂ ಇಲ್ಲದೆ ಪದ್ಮಳು ಕೊಡುತ್ತಲಿದ್ದಳು. ರಾಮಾಯಣದ ಮಹಾಕಥೆಯನ್ನು ಅವಳು ಹೆಂಗಸರಿಗೆ ಹೇಳಿಕೊಡುತ್ತಲಿದ್ದಳು. ಸೀತೆಯೇ ಭಾರತವನಿತೆಯರಿಗೆ ಆದರ್ಶಸ್ವರೂಪಳೆಂಬುದನ್ನು ಅವಳು ವಿವರಿಸಲು ಎಂದಿಗೂ ಮರೆಯುತ್ತಿರಲಿಲ್ಲ. ಔದಾರ್ಯ, ಪರಹಿತಕಾಂಕ್ಷೆ, ಸಹನೆ ಎಂಬಿತ್ಯಾದಿ ದಿವ್ಯಗುಣಗಳಿಂದ ಮನುಷ್ಯನಿಗೆ ಲಭಿಸಬಹುದಾದ ಅಭ್ಯುನ್ನತೆಯನ್ನು ಅವಳು ಗ್ರಾಮಲಲನೆಯರಿಗೆ ತಿಳಿಸಿದಳು. ಒಂದು ಮಾತಿನಲ್ಲಿ ಹೇಳುವುದಾದರೆ, ಹೊಸೂರುಗ್ರಾಮವನ್ನು ಉದ್ಧರಿಸಲು ಬಂದ ಒಬ್ಬ ದೇವತೆಯು ಅವಳಾಗಿದ್ದಳು.

ಮಾಧವನು ನಗರದಲ್ಲಿಯೇ ತನ್ನ ದಿನಗಳನ್ನು ವ್ಯಯಗೊಳಿಸುತ್ತಲಿದ್ದನು. ಅವನ ಜೀವನವಾದರೂ ಉದ್ಯಮಗಳಿಂದ ನಿಬಿಡವಾದುದು. ರಾಮನಗರದಲ್ಲಿ ಅವನೊಬ್ಬ ಶ್ರೇಷ್ಠ ತರಗತಿಯ ನ್ಯಾಯವಾದಿಯೆಂದು ಹೆಸರು ಪಡೆದಿದ್ದನು; ಆದರೆ ಆತನ ಮಹಿಮೆಯು ನೆಲೆನಿಂತದ್ದು ಅದರಲ್ಲಾಗಿರಲಿಲ್ಲ. ರಂಗನು ತೆರಳಿದ ಅನಂತರ ಆ ಗೆಳೆಯರಿಬ್ಬರೂ ಸ್ಥಾಪಿಸಿದ್ದ ಆ ವಾರಪತ್ರಿಕೆಯ ಸರ್ವ ಭಾರವನ್ನೂ ಮಾಧವನೇ

ಹೊರಬೇಕಾಗಿ ಬಂದಿತು; ಆದರೆ ಅವನು ಆ ಕೆಲಸಕ್ಕೆ ಹಿಂಜರಿಯಲಿಲ್ಲ. ಪತ್ರಿಕೆಯ ಸಂಪಾದನೆಯನ್ನು ಅವನು ಮಾಡತೊಡಗಿದನು ಅವನು ಆ ಪತ್ರಿಕೆಯಲ್ಲಿ ತೀವ್ರವೂ ನೀತಿಬೋಧಕವೂ ಆದ ಲೇಖನಗಳಿಂದ ನಿದ್ದೆಯಲ್ಲಿ ಬಿದ್ದಿರುವ ತನ್ನ ನಾಡನ್ನು ಜಾಗೃತಗೊಳಿಸಿದನು. ಪಡುವಣದ ಗಾಳಿಗೆ ಒಳಗಾದ ಭಾರತಭೂಮಿಯು ದಾಸ್ಯಾಂಧಕಾರಾವೃತವಾಗಿ ಬಳಲುತ್ತಿರುವ ಚಿತ್ರವನ್ನು ಮಾಧವನು ಜನರ ಮುಂದಿಟ್ಟನು. ತನ್ನ ಪತ್ರಿಕೆಯ ಮುಖೇನ ನಾಡಿನ ಏಳಿಗೆಗಿರುವ ಪಥವು ಯಾವುದೆಂಬುದನ್ನು ಅವನು ತೋರಿಸಿದನು.

ಪತ್ರ ಸಂಪಾದನೆಯೂ ಬರೆವಣಿಗೆಯೂ ಮಾತ್ರ ಅವನ ಕೆಲಸಗಳಾಗಿರಲಿಲ್ಲ. ಅವನ ಪ್ರಯತ್ನಗಳ ಮೂಲಕ ಎಷ್ಟೋ ರಾತ್ರಿಯ ಪಾಠಶಾಲೆಗಳು ನಗರವಾಸಿಗಳ ಮಧ್ಯದಲ್ಲಿ ಪಸರಿಸಿರುವ ನಿರಕ್ಷರಕುಕ್ಷಿತ್ವವನ್ನು ಹೋಗಲಾಡಿಸುವದಕ್ಕಾಗಿ ಉದಯಿಸಿದುವು. ಮಾಧವನೇ ರಾತ್ರಿ ಸಮಯದಲ್ಲಿ ಜನರಿಗೆ ಪಾಠಗಳನ್ನು ಹೇಳಿಕೊಡುತ್ತಲಿದ್ದನು. ಇದಲ್ಲದೆ ನಗರದಲ್ಲಿ ಆಗಾಗ ಸಭೆಗಳನ್ನು ಕೂಡಿಸಿ ಅವನು ಭಾರತವರ್ಷದ ಸದ್ಯದ ಪರಿಸ್ಥಿತಿಯನ್ನು ಕುರಿತು ಭಾಷಣಗಳನ್ನು ಮಾಡುತ್ತಿದ್ದನು ಹೀಗೆ ವಿವಿಧ ಉದ್ಯಮಗಳಿಂದ ನಿಬಿಡವಾಗಿದ್ದಿತು ಅವನ ಜೀವನವು; ಆದರೆ ಆ ಕೆಲಸಗಳಲ್ಲಿ ಅವನಿಗೆ ಸ್ವಲ್ಪವೂ ಬೇಸರವಿರಲಿಲ್ಲ ಅವನಲ್ಲಿರುವ ಉತ್ಸಾಹವು ಕುಂದುತ್ತಿರಲಿಲ್ಲ ವಿಪತ್ತುಗಳೆಷ್ಟು ಬಂದರೂ ಅವುಗಳನ್ನು ಎದೆಗುಂದದೆ ಎದುರಿಸುವದು ಮಾಧವನ ಸ್ವಭಾವವಾಗಿತ್ತು.

ಇವೆಲ್ಲ ಕೆಲಸಗಳಿಂದ ಅವನ ಬದುಕು ನಿಬಿಡವಾಗಿದ್ದರೂ ತನ್ನ ವಾರಾಂತ್ಯವನ್ನು ಹೊಸೂರಿಗೆ ತೆರಳಿ ಪದ್ಮಳೊಡನೆ ಕಳೆಯಲು ಅವನು ಎಂದಿಗೂ ಮರೆಯುತ್ತಿರಲಿಲ್ಲ. ಪದ್ಮಳ ಮೇಲೆ ಅವನಿಗಿರುವ ಸ್ನೇಹವು ಅಪಾರವಾದದ್ದು; ಪದ್ಮಳು ಅವನ ಕುಟುಂಬದವಳಲ್ಲದಿದ್ದರೂ, ಅವಳನ್ನು ಮಾಧವನು ಸ್ವಂತ ಸಹೋದರಿಯಂತೆ ಪ್ರೀತಿಸುತ್ತಲಿದ್ದನು. ಆದುದರಿಂದಲೇ ಅವನು ಪ್ರತಿ ಹಪ್ತೆಯಲ್ಲಿಯೂ ಹೊಸೂರಿಗೆ ನಿರ್ಗಮಿಸಿ ತನ್ನ ವಾರಾಂತ್ಯವನ್ನು ಪದ್ಮಳೊಡನೆ ವ್ಯಯಗೊಳಿಸುತ್ತಲಿದ್ದನು.

ಪದ್ಮಳೂ ಸರೋಜಳೂ ಈ ಪರಿಚ್ಛೇದದ ಪ್ರಾರಂಭದಲ್ಲಿ ಹೇಳಿದಂತೆ ಮಾತಾಡುತ್ತಲಿದ್ದ ದಿನವು ಒಂದು ಶನಿವಾರವಾಗಿದ್ದಿತು. ದುಃಖಿನಿಯಾದ ಸರೋಜಳಿಗೆ ಅವಳ ಗೆಳತಿಯು ಮೇಲೆ ಹೇಳಿದ ಉಪದೇಶಗಳನ್ನು ನೀಡುತ್ತಿರುವಾಗ ಮಾಧವನು ಅಲ್ಲಿಗೆ ಬಂದು ತಲುಪಿದನು. ಅವನು ಬರಲು ಪದ್ಮಳು ತನ್ನ ನುಡಿಗಳನ್ನು ನಿಲ್ಲಿಸಿದಳು. ಮಾಧವನು ಗುಡಿಸಲಿನ ಜಗುಲಿಯ ಮೇಲೆ ಹಾಸಿದ ಒಂದು ಚಾಪೆಯ ಮೇಲೆ ಆಸೀನನಾದನು. ಅನಂತರ ಅವನು ಒಂದು ನಗೆಯನ್ನು ಚೆಲ್ಲಿದನು. "ಅಕ್ಕಾ, ಸರೋಜಳಿಗೆ ನೀನು ಯಾವುದೋ ಒಂದು ತತ್ವಬೋಧೆಯನ್ನು ಮಾಡುತ್ತಿದ್ದೆಯಲ್ಲವೆ?"

"ತತ್ವಬೋಧೆಯಲ್ಲ ಮಾಧೂ. ಅವಳು ಯಾವಾಗ ನೋಡಿದರೂ ಕಂಬನಿಯ ಕಾಲುವೆಯನ್ನು ಹರಿಸುತ್ತ ದಿನಗಳನ್ನು ಕಳೆಯುತ್ತಿರುವಳು. ಅವಳು ಈ ರೀತಿ ಬೆಯ್ಯುತ್ತಿರುವ ಚಿತ್ರವನ್ನು ನೋಡಲು ನನ್ನಿಂದ ಸಾಧ್ಯವಾಗುವದಿಲ್ಲ"

"ತಂಗೀ, ಸರೋಜ!" ಎಂದು ಪ್ರೇಮಪರಿಪೂರ್ಣವಾದ ಸ್ವರದಲ್ಲಿ ಮಾಧವನು:—"ನೀನು ಈ ರೀತಿ ವ್ಯಸನಭರಿತಳಾಗಿರುವದು ಉಚಿತವಲ್ಲ. ಶೋಕವು ಮಾನವನ ಹೃದಯ ದೌರ್ಬಲ್ಯವನ್ನು ಸೂಚಿಸುತ್ತಲಿದೆ. ಬಲಶೂನ್ಯನಾದವನು ಏನನ್ನೂ ಮಾಡಲಾಪನು. ಅದುದರಿಂದ ಧೈರ್ಯವನ್ನು ತಾಳು!"

"ಎಲ್ಲಿಯವರೆಗೆ ತಾಳಲಿ! ಈ ವಿಪತ್ತುಗಳಿಗೆ ಒಂದು ಮೇರೆಯಿಲ್ಲವೆ?"

"ತಂಗೀ, ದುಡುಕಬೇಡ; ಈ ವಿಪತ್ತುಗಳೆಂಬವು ಮನುಷ್ಯನನ್ನು ಪರೀಕ್ಷಿಸಲಿರುವ ಒರೆಗಲ್ಲುಗಳಾಗಿರುತ್ತವೆ. ಆ ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾಗಬೇಕು; ಹಾಗಾದರೆ ಮಾತ್ರ ಜಯವಿದೆ. ಬಲಹೀನನಾದವನ ಕಂಠಕ್ಕೆ ವಿಜಯ ಹಾರವು ಬೀಳಲಾರದು."

"ಅಣ್ಣಾ, ನನ್ನ ಜೀವನದ ಭಾಸ್ಕರನೇ ಗ್ರಹಣಗ್ರಸ್ತನಾಗಿರುವಾಗ ಬೆಳಕನ್ನು ಹೇಗೆ ನೋಡಲಿ! ಬಲವನ್ನು ನೀಡಬೇಕಾದ ವಸ್ತುವೇ ನನ್ನ ಕೈಬಿಟ್ಟಿರುವಾಗ ಹೇಗೆ ಧೈರ್ಯವನ್ನು ತಾಳಲಿ?"

"ತಂಗೀ, ವೆಂಕಟರಾಮನನ್ನು ಅವನ ಪ್ರಾರಬ್ಧವು ಆ ಹೀನದೆಸೆಗೆ ಎಳೆದೊಯ್ದಿತು. ನಿನ್ನಂತೆಯೇ ಪದ್ಮಳಾದರೂ ಬೆಂದ ಹೃದಯದವಳಲ್ಲವೆ? ಆದರೆ ಅವಳು ನಿನ್ನಂತೆ ಸದಾ ಕಂಬನಿ ಹರಿಸುತ್ತಲಿರುವಳೇ? ಅವಳಿಗೆ ಅದೆಷ್ಟು ದಾರುಣವಾದ ವಿಪತ್ತುಗಳು ಬಂದಿದರೂ ಅಂಜದೆ ಮೌನದಲ್ಲಿ ಅವುಗಳನ್ನೆಲ್ಲ ಸಹಿಸಿ, ತನ್ನ ಬಾಳನ್ನು ಸಾರ್ಥಕಪಡಿಸಿಕೊಳ್ಳುವ ಉದ್ಯಮದಲ್ಲಿ ಅವಳು ನಿರತಳಾಗಿರುತ್ತಾಳೆ. ಅದರಂತೆಯೇ ನೀನಾದರೂ ನಿನ್ನಲ್ಲಿರುವ ಶಕ್ತಿಯನ್ನು ಉಪಯೋಗಪ್ರದವಾದ ಒಂದು ದಾರಿಯಲ್ಲಿ ವಿನಿಯೋಗಿಸು. ನಿನ್ನ ಅಭ್ಯುದಯವು ನಿನ್ನ ಕರಗಳಲ್ಲಿಯೇ ಇರುವುದು. ಒದಗಿದ ವಿಪತ್ತುಗಳನ್ನು ಕಂಡು ಹತಾಶಳಾಗುವುದು ಶಕ್ತಿಸ್ವರೂಪಿಣಿಯಾದ ಮಹಿಳೆಗೆ ಹೇಳದುದಲ್ಲ"

"ಅಣ್ಣಾ, ಈ ತತ್ವಗಳನ್ನು ಶ್ರಾವಿಸುವಾಗ ಅಲ್ಪವಾದ ಬೆಳಕು ಗೋಚರಿಸುತ್ತಿದೆ! ಆದರೆ ಈ ಜಗತ್ತಿನಲ್ಲಿ ಸತ್ಯವು ಜಯಹೊಂದುವುವೇ?"

"ನಿಶ್ಚಯವಾಗಿಯೂ!

"ಸದಾ ಸತ್ಯಪಥದಲ್ಲಿಯೇ ಗಮಿಸುತ್ತಿರುವ ನನಗೆ ಏಕೆ ಈ ವಿಪತ್ತುಗಳು ಪ್ರಾಪ್ತವಾದುವು?"

ಸರೋಜಳ ಈ ಪ್ರಶ್ನೆಯು ಮಾಧವನನ್ನು ಗೊಂದಲದಲ್ಲಿ ಕೆಡಹಿತು ಸರೋಜಳು ಸತ್ಯದ ದಾರಿಯನ್ನೇ ಹಿಡಿದು ಗಮಿಸುತ್ತಿರುವಳೆ ಬುದನ್ನು ಅವನು ಬಲ್ಲನು. ಅವಳನ್ನು ಪಾಪವು ಸ್ಪರ್ಶಿಸಿರಲಿಲ್ಲ ಕೃತ್ರಿಮದ ಛಾಯೆಯು ಅವಳಲ್ಲಿರಲಿಲ್ಲ; ಅವಳ

ಜೀವನವು ಪರಿಶುದ್ಧವಾದುದಾಗಿದ್ದಿತು. ಅವಳನ್ನು ಶೋಕವು ಸ್ಪರ್ಶಿಸಲು ಕಾರಣ ವೇನು? ಇದು ನಿಜವಾಗಿಯೂ ಒಂದು ಬಿಕ್ಕಟ್ಟಿನ ಪ್ರಶ್ನೆಯು! ಸತ್ಯವನ್ನು ಅವಲಂಬಿಸಿದವನಿಗೆ ಭಯವಿಲ್ಲ, ಎಂಬ ಮಾತು ವಾಸ್ತವವಾಗಿದ್ದರೆ ಸರೋಜಳೇಕೆ ಈ ಅನರ್ಥಗಳಿಗೆ ಈಡಾದಳು? ಸತ್ಯಕ್ಕೆ ಶಕ್ತಿಯಿಲ್ಲದೆ ಹೋದರೆ ಈ ಜಗತ್ತಿಗೆ ಆಧಾರ ವಾದುದಾದರೂ ಯಾವುದು? ಎಂಬಿತ್ಯಾದಿ ವಿವಿಧ ಸಮಸ್ಯೆಗಳು ಮಾಧವನ ಮನಸ್ಸಿ ನಲ್ಲಿ ಉದ್ಭವಿಸದೆ ಇರಲಿಲ್ಲ. ಅವನು ಕೆಲವು ನಿಮಿಷಗಳವರೆಗೆ ಮೌನವನ್ನು ಅವ ಲಂಬಿಸಿ ಆಲೋಚಿಸತೊಡಗಿದನು. ಅವನ ನೇತ್ರಗಳು ಹೊಳೆದುವು; ತನ್ನ ಮುಂದಿ ರುವ ನೀಲವರ್ಣದ ಅಂತರಿಕ್ಷವನ್ನು ಅವಲೋಕಿಸುತ್ತ ನುಡಿದನು. ಅವನ ಮುಖ ಭಾವವು ಶಾಂತತೆಯನ್ನು ಹೊಂದಿದ್ದಿತು. ಕಲ್ಲೋಲ ಕಲ್ಲೋಲವಾಗಿರುವ ಈ ವಿಶ್ವ ದಲ್ಲಿ ಯಾವ ಚಲನೆಯೂ ಇಲ್ಲದೆ ಧ್ರುವತಾರೆಯಂತೆ ಬೆಳಗುತ್ತಿರುವ ಒಬ್ಬ ಸ್ಥಿರ ಪ್ರಜ್ಞನ ರೂಪವು ಮಾಧವನ ಆಗಲಿನ ಗಂಭೀರ ಮುಖಮುದ್ರೆಯನ್ನು ನೋಡು ವಾಗ ಸರೋಜಳ ಮನದಲ್ಲಿ ಮೂಡಿತು. ಗೌರವಪುರಸ್ಸರವಾದ ದೃಷ್ಟಿಯಲ್ಲಿ ಅವಳು ಅವನನ್ನು ವೀಕ್ಷಿಸಿದಳು. ಮಾಧವನ ವದನಮಂಡಲದಿಂದ ಹಿಮಾಚಲ ದಿಂದ ಪ್ರವಹಿಸುತ್ತಿರುವ ಗಂಗಾಪ್ರವಾಹದಂತೆ ನುಡಿಗಳ ಹೊಳೆಯು ಹರಿದಿತು:

"ಸರೋಜ, ಜೀವನವು ನಿಜವಾಗಿಯೂ ಬಿಡಿಸಲಾಗದ ಒಂದು ಒಗಟು; ತತ್ವ ಶಾಸ್ತ್ರದ ಪ್ರಕಾಶವನ್ನು ಚೆಲ್ಲಿ ಜಗತ್ತನ್ನು ನೋಡಲು ಮಾನವನು ಪ್ರಯತ್ನಿಸು ತ್ತಾನೆ; ಆದರೆ ತತ್ವಶಾಸ್ತ್ರವು ಜೀವನಕ್ಕೆ ಸಂಬಂಧಿಸಿದ ಕೆಲವು ಅಚಲವಾದ ತತ್ವ ಗಳನ್ನು ತೋರಿಸುತ್ತವೆಯೇ ಹೊರತು, ಅದಕ್ಕಿಂತ ಒಂದು ಹೆಜ್ಜೆ ಮುಂದಕ್ಕೆ ಒಯ್ಯ ಲಾರದು. ನಿರಪರಾಧಿ ಹಾಗೂ ನಿಷ್ಕಲಂಕ ಹೃದಯಗಳು ನೋಡದ ಬೆಂಕಿಯಲ್ಲಿ ಬೀಳುವುದನ್ನು ನೋಡುವಾಗ ಸತ್ಯದಲ್ಲಿ ನನಗಿರುವ ನಂಬಿಕೆಯು ನಶಿಸಿಹೋಗುವು ದುಂಟು. ಹಲವು ಸಾರೆ ಲೋಕದಲ್ಲಿ ಯಾವ ವ್ಯವಸ್ಥೆಯೂ ಇಲ್ಲವೇ? ಎಂಬ ಸಂದೇಹವು ಜನಿಸುತ್ತಿದೆ; ಆದರೆ ಈ ಸಂದೇಹಗಳೂ ಈ ಮಾಯೆಯೂ ಕ್ಷಣಕಾಲ ನನ್ನ ಬುದ್ಧಿಯನ್ನು ಮಂಕುಗೊಳಿಸುತ್ತಿರುವುವಷ್ಟೆ? ಈ ಕೋಲಾಹಲ ನಿಬಿಡವಾದ, ಅವ್ಯವಸ್ಥಿತವಾದ ಜಗತ್ತಿನ ಅಂತರಂಗದಲ್ಲಿ ಸ್ಥಿರವೂ, ಪ್ರಶಾಂತವೂ, ಮನೋಹರ ವೂ ಆದ ಒಂದು ಲೋಕವನ್ನು ನಾನು ನೋಡುತ್ತಿರುವೆನು. ಆ ಶಾಂತತೆಯನ್ನು, ಆ ಸೌಂದರ್ಯವನ್ನು ಮನುಷ್ಯನು ಕಾಣದಿರುವದಕ್ಕೆ ಕಾರಣವು ಅವನ ಬಲಹೀನತೆ ಯಾಗಿದೆ. ವಿಪತ್ತುಗಳು ಮನುಷ್ಯನನ್ನು ಪರೀಕ್ಷಿಸಲಿರುವ ಒರೆಗಲ್ಲುಗಳಾಗಿರುತ್ತವೆ. ಆ ಪರೀಕ್ಷೆಯಲ್ಲಿ ಅವನು ವಿಜಯವನ್ನು ಹೊಂದಬೇಕು; ಇದಲ್ಲದೆ ಉದ್ಯಮನಿರತ ನಾಗಿ ಕರ್ಮಗಳನ್ನು ಅನುಷ್ಠಿಸಬೇಕು!"

"ಅಣ್ಣಾ, ಕರ್ಮಗಳಲ್ಲಿ ನಿರತಳಾಗಬೇಕೆಂದು ಏಕೆ ಹೇಳುತ್ತಿರುವೆ? ಕರ್ಮ ಗಳಿಂದ ದೂರವಾಗಿರುವದೇ ಶ್ರೇಯಸ್ಕರವಲ್ಲವೆ?"

"ಭೀರುಗಳೂ ಶಕ್ತಿಯಿಲ್ಲದವರೂ ಕರ್ಮದ ದಾರಿಯನ್ನು ಕಂಡು ಹೆದರುತ್ತಾರೆ;

ಏಕೆಂದರೆ ಅವರ ಮನಸ್ಸು ದೃಢವಾದುದಲ್ಲ. ಉನ್ನತವಾದ ತತ್ವಗಳನ್ನು ಬಾಯಲ್ಲಿ ನುಡಿದು, ಈ ಹೇಡಿಗಳು ತಮ್ಮಲ್ಲಿರುವ ಪೌರುಷಶೂನ್ಯತೆಯನ್ನು ಮರೆಮಾಜಲು ಪ್ರಯತ್ನಿಸುತ್ತಾರೆ. ಆದರಿಂದ ಆತ್ಮವಂಚನೆಯಲ್ಲದೆ ಬೇರೆ ಯಾವ ಫಲವೂ ಲಭಿಸಲಾರದು. ಈ ಲೋಕದಲ್ಲಿರುವ ಯಾವ ಆಧ್ಯಾತ್ಮಿಕ ಸಿದ್ಧಾಂತವಾದರೂ ಸರಿ. ಅದು ಉತ್ಕೃಷ್ಟವಾದ ಒಂದು ಕರ್ಮಪದ್ಧತಿಯ ಮೂಲಕವಾಗಿದೆ. ಪುರಾಣ ಇತಿಹಾಸಗಳನ್ನು ತೆಗೆದು ಪರಿಶೋಧಿಸಿದರೂ ಶ್ರೀರಾಮ, ಶ್ರೀಕೃಷ್ಣ ಮತ್ತು ಜನಕಾದಿ ಮಹಾಪುರುಷರು ಕರ್ಮದ ದಾರಿಯನ್ನೇ ಹಿಡಿದು ಲೋಕಕ್ಕೆ ಬೆಳಕನ್ನು ನೀಡಿದರು ಕರ್ಮನಿವೃತ್ತಿಯಿಂದ ಜೀವನದ ಆದರ್ಶವನ್ನು ಸಾಧಿಸಬಹುದೆಂದು ನುಡಿಯುವವರು ಮೂಢರು! ಏಕೆಂದರೆ, ಒಂದು ನಿಮಿಷದವರೆಗಾದರೂ ಕರ್ಮನಿರತನಾಗದೆ ಇರುವದು ಮನುಷ್ಯನಿಗೆ ಸಾಧ್ಯವಿಲ್ಲ. ಆದುದರಿಂದ ಫಲಕಾಂಕ್ಷೆಯಿಲ್ಲದೆ ನಾವೆಲ್ಲರೂ ಉದ್ಯಮಶೀಲರಾಗಬೇಕಾಗಿದೆ."

ಸರೋಜಳು ಮಾಧವನ ಮುಖವನ್ನು ನೋಡಿದಳು; ಹಿಮಾಲಯದಂತೆ ಪ್ರಬಲವಾದ ಮನೋದಾರ್ಢ್ಯವು ಅಲ್ಲಿ ಮಿನುಗುತ್ತಿತ್ತು. ಚಾಂಚಲ್ಯದ ಯಾವ ಲಾಂಛನವೂ ಅಲ್ಲಿ ಇರಲಿಲ್ಲ. ತನ್ನ ಚಿತ್ತವೇಕೆ ಅವರಂತೆಯೇ ಶಾಂತಿಯನ್ನು ಹೊಂದಬಾರದೆಂದು ಆ ಬೆಂದ ಎದೆಯು ನುಡಿದಿತು ಶೋಕಯಾಮಿನಿಯಿಂದ ಮೋಚನೆಯನ್ನು ಹೊಂದುವದು ಹೇಗೆ? ಪ್ರಯತ್ನ ಮಾರ್ಗದಿಂದ ಬೆಳಕು ಸಿಗಬಹುದೆ? ಎಂದು ಆ ಮನವು ಮಿಡುಕಿತು.

---

## ೧೭ ಬೆಳೆದು ಬಂದ ಸ್ವಾತಂತ್ರ್ಯದಾಹ.

ಕ್ರಿಸ್ತಾಬ್ದ 1919 ಭಾರತ ವರ್ಷದ ಇತಿಹಾಸದಲ್ಲಿ ರಕ್ತಾಕ್ಷರಗಳಿಂದ ಬರೆಯಲ್ಪಟ್ಟಿರುವ ಒಂದು ಸಂವತ್ಸರವಾಗಿದೆ ವಿದೇಶೀಯ ಶಾಸಕರ ನಗ್ನಹೃದಯದ ಪರಿಚಯವು ಈ ಸಂವತ್ಸರದಲ್ಲಿಯೇ ಭಾರತ ವರ್ಷಕ್ಕೆ ಲಭಿಸಿತು. ಭಾರತ ವರ್ಷವು ಕಳೆದ ಮಹಾಯುದ್ಧದ ಕಾಲದಲ್ಲಿ ಸಾಮ್ರಾಜ್ಯವನ್ನು ರಕ್ಷಿಸಲು ನೀಡಿದ ಸಹಾಯಕ್ಕೆ ಪ್ರತ್ಯುಪಕಾರವು ರವ್ಲಟ್ಟು ಆಕ್ಟಿನ ರೂಪದಲ್ಲಿ ಲಭಿಸಿತು! ಈ ತೀವ್ರವಾದ ನಿಯಮವೇ ಅನಂತರ ಆಸೇತು-ಹಿಮಾಚಲ ಪರ್ಯಂತ ವ್ಯಾಪಿಸಿದ ಅಸಹಕಾರ ಆಂದೋಲನಕ್ಕೆ ಕಾರಣಭೂತವಾಯಿತೆಂದು ನುಡಿದರೆ ತಪ್ಪಾಗಲಾರದು. ಈ ಸಂವತ್ಸರವು ಭಾರತ ವರ್ಷದ ಇತಿಹಾಸದಲ್ಲಿ ಪ್ರಾಮುಖ್ಯವಾದಂತಾಗಿದೆ. ಏಕೆಂದರ ಈ ವರ್ಷದಲ್ಲಿ ಭಾರತ ವರ್ಷದಲ್ಲ ವ್ಯಾಪಿಸಿದ್ದ ಪ್ರಜಾಹಿತವಿರುದ್ಧವಾದ ದಬ್ಬಾಳಿಕೆಯಿಂದ ನಮ್ಮ ನಾಡಾದ ಭಾರತ ಭೂಮಿಯಲ್ಲಿ, ಭಾರತೀಯರಿಗೆ ಯಾವ ಅಧಿಕಾರವಾಗಲೀ, ಸ್ವಾತಂತ್ರ್ಯವಾಗಲೀ ಇಲ್ಲವೆಂಬ ನಗ್ನಸತ್ಯವನ್ನು ಭಾರತೀಯರು ತಿಳಿದುಕೊಂಡರು.

ಸಾಮ್ರಾಜ್ಯ ಪಾಲನೆಗಾಗಿ ಭಾರತೀಯರು ವಿದೇಶೀಯ ನಾಡುಗಳಲ್ಲಿ ತಮ್ಮ ರಕ್ತವನ್ನೂ ಹಣವನ್ನೂ ಚೆಲ್ಲಿದರು. ಅದಕ್ಕೆ ಪ್ರತಿಫಲವಾಗಿ ವಿದೇಶೀಯ ಶಾಸಕರಿಂದ ಲಭಿಸಿದ ಪ್ರಜಾ ಸ್ವಾತಂತ್ರ್ಯವನ್ನು ಸಮೂಲವಾಗಿ ನಾಶಮಾಡತಕ್ಕ ರೌಲಟ್ ಆಕ್ಟು! ಸ್ವಾತಂತ್ರ್ಯದ ಬಯಕೆಯಿಂದ ಬೇಯುತ್ತಿರುವ ಜನಾಂಗಕ್ಕೆ ಹೊಸದೊಂದು ಶೃಂಖಲೆಯು ಲಭಿಸಿತು! ಜವಾಬ್ದಾರೀ ಶಾಸನವನ್ನು ಬೇಡಿದ ಜನತೆಗೆ ಶಾಸಕರು, ರೌಲಟ್ಟ ನಿಯಮವನ್ನು ಕೊಟ್ಟು ನುಡಿದರು:-- "ನಾವು ನಿಮ್ಮ ಒಡೆಯರು; ನಾವು ಏನನ್ನು ಗೈದರೂ ಪ್ರಶ್ನಿಸಲು ನಿಮಗೆ ಅಧಿಕಾರವಿಲ್ಲ!" ಎಂಬುದಾಗಿ.

ಶಾಸಕರ ಈ ವರ್ತನೆಯನ್ನು ಭಾರತವರ್ಷವು ಯಾವ ರೀತಿಯಲ್ಲಿ ಎದುರಿಸಿತೆಂಬುದು ಇತಿಹಾಸಪ್ರಸಿದ್ಧವಾದ ಸಂಗತಿಯು! ಅನೇಕ ಶತಕಗಳಿಂದ ನಿದ್ರಾಸಕ್ತವಾದ ಭಾರತ ಭೂಮಿಯು ಜಾಗ್ರತಿಯನ್ನು ಹೊಂದಲಾರಂಭಿಸಿತು. ಇದುವರೆಗೆ ವ್ಯಾಪಿಸಿದ್ದ ಇರುಳು ಹಿಂದಕ್ಕೆ ಸರಿಯುತ್ತೊದಗಿ, ಮುಂಜಾವಿನಲ್ಲಿ ಹಾಡುತ್ತಿರುವ ಪಿಕದ ಲಾವಣ್ಯಗೀತವು ಕೇಳಿ ಬರಲಾರಂಭಿಸಿತು. ಅಂತೂ ಕ್ರಿಸ್ತಶಕ 1919ಎಂದರೆ, ಸಮಗ್ರಭಾರತದಲ್ಲಿ ನವಜೀವನವು ಸಂಜಾತವಾಗುವಂತೆ ಮಾಡಿದ ಒಂದು ವರ್ಷವಾಗಿದೆ ತನ್ನ ಆತ್ಮವನ್ನು ತಿಳಿಯಲು ಈ ಕಾಲದಲ್ಲಿ ನಾದಬೇವಿಯು ಪ್ರಯತ್ನಿಸಿದಳು.

ಶಾಸಕರ ಆವಿವರ್ತನೆಗಳಿಂದ ಅನೇಕ ಸಂಕಟಗಳನ್ನು ಅನುಭವಿಸಬೇಕಾಗಿ ಬಂದರೂ, ಭಾರತದ ಜೀವನಾಡಿಯನ್ನು ತಿಳಿಯದ ವಿದೇಶೀಯರ ದುಷ್ಟ ಮತ್ತತೆಗಳಿಂದ ಭಾರತಾಂಬೆಯು ನೋವನ್ನು ಅನುಭವಿಸಬೇಕಾಗಿ ಬಂದರೂ, ಈ ದುರಂತಗಳು ಮುಂಬರುವ ಬೆಳಕನ್ನು ಸೂಚಿಸಲಿರುವ ಕೆಲವು ಕಿರಣಗಳಾಗಿದ್ದವು. ಭಾರತೀಯರಲ್ಲಿ ಸ್ವಾತಂತ್ರ್ಯ ಬೋಧವು 1905ರಲ್ಲಿಯೇ ಸಂಜಾತವಾಗಿದ್ದರೂ, ಅದು ಕೇವಲ ಬೀಜರೂಪದಲ್ಲಿ 1919ರ ವರೆಗೆ ಇದ್ದಿತು ಕರ್ಜನ್ನ ಪ್ರಭೃತಿಗಳ ನಿರಂಕುಶ ಘೋರತೆಯು ಭಾರತವರ್ಷದಲ್ಲಿ ಸ್ವದೇಶಾಭಿಮಾನವು ಜನಿಸುವಂತೆ ಮಾಡಿತೆಂಬುದು ನಿಜವು; ಆದರೆ ಆ ಕಿಡಿಯು 1905 ರಲ್ಲಿ ಸಮಗ್ರ ಭಾರತ ವರ್ಷದಲ್ಲೆಲ್ಲಾ ವ್ಯಾಪಿಸಲಿಲ್ಲ ವಂಗನಾಡು, ಮಹಾರಾಷ್ಟ್ರ, ತಮಿಳದೇಶ ಎಂಬಿತ್ಯಾದಿ ಕೆಲವು ಪ್ರಾಂತಗಳಲ್ಲಿ ಈ ಜಾಗೃತಿಯು ಪ್ರತ್ಯಕ್ಷವಾಯಿತು; ಆದರೆ ಈ ಸ್ವಾತಂತ್ರ್ಯದ ಬೆಳಕು ಆ ಕಾಲದಲ್ಲಿ ಇತರ ಪ್ರಾಂತಗಳಿಗೆ ಪಸರಿಸಲಿಲ್ಲ. 1920 21ರಲ್ಲಿ ನಡೆದ ಆಂದೋಲನದಂತೆ, 1905-06 ರ ಆಂದೋಲನಕ್ಕೆ ಸುವ್ಯವಸ್ಥಿತವಾದ ಒಂದು ಕರ್ಮಪದ್ಧತಿಯಿರಲಿಲ್ಲ. 1920-21 ರಂತೆ 1905ರ ಸ್ವಾತಂತ್ರ್ಯಸಂಗ್ರಾಮವು ಸತ್ಯ ಮತ್ತು ಅಹಿಂಸೆಗಳನ್ನು ತನ್ನ ಹೋರಾಟದ ತಳಹದಿಯನ್ನಾಗಿ ಸ್ವೀಕರಿಸಿರಲಿಲ್ಲ; ಆದರೂ 1905ರಲ್ಲಿ ನಡೆದ ಚಳವಳಿಯು 1920 23, 1930-33 ಈ ಕಾಲಗಳಲ್ಲಿ ನಡೆದ ಕದನಗಳಂತೆ ಮಹತ್ವಪೂರ್ಣವಾಗಿರುತ್ತದೆ; ಏಕೆಂದರೆ 1905 ಐತಿಹಾಸಿಕ ವರ್ಷದಲ್ಲಿ ಬಿದ್ದಿರುವ ಭಾರ

ವರ್ಷವು ತನ್ನ ನಿದ್ರೆಯಿಂದ ಎಚ್ಚರಗೊಳ್ಳುತ್ತಿರುವ ಲಕ್ಷಣಗಳನ್ನು ಸೂಚಿಸಿತು 1857ರ ಅನಂತರ ಧೈರ್ಯವು ನಾಡದೇವಿಯ ಹೃದಯದಲ್ಲಿ ಸ್ಫುರಿಸಿದುದು 1905 ರಲ್ಲೇ ಆಗಿದೆ.

ಆದರೆ 1920-23ರಲ್ಲಿ ಜರುಗಿದ ಆಂದೋಲನವು ವಿಶಾಲವಾದದ್ದು ಅದ ಕ್ಕೊಂದು ಕರ್ಮಪದ್ಧತಿಯಿದ್ದಿತು; ಒಂದು ತಳಹದಿಯ ಮೇಲೆ ಅದು ನಿಂತಿದ್ದಿತು ಪ್ರಬಲವಾದ ತತ್ವಗಳೇ ಆ ಆಂದೋಲನದ ಜೀವಾಳವಾಗಿದ್ದುವು

1920ರಲ್ಲಿ ಭಾರತವರ್ಷದ ನಾಯಕರೂ, ಸ್ವಾತಂತ್ರ್ಯಯೋಧರೂ ಆದ ಲೋಕಮಾನ್ಯರು ತಮ್ಮ ಜಡದೇಹವನ್ನು ನೆಟ್ಟು ಕೀರ್ತಿಕಾಯರಾದರು. ಅವರು ಬಿತ್ತಿದ ಬೀಜವು ಇನ್ನೂ ಮರವಾಗಿರಲಿಲ್ಲ; ಭಾರತವರ್ಷದಲ್ಲಿ ಸ್ವಾತಂತ್ರ್ಯಭಾನುವು ಉದಯವನ್ನು ಹೊಂದಿರಲಿಲ್ಲ. ಓರ್ವ ಕ್ಷತ್ರಿಯನಂತೆ ಕಾದುತ್ತಾ ಅವರು ದೇಹ ವಿಸರ್ಜನೆಯನ್ನು ಮಾಡಿದರು. ಸ್ವತಂತ್ರ ಭಾರತದ ಕನಸನ್ನು ಕಾಣುತ್ತಾ ಅವರು ದೇಹವನ್ನು ತ್ಯಜಿಸಿದರು; ಆದರೆ ಅವರ ದೇಹವಿಸರ್ಜನೆಯ ನಂತರ ಭಾರತಾಂಬೆಯು ಅನಾಥಳಾಗಲಿಲ್ಲ. ಭಾರತವರ್ಷಕ್ಕೆ ಹೊಸದೊಬ್ಬ ನಾಯಕನು ಲಭಿಸಿದನು. ಕರ್ಮಕುಶಲತೆಯಿಂದಲೂ, ಜ್ಞಾನದಿಂದಲೂ ಕೂಡಿದ ಓರ್ವ ಮಹಾತ್ಮನು ಸ್ವಾತಂತ್ರ್ಯನಾವೆಯ ಹುಟ್ಟನ್ನು ತಿರುಗಿಸಲು ದೊರೆತನು ಆ ಪುಣ್ಯ ಪುರುಷರೇ ಭಾರತಭಾಗ್ಯವಿಧಾತರಾದ ಮಹಾತ್ಮ ಗಾಂಧೀಜಿಯವರು. ಗಾಂಧೀಜಿಯವರ ಜೀವನ ಕತೆಯನ್ನಾಗಲೀ, ಸ್ವಾತಂತ್ರ್ಯಸಂಪಾದನೆಗಿರುವ ದಾರಿಯಲ್ಲಿ ಅವರು ನಾಡದೇವಿಯ ರಥವನ್ನು ಯಾವ ರೀತಿ ಚಲಿಸಿದರು ಎಂಬುದನ್ನಾಗಲೀ ಇಲ್ಲಿ ವಿವರಿಸಬೇಕಾದುದಿಲ್ಲ. ಅವರ ಸದಾಧೀನತನದಲ್ಲಿ ಭಾರತವರ್ಷವು ಹೇಗೆ ಸ್ವರಾಜ್ಯಸಂಪಾದನೆಯ ದಾರಿಯಲ್ಲಿ ಮುಂದುವರಿದಿತೆಂದು ನಮ್ಮ ನಾಡಿನ ಚಿಕ್ಕ ಬಾಲಕರೂ ಸಹಾ ತಿಳಿದಿರುವ ಸಂಗತಿಯಾಗಿದೆ.

"ಅಸಹಕಾರ" ಎಂಬ ಮಂತ್ರವನ್ನಾಗಿದ್ದಿತು ಮಹಾತ್ಮಜಿಯವರು ಉಪದೇಶಿಸಿದುದು. ಸತ್ಯ ಮತ್ತು ಅಹಿಂಸೆಗಳೇ ದಾಸ್ಯದಿಂದ ವಿಮೋಚನೆಯನ್ನು ಹೊಂದಲುಳ್ಳ ದಿವ್ಯಾಯುಧಗಳೆಂದು ಅವರು ನುಡಿದರು. ಇದುವರೆಗೆ ಈ ರೀತಿಯ ಒಂದು ಸಂಗ್ರಾಮವೂ ಜಗತ್ತಿನಲ್ಲಿ ನಡೆದಿರಲಿಲ್ಲ ದೋಷವನ್ನು ಗೆಲ್ಲಲು ಸತ್ಯದಿಂದ ಮಾತ್ರವಲ್ಲದೆ ಅನೀತಿಯಿಂದ ಸಾಧ್ಯವಿಲ್ಲವೆಂಬ ಒಂದು ತತ್ವವನ್ನು ರಾಜಕೀಯ ಕ್ಷೇತ್ರದಲ್ಲಿ ಕೊಂಡುಬರಲು ಯಾರೂ ಪರಿಶ್ರಮಿಸಿರಲಿಲ್ಲ; ಆದರೆ 1920-21ರಲ್ಲಿ ಗಾಂಧೀಜಿಯವರು ಪ್ರಥಮಬಾರಿ ವಿಶ್ವದ ಸಾಮ್ರಾಜ್ಯಶಕ್ತಿಗಳಲ್ಲಿ ಮಿಗಿಲಾದ ಬ್ರಿಟಿಷರೊಡನೆ ಈ ಹೊಸ ಆಯುಧವನ್ನು ಪ್ರಯೋಗಿಸಿದರು. ಗಾಂಧೀಜಿಯವರ ಸಿದ್ಧಾಂತದಲ್ಲಿ ದ್ವೇಷಕ್ಕಾಗಲೀ, ವೈರಕ್ಕಾಗಲೀ ಆಸ್ಪದವಿರಲಿಲ್ಲ. ಶತ್ರುಗಳಿಗೆ ಕೇಡುಕುಗಳನ್ನುಂಟು ಮಾಡಬಾರದಲ್ಲಿ ಅವರ ಅಸಹಯೋಗದ ಉದ್ದೇಶ. ಸ್ನೇಹದಿಂದ, ಪ್ರೇಮದಿಂದ ಶತ್ರುಗಳೊಡನೆಯೂ ವರ್ತಿಸಬೇಕೆಂದು ಅವರು ನುಡಿದಿದ್ದಾರೆ. ಅಹಿಂಸೆಯು ಹಿಂಸೆ

ಗಿಂತಲೂ ಮಿಗಿಲಾದುದು ಎಂಬುದನ್ನು ಅವರು ತಮ್ಮ ಜೀವನದಲ್ಲಿ ತೋರಿಸಿದ್ದಾರೆ. ಹಿಂಸಾರೋಪದಲ್ಲಿ ಶತ್ರುಗಳೊಡನೆ ಹೋರಾಡುವದಕ್ಕಿಂತ ಸಹಸ್ರಾರು ಪಾಲು ಧೈರ್ಯವು ಅಹಿಂಸಾರೂಪದಲ್ಲಿ ಶತ್ರುಗಳೊಡನೆ ಹೋರಾಡುವಾಗ ಬೇಕಾಗುತ್ತದೆ. ಅಹಿಂಸೆಯೆಂದರೆ ಭೀರುಗಳ್ಳರ, ಜೀವಗಳ್ಳರ ರಕ್ಷಾಮಂತ್ರವಲ್ಲ. ಅದು ಮನಃಶಕ್ತಿಯ ಮತ್ತು ಸಹನೆಯ ಲಕ್ಷಣವಾಗಿರುತ್ತವೆ. ಹೇಡಿಗೂ ಜೀವಗಳ್ಳನಿಗೂ ಅಹಿಂಸೆಯನ್ನು ಪ್ರಯೋಗರೂಪದಲ್ಲಿ ಕೊಂಡುಬರಲು ಸಾಧ್ಯವಿಲ್ಲ; ಏಕೆಂದರೆ ಮನೋದಾರ್ಢ್ಯತೆ ಇಲ್ಲದ ಅವರಿಗೆ ಅಹಿಂಸೆಯ ಶಕ್ತಿಯನ್ನು ತಿಳಿಯಲು ಸಾಧ್ಯವಾಗಲಾರದು.

ಸತ್ಯವೆಂಬುದೇ ಅವರ ಎರಡನೆಯ ವಾಕ್ಯವು; ಅಸತ್ಯವಾದ ಪಥವನ್ನು ಹಿಡಿದು ಸ್ವಾತಂತ್ರ್ಯವನ್ನು ಸಂಪಾದಿಸುವದಕ್ಕಿಂತಲೂ, ಸತ್ಯವನ್ನು ಅವಲಂಬಿಸಿ ಸ್ವಾಧೀನತೆಯನ್ನು ಪಡೆಯುವದು ಶ್ರೇಯಸ್ಕರವೆಂಬಾಗಿವೆ ಗಾಂಧೀಜಿಯುವರ ನುಡಿಯು. ಮಹಾತ್ಮಾಜಿಯವರ ಈ ಸಿದ್ಧಾಂತಗಳು ಭಾರತಭೂಮಿಗೆ ಹೊಸದಲ್ಲ; ಪ್ರಾಚೀನ ಕಾಲದ ಯೋಗಿಗಳು ಯಾವ ತತ್ವದ ಬೀಜವನ್ನು ಪ್ರಪಂಚಕ್ಕೆ ಬೀರಿದರೋ, ಆ ಜ್ಯೋತಿಯೇ ಮಹಾತ್ಮಜಿಯುವರ ಕರ್ಮಸಾಧನೆಯಲ್ಲಿ ನರ್ತಿಸಿತು. ಅವರ ಜೀವನವೇ ಮಹತ್ತಾದ ಒಂದು ಸತ್ಯಶೋಧನೆಗಾಗಿದೆ ಆಧ್ಯಾತ್ಮಿಕ ಸಿದ್ಧಾಂತಗಳನ್ನು ಸಾಧಾರಣ ಮನುಷ್ಯರ ಬದುಕಿನಲ್ಲಿ ಆಚರಣೆಗೆ ತರಲು ಸಾಧ್ಯವಿದೆ ಎಂಬುದನ್ನು ಅವರು ತಮ್ಮ ಪವಿತ್ರ ಜೀವನದಿಂದ ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ. ಶ್ರೀರಾಮಕೃಷ್ಣ ಪರಮಹಂಸ ಹಾಗೂ ಸ್ವಾಮಿ ವಿವೇಕಾನಂದ ಇವರ ಅನಂತರ ಎಲ್ಲಾ ಮತಗಳಲ್ಲಿಯೂ ಸತ್ಯವಿದೆ ಎಂಬುದಾಗಿ ಉದ್ಘೋಷಿಸಿದ ವ್ಯಕ್ತಿಗಳೆಂದರೆ, ಮಹಾತ್ಮರೇ ಸರಿ. ಅವರು ಇಪ್ಪತ್ತನೆಯ ಶತಮಾನದ ಮಹಾಪುರುಷರಲ್ಲಿ ಅಗ್ರೇಸರರಾಗಿರುತ್ತಾರೆ

ವಿದೇಶೀಯ ಶಾಸಕರ ದಬ್ಬಾಳಿಕೆಯನ್ನು ಎದುರಿಸಲು ಭಾರತವರ್ಷಕ್ಕೆ ದಾರಿ ತೋರಲಿಲ್ಲ ಭಾರತವರ್ಷದ ನಾಡೀಸ್ಪಂದನವು ಬಹಳ ಮಂದವಾಗಿದ್ದಿತು. ಭಾರತೀಯರ ಹೃದಯಗಳಲ್ಲಿ ದೌರ್ಬಲ್ಯವಲ್ಲದೆ ಇನ್ನಾವುದೂ ಗೋಚರಿಸುತ್ತಿರಲಿಲ್ಲ. ಈ ವಿಷಮ ಪರಿಸ್ಥಿತಿಯಲ್ಲಿ ಭಾರತವರ್ಷಕ್ಕೆ ಪ್ರಾಪ್ತವಾದ ವಿಪತ್ತುಗಳನ್ನು ಎದುರಿಸಲು ಹೊಸ ಚೈತನ್ಯವನ್ನು ಊದಿದವರು ಮಹಾತ್ಮರೇ ಆಗಿರುತ್ತಾರೆ. ಅವರು ನಿರಾಶೆಯಲ್ಲಿ ಬಿದ್ದಿರುವ ಭಾರತವರ್ಷಕ್ಕೆ ಹೊಸ ಮಾರ್ಗವನ್ನು ತೋರಿಸಿದರು. ವಿಶ್ವರಂಗದಲ್ಲಿ ತನಗಿರುವ ಸ್ಥಾನವು ಯಾವುದೆಂಬುದನ್ನು ವ್ಯಕ್ತಪಡಿಸಲು ಭಾರತವರ್ಷವು ಜಾಗ್ರತಿಯನ್ನು ಹೊಂದುವಂತೆ ಮಹಾತ್ಮಜಿಯುವರು ಸ್ವಾತಂತ್ರ್ಯ ಉದಯಭಾನುವಿನ ಆಗಮನವಾರ್ತೆಯ ಕಹಳೆಯನ್ನು ಊದಿದರು. ನಾಡು ಈ ನಿನಾದವನ್ನು ಆಲ್ರಾಣಿಸಿತು. ಗಾಂಧೀಜಿಯುವರು ತೋರಿಸಿದ ದಾರಿಯನ್ನು ಅದು ಅವಲಂಬಿಸಿತು. ಗಾಂಧೀಜಿಯುವರು ಭಾರತವರ್ಷಕ್ಕೆ ತೋರಿಸಿದ ಆ ಹೊಸ ದಾರಿಯೇ ಸತ್ಯಾಗ್ರಹವಾಗಿದೆ!

ಈ ಹೊಸ ರೀತಿಯ ಸ್ವಾತಂತ್ರ್ಯಕದನವು ಭಾರತವರ್ಷದಲ್ಲಿ ಎಷ್ಟು ತೀವ್ರವಾಗಿ ಬೇಗಿತೆಂಬದೂ, ಸ್ವಾತಂತ್ರ್ಯದಾಹದಿಂದ ಬಳಲುತ್ತಿರುವ ಭಾರತೀಯರು

ಸ್ವಾತಂತ್ರ್ಯಸಂಪಾದನೆಗಾಗಿ ಹೇಗೆ ಕಾದಿದರೆಂಬುದೂ, ಅವರು ಜನ್ಮಭೂಮಿಯ ವಿಮೋಚನೆಗಾಗಿ ಯಾವ ರೀತಿ ಮಹತ್ತಾದ ತ್ಯಾಗಗಳನ್ನು ಗೈದರೆಂಬುದೂ ಪತ್ರಿಕೆಗಳನ್ನು ಓದುತ್ತಿರುವ ವಾಚಕರಿಗೆ ತಿಳಿದ ವಿಷಯವಾಗಿದೆ. ಅವುಗಳನ್ನು ನಾವು ಪುನಃ ವಿವರಿಸಬೇಕಾದುದಿಲ್ಲ. ಉಜ್ವಲವಾದ ಆ ಮಹಾತ್ಯಾಗಗಳಿಂದ ನಮ್ಮ ಶರೀರಗಳಲ್ಲಿ ಆವೇಶವು ಸಂಜಾತವಾಗಿ, ರೋಮಾಂಚನವನ್ನುಂಟುಮಾಡುತ್ತವೆ. ಹೆಂಗಸರು, ಗಂಡಸರು, ಬಾಲಕರು, ವೃದ್ಧರು, ವಿದ್ಯಾವಂತರು, ಹಳ್ಳಿಗರು ಈ ಜನರೆಲ್ಲರೂ ಆ ಸ್ವಾತಂತ್ರ್ಯಯಜ್ಞಕುಂಡದಲ್ಲಿ ಮಹತ್ತಾದ ಹವಿಸ್ಸುಗಳನ್ನು ನೀಡಿ, ಸ್ವಾತಂತ್ರ್ಯಭಾಸ್ಕರನನ್ನು ಸಂತೃಪ್ತಿಗೊಳಿಸಲು ಮುಂದೆ ಬಂದರು.

ಈ ಕಾಳ್ಗಿಚ್ಚು, ಈ ಸ್ವಾತಂತ್ರ್ಯದಾಹ ನಳಿನೀರಂಜನನ ಆಶ್ರಮವಿರುವ ಶಿವಪುರಕ್ಕೂ ವ್ಯಾಪಿಸದೆ ಇರಲಿಲ್ಲ. ನಳಿನೀರಂಜನನು ಭಾರತವರ್ಷದಲ್ಲಿ ಉದಯಿಸಿದ ಈ ಸ್ವಾತಂತ್ರ್ಯಭಾವನೆಗಳಿಗೆ ಸುಸ್ವಾಗತವನ್ನು ಬಯಸಿದನು. ಅಸಹಕಾರ, ಸತ್ಯಾಗ್ರಹ, ಖಾದಿ ಎಂಬಿತ್ಯಾದಿ ಗಾಂಧೀಜಿಯವರ ತತ್ವಗಳನ್ನು ಅನುಷ್ಠಾನ ರೂಪದಲ್ಲಿ ತರಲು ನಳಿನೀರಂಜನನು ಪ್ರಯತ್ನಿಸಿದನು. ... ಈ ವರ್ತನೆಯು ಅವನ ಕೆಲವು ಮಂದಿ ಶಿಷ್ಯರಿಗೆ ಉಚಿತವೆಂದೆನಿಸಲಿಲ್ಲ. ಆಧ್ಯಾತ್ಮಿಕ ಹಾಗೂ ಸಾಮಾಜಿಕ ಅಭ್ಯುನ್ನತಿಗಾಗಿ ಉದ್ಯಮಿಸುತ್ತಿರುವ 'ಸಾಧನ ಕುಟೀರ'ದಂಥ ಒಂದು ಸಂಸ್ಥೆಯು ಅಸಹಕಾರ ಆಂದೋಲನದಂಥ ತೀವ್ರವಾದ ರಾಜಕೀಯ ಕಲಾಪಗಳಲ್ಲಿ ಪ್ರವೇಶಿಸುವದು ಅನುಚಿತವೆಂದು ಹಲವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಶಾಂತತೆಯನ್ನೂ ಜನತೆಯ ಮಧ್ಯದಲ್ಲಿ ಜ್ಞಾನದ ಬೆಳಕನ್ನೂ ಪಸರಿಸಲು ಯತ್ನಿಸುತ್ತಿರುವವರು, ರಾಜಕೀಯ ಉದ್ಯಮಗಳಲ್ಲಿ ಪ್ರವೇಶಿಸುವದು ಜನತೆಯ ಏಳಿಗೆಗೆ ಪ್ರತಿಬಂಧಕವೆಂದು ಹಲವು ಮಂದಿ ಶಿಷ್ಯರು ಆಚಾರ್ಯನಾದ ನಳಿನೀರಂಜನನೊಡನೆ ಹೇಳಿದರು.

"ಸಾಧನಕುಟೀರ'ದಲ್ಲಿರುವ ಹಲವು ಮಂದಿ ಶಿಷ್ಯರು ಈ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದನ್ನು ಅವಲೋಕಿಸಿ ನಳಿನೀರಂಜನನು ಆಶ್ಚರ್ಯಭರಿತನಾದನು. ಒಂದು ದಿನ ಸಂಜೆಯಾಗುತ್ತಲೆ ಎಂದಿನಂತೆ ನಳಿನೀರಂಜನನು ಜಗುಲಿಯ ಮೇಲೆ ಆಸೀನನಾಗಿದ್ದನು. ಸುತ್ತಲೂ ಹಲವಾರು ಮಂದಿ ಶಿಷ್ಯರು ನೆರೆದಿದ್ದರು. ಅವರ ವದನಮಂಡಲಗಳನ್ನು ವೀಕ್ಷಿಸುತ್ತ ಎಳೆಯ ನಗೆಯೊಡನೆ ನಳಿನೀರಂಜನನು ನುಡಿದನು: (ಈ ಶಿಷ್ಯರ ಮಧ್ಯದಲ್ಲಿ ನಳಿನೀರಂಜನನ ಮೆಚ್ಚಿನ ಶಿಷ್ಯನಾದ ಸುಧಾಂಶುವೂ ಇದ್ದನು) "ಭಾರತವರ್ಷದಲ್ಲಿ ಈಗ ವ್ಯಾಪಿಸಿರುವ ಅಸಹಕಾರ ಆಂದೋಲನದಲ್ಲಿ ಭಾಗವನ್ನು ವಹಿಸಬೇಕಾದುದು ನಮ್ಮ ಕರ್ತವ್ಯವಲ್ಲವೆ?'

"ಆಚಾರ್ಯರೇ, ಶಾಂತಿಯ ವಾತಾವರಣವನ್ನು ಹರಡುವವೇ ನಮ್ಮ ಇಂದಿನ ಸಾಧನೆಗಳ ಉದ್ದೇಶವು; ಸರಕಾರದವರನ್ನು ಎದುರಿಸುತ್ತಿರುವ ಈ ಅಸಹಕಾರದಿಂದ ಅಶಾಂತತೆ ಮತ್ತು ಗಲಭೆ ಇವುಗಳಲ್ಲದೆ ಇನ್ನಾವುದೂ ದೊರಕಲಾರವು. ಆಧ್ಯಾತ್ಮಿಕ ಚೈತನ್ಯ ಮತ್ತು ಜ್ಞಾನಾರ್ಜನೆ ಇವುಗಳಲ್ಲಿ ನಿರತರಾದ ನಾವು ಅವು, ಅವ್ಯವಸ್ಥಿತ

ವಾಗಿರುವ ರಾಜಕಾರಣದಲ್ಲಿ ಪ್ರವೇಶಿಸುವದು ಉಚಿತವಲ್ಲವೆಂದಾಗಿದೆ ನನ್ನ ಅಭಿಪ್ರಾಯವು!" ಎಂದು ಒಬ್ಬ ಶಿಷ್ಯನು ನುಡಿದನು.

"ತಮ್ಮಾ, ಅಸಹಕಾರದ ಉದ್ದೇಶವೇನು? ಎಂಬುದನ್ನು ನೀನು ಬಲ್ಲೆಯಾ?" ಎಂದು ರಾಜಕೀಯ ಆಂದೋಲನವನ್ನು ಕುರಿತು ಜಿಗುಪ್ಸೆಭಾವವನ್ನು ಪ್ರದರ್ಶಿಸಿದ ಆ ತರುಣನನ್ನು ನಳಿನೀರಂಜನನು ಪ್ರಶ್ನಿಸಿದನು.

"ಅಸಹಕಾರವೆಂಬುದು ಅಸಂತೃಪ್ತವಾದ ಕೆಲವು ಮಂದಿ ರಾಜಕೀಯ ಮುಂದಾಳುಗಳು ಸರಕಾರದವರಿಗೆ ವಿರುದ್ಧವಾಗಿ ನಡೆಯಿಸುತ್ತಿರುವ ಒಂದು ಒಳಸಂಚಾಗಿದೆ. ಅದರಿಂದ ದೇಶಕ್ಕೆ ಹಾನಿಯಲ್ಲದೆ ಗುಣವು ಸಿಗಲಾರದು."

"ನಿನ್ನ ಈ ತಿಳುವಳಿಕೆಯು ತಪ್ಪಾಗಿದೆ; ಅಸಹಕಾರವಾಗಲಿ, ಸತ್ಯಾಗ್ರಹವಾಗಲಿ ಎಂದಿಗೂ ಒಳಸಂಚುಗಳಾಗಲಾರವು. ಸತ್ಯ ಮತ್ತು ಅಹಿಂಸೆಯ ತಳಹದಿಯ ಮೇಲೆ ಅಸಹಕಾರವು ನೆಲೆನಿಂತಿದೆ. ಸ್ವಾಧೀನತೆಯನ್ನು ಸಂಪಾದಿಸುವುದೇ ಈ ಆಂದೋಲನದ ಉದ್ದೇಶವು. ಶಾಂತತೆಯ ಮತ್ತು ಸೌಭಾಗ್ಯಗಳಿಂದ ಪರಿಪೂರ್ಣವಾದ ಒಂದು ಭವಿಷ್ಯವನ್ನು ಸೃಜಿಸುವದೇ ಈ ಆಂದೋಲನದ ಆದರ್ಶವು ಪುರೋಗಮನ ಇಚ್ಛೆಯುಳ್ಳ ಪ್ರತಿಯೊಬ್ಬ ಭಾರತೀಯನೂ ನಾಡಿನ ಸ್ವಾಭಿಮಾನವನ್ನು ಕಾಯಲಿರುವ ಈ ಆಂದೋಲನದಲ್ಲಿ ಭಾಗವನ್ನು ವಹಿಸಲೇ ಬೇಕು."

"ಆ ಉದ್ದೇಶವೇ ಆಗಿರಬಹುದು ಈ ಆಂದೋಲನದ ಮೂಲವು. ಶಾಂತಿ ಮತ್ತು ಕ್ಷೇಮಗಳನ್ನು ಸ್ಥಾಪಿಸಲಿರುವ ಈ ದಾರಿಯು ಎಂದಿಗೂ ವಿಪತ್ತು ಮತ್ತು ಗಲಭೆ ಇವುಗಳಿಂದ ಪರಿಪೂರ್ಣವಾಗಿರಕೂಡದಷ್ಟೆ?" ಎಂದು ತಾರ್ಕಿಕ ಬುದ್ಧಿಯ ಆ ಶಿಷ್ಯನು ಅಂದನು.

ಇದುವರೆಗೆ ಮೌನವನ್ನು ಅವಲಂಬಿಸಿದ್ದ ಸುಧಾಂಶುವು ತನ್ನ ತುಟಿಗಳನ್ನು ತೆರೆದನು: "ನೀನು ವಿಚಾರಿಸುತ್ತಿರುವದು ತಪ್ಪಾಗಿದೆ. ಅಸಹಕಾರ ಆಂದೋಲನವು ಪ್ರಾರಂಭವಾದಂದಿನಿಂದ ನಾನು ಅದರ ತತ್ವಗಳನ್ನೂ ಪ್ರಯೋಗಗಳನ್ನೂ ಸೂಕ್ಷ್ಮ ದೃಷ್ಟಿಯಲ್ಲಿ ಪರಿಶೋಧಿಸುತ್ತಲಿದ್ದೇನೆ. ಸ್ವಾಭಿಮಾನವಿರುವ ಪ್ರತಿಯೊಬ್ಬ ಭಾರತೀಯನೂ ನಮ್ಮ ಆಚಾರ್ಯರು ನುಡಿಯುತ್ತಿರುವಂತೆ ಈ ಆಂದೋಲನವನ್ನು ಒಪ್ಪದೆ ನಿರ್ವಾಹವಿಲ್ಲ. ವಿದೇಶೀಯರ ಆಳ್ವಿಕೆಯು ನಮಗೆ ಅಭ್ಯುದಯದಾಯಕವೆಂದು ವಿಚಾರಿಸುತ್ತಿರುವದು ತಪ್ಪು ತಿಳುವಳಿಕೆಯಾಗಿರುತ್ತದೆ. ಅದು ನಮ್ಮ ಆಕಾಂಕ್ಷೆ-ಬಯಕೆಗಳನ್ನು ಪೂರೈಸಲಾರದು. ಶಾಸಕರ ಹಿತ ಮತ್ತು ಆಕಾಂಕ್ಷೆಗಳೊಡನೆ ನಮ್ಮ ಹಕ್ಕುಗಳು ಧಕ್ಕೆಯಾಗುವ ಸಂಭವವು ಬಂದೊಂದಗಿದಾಗ, ನಮ್ಮ ಹಿತಕಾಂಕ್ಷೆಗಳು ಅವರಿಗೆ ಬಲಿಯಾಗುತ್ತವೆ. ಅರ್ಥಾತ ನಮ್ಮ ನಾಡಿನ ಜೀವನವು ಕೇವಲ ವಿದೇಶೀಯರ ಸುಖಸಂತೃಪ್ತಿಗಳಿಗಾಗಿ ನೆಲೆನಿಂತಿದೆ. ಇಂಥ ಒಂದು ಪರಿಸ್ಥಿತಿಯಲ್ಲಿ ನಮ್ಮ ನಾಡು ಅಭ್ಯುದಯ ಹೊಂದುವದೋ ಹೇಗೆ? ನಮ್ಮ ನಾಡಿನ ಏಳಿಗೆಯಾಗಬೇಕಾದರೆ ನಾವು ನಮ್ಮನ್ನು ಆಳತೊಡಗಬೇಕು. ಯಾಚಿಸುವದ

ದಿಂದ ನಮಗೆ ಸ್ವಾತಂತ್ರ್ಯವು ದೊರಕಲಾರದು. ಹಾಗೆ ದೊರಕುವದಾಗಿದ್ದರೂ ಆ ಯಾಚನೆಯು ನಮ್ಮ ಬಲಹೀನತೆಯನ್ನೂ ಅಪ್ರಾಪ್ತತೆಯನ್ನೂ ಸೂಚಿಸುತ್ತಿರುವದರಿಂದ, ಯಾಚನೆಯಿಂದ ಲಭಿಸಿದ ಸ್ವರಾಜ್ಯವು ನಮ್ಮ ಕರಗಳಲ್ಲಿ ನೆಲೆನಿಲ್ಲಲಾರದು. ಆದುದರಿಂದ ನಾವು ಅಮೂಲ್ಯವಾದ ತ್ಯಾಗಗಳ ಬೆಲೆಯನ್ನು ನೀಡಿ, ಸ್ವರಾಜ್ಯವನ್ನು ಸಂಪಾದಿಸಬೇಕಾಗಿದೆ. ಆಗ ಮಾತ್ರ ನಮಗೆ ಸ್ವಾತಂತ್ರ್ಯದ ಬೆಲೆ ಏನೆಂಬುದು ತಿಳಿದು ಬರುವದು ಇಂದಿನ ಪರಿಸ್ಥಿತಿಗನುಸಾರವಾಗಿ ಪರ್ಯಾಲೋಚಿಸುವದಾದರೆ, ಅಸಹಕಾರಕ್ಕಿಂತ ಶ್ರೇಷ್ಠವಾದ ಕಾರ್ಯಪದ್ಧತಿಯು ಬೇರೊಂದಿಲ್ಲ."

"ಹೌದು. ಸುಧಾಂಶುವು ಅಸಹಕಾರ ಸಿದ್ಧಾಂತವನ್ನು ತಿಳಿದುಕೊಂಡಿರುತ್ತಾನೆ. ತಮ್ಮಂದಿರಾ, ಆಧ್ಯಾತ್ಮಿಕ ರಂಗವು ಬೇರೆ ರಾಜನೀತಿಯ ರಂಗವು ಬೇರೆ ಎಂಬುದಾಗಿ ನೆನೆಯಬೇಡಿರಿ. ಆಧ್ಯಾತ್ಮಿಕ ಸಾಧನಗಳ ಉದ್ದೇಶವೂ ಸ್ವಾತಂತ್ರ್ಯ ಸಂಪಾದನೆಯೇ ಆಗಿರುತ್ತದೆ; ಆದರೆ ಆ ಸ್ವಾತಂತ್ರ್ಯವು ಭೌತಿಕವಾದುದಲ್ಲ. ಆತ್ಮನ ಸ್ವಾತಂತ್ರ್ಯಸಾಧನೆಗಾಗಿ ತತ್ವಚಿಂತಕನು ಉದ್ಯಮಿಸುತ್ತಾನೆ. ಆ ಆತ್ಮ ಸ್ವಾತಂತ್ರ್ಯವೇ ಜೀವನದ ಗುರಿಯು! ಹಾಗೆಂದ ಮಾತ್ರದಿಂದ ಮಾನವನು ತನ್ನ ನಾಡಿನ ಬಿಡುಗಡೆಗಾಗಿ ಹೆಣಗುವದು ಸರಿಯಲ್ಲವೆಂದು ಭಾವಿಸುವದು ಅನುಚಿತವಾಗಿದೆ ಭೌತಿಕ ಸ್ವಾತಂತ್ರ್ಯದ ರುಚಿಯನ್ನು ಆಸ್ವಾದಿಸುವ ಮನುಷ್ಯನು ಆಧ್ಯಾತ್ಮಿಕ ಸ್ವಾತಂತ್ರ್ಯದ ಬೆಲೆಯನ್ನು ತಿಳಿಯಲಾರನು ಇದಲ್ಲದೆ ಮನುಷ್ಯನು ಸಂಘಜೀವಿಯಾಗಿರುತ್ತಾನೆ ತನ್ನ ಸಮುದಾಯ, ತನ್ನ ನಾಡು, ತನ್ನ ದೇಶ ಇವುಗಳ ಅಭ್ಯುದಯವನ್ನು ಅವನು ಚಿಂತಿಸುತ್ತಾನೆ ಅವನ ಆತ್ಮವು ಸುಸಂಸ್ಕಾರಯುಕ್ತವಾಗಬೇಕಾದರೆ, ಅವನ ನಾಡಿನ ಪರಿಸ್ಥಿತಿಯು ಸಹ ಶ್ರೇಷ್ಠತರಗತಿಯದಾಗಿರಬೇಕೆಂಬುದು ನಿರ್ವಿವಾದವು. ಬಲಹೀನತೆಯಿಂದ ತುಂಬಿ ತುಳುಕುತ್ತಿರುವ ಒಂದು ದೇಶದಲ್ಲಿ ಜನಿಸಿದವನು ಎಂದಿಗೂ ಧೈರ್ಯಸಂಪನ್ನನಾಗಲಾರನು. ಉದಾಹರಣೆಗಾಗಿ ಭಾರತವರ್ಷದ ಪೌರಾಣಿಕ ಕಾಲವನ್ನೇ ನಾವು ತೆಗೆದುಕೊಳ್ಳೋಣ ಆ ಕಾಲದಲ್ಲಿ ನಾಡಿನ ಸ್ಥಿತಿಯು ಎಷ್ಟು ಉತ್ತಮವಾಗಿದ್ದಿತು? ಜನತೆಯ ಬಾಳು ಎಷ್ಟು ನಿರ್ಮಲವಾಗಿದ್ದಿತು! ಆದುದರಿಂದಲೇ ಆ ಕಾಲದಲ್ಲಿ ಶ್ರೀರಾಮ, ಶ್ರೀಕೃಷ್ಣ, ಮಾಂಧಾತ, ಜಮದಗ್ನಿ, ವಿಶ್ವಾಮಿತ್ರ, ಶುಕ, ದಧೀಚಿ, ವ್ಯಾಸ ಎಂಬಿತ್ಯಾದಿ ಯೋಗಿಗಳೂ ಪರಮಹಂಸರೂ ಭಾರತವರ್ಷದಲ್ಲಿ ಬೆಳಗಿದರು. ಈಗ ನಮ್ಮ ನಾಡಿನಲ್ಲಿ ಮೂವತ್ತು ಮೂರು ಕೋಟಿ ಮಂದಿ ಜನರಿದ್ದರೂ ನಮ್ಮ ಮಧ್ಯದಲ್ಲಿ ಎಷ್ಟು ಮಂದಿ ಆತ್ಮತೇಜಸಂಪನ್ನರಿದ್ದಾರೆ? ಈಗ ಭಾರತವರ್ಷದಲ್ಲಿ ಮಹಾತ್ಮರ ಸಂಖ್ಯೆಯು ವಿರಳವಾಗಿದೆ; ಕಾರಣವೇನು? ನಮ್ಮ ಬಲಹೀನತೆ! ನಮ್ಮ ಪೌರುಷಶೂನ್ಯತೆ! ಸಹಸ್ರಗಟ್ಟಲೆ ಮಹಾಪುರುಷರನ್ನೂ ಧೀರರನ್ನೂ ಸೃಷ್ಟಿಸುವ ಚೈತನ್ಯವು ಇಂದಿನ ಜನಾಂಗಕ್ಕಿಲ್ಲ! ದಾಸ್ಯದ ಭಯಂಕರ ಕತ್ತಲೆಯಲ್ಲಿ ನರಳುತ್ತಿರುವ ಸತ್ವಶೂನ್ಯರಲ್ಲಿ ಪೌರುಷವು

ಹೇಗೆ ಕಂಗೊಳಿಸೀತು? ಆದುದರಿಂದ ನಾವು ಅಭ್ಯುನ್ನತಿಯನ್ನು ಹೊಂದಬೇಕಾದರೆ ನಮ್ಮಲ್ಲಿರುವ ಬಲಹೀನತೆಯನ್ನು ಹೊಡೆದೋಡಿಸಬೇಕು; ಧೈರ್ಯದಿಂದ ಕೂಡಿದ ಹೃದಯವುಳ್ಳವರಾಗಬೇಕು; ಪರದಾಸ್ಯದಿಂದ ವಿಮೋಚನೆಯನ್ನು ಹೊಂದಬೇಕು. ಸುಧಾಂಶುವು ಹೇಳಿದಂತೆ ಇಂದಿನ ಪರಿಸ್ಥಿತಿಗೆ ಪರದಾಸ್ಯವನ್ನು ಎದುರಿಸಲಿರುವ ಆಯುಧವು ಅಸಹಕಾರವಾಗಿದೆ. ಸತ್ಯಾಗ್ರಹವು ಈ ಲೋಕದಲ್ಲಿರುವ ಇತರ ಎಲ್ಲ ಆಯುಧಗಳಿಗಿಂತಲೂ ತೀವ್ರವಾದುದಾಗಿದೆ. ನಿರಾಯುಧನಾಗಿ, ಶತ್ರುವನ್ನು ಸಹ ಪ್ರೀತಿಸಿ ಪ್ರೇಮಮಂತ್ರದಿಂದ ಅವನನ್ನು ಜಯಿಸುವದೇ ಸತ್ಯಾಗ್ರಹದ ಗುರಿಯು! ಇದು ಮನುಷ್ಯನ ಆತ್ಮವು ಎಷ್ಟು ಬಲವಾಗಿದೆ? ಎಂಬುದನ್ನು ಸೂಚಿಸುತ್ತದೆ. ಆದುದರಿಂದ ನಾವು ಈ ಸಂಗ್ರಾಮದಲ್ಲಿ ಭಾಗವನ್ನು ವಹಿಸಬೇಕು. ಜನತೆಯ ಹಿತವೇ ನಮ್ಮ ಹಿತವಾಗಿದೆ, ಎಂಬುದನ್ನು ನಾವು ಸದಾ ನೆನಪಿದಲ್ಲಿಡಬೇಕಾಗಿದೆ.''

ನಳಿನೀರಂಜನನ ಅಮೂಲ್ಯವಾದ ಈ ಉಪದೇಶವು ಶಿಷ್ಯನಿಗೆ ಸತ್ಯಾಗ್ರಹವನ್ನು ಕುರಿತುಳ್ಳ ಸಂದೇಹಗಳು ದೂರವಾಗುವಂತೆ ಮಾಡಿತು. ಅಸಹಕಾರ ಸಿದ್ಧಾಂತದ ತಳದಿಯನ್ನು ಶಿಷ್ಯರು ತಿಳಿದುಕೊಂಡರು. ಆದರೂ ಹಲವು ಮುಗಿಲುಗಳು ಅವರ ಬುದ್ಧಿಯನ್ನು ತ್ಯಜಿಸಿ ತೊಲಗಲಿಲ್ಲವು. ಆದುದರಿಂದ ಒಬ್ಬ ಶಿಷ್ಯನು ಆಚಾರ್ಯನನ್ನು ಪ್ರಶ್ನಿಸಿದನು: ''ಮನುಷ್ಯನು ಜೀವಿಸುತ್ತಿರುವದು ಪರಿಪೂರ್ಣತೆಯನ್ನು ಹೊಂದುವುದಕ್ಕಾಗಿದೆ. ಆತ್ಮಸ್ವಾತಂತ್ರ್ಯವು ನಮಗೆ ಬೇಕಾದುದು. ಅದನ್ನು ತ್ಯಜಿಸಿ ನಮ್ಮಲ್ಲಿರುವ ಶಕ್ತಿಯನ್ನು ರಾಜಕೀಯ ಗೊಂದಲಗಳಲ್ಲಿ ವಿನಿಯೋಗಿಸಿದರೆ, ಆ ಕೆಲಸವು ದುರ್ವ್ಯಯವಾಗುವುದಿಲ್ಲವೇ?''

''ತಮ್ಮಾ, ನಿನ್ನ ತಿಳುವಳಿಕೆಯು ಸರಿಯಾದುದಲ್ಲ; ಆತ್ಮಸ್ವಾತಂತ್ರ್ಯವೇ ಮಾನುಷ ಜೀವನದ ಗುರಿಯೆಂಬುದು ನಿಜವು; ಆದರೆ ಅದೇ ಸಮಯದಲ್ಲಿ ನಾವು ಮನುಷ್ಯನು ಸಂಘಜೀವಿಯಾಗಿರುತ್ತಾನೆ ಎಂಬುದನ್ನು ತಿಳಿಯಬೇಕಾಗಿದೆ. ಆತ್ಮಸಾಕ್ಷಾತ್ಕಾರವು ಏಕಾಂತವಾದ ನಿರ್ಜನ ಪ್ರದೇಶದಲ್ಲಿ ಕುಳಿತು ಜ್ಞಾನಮಗ್ನನಾಗುವುದರಿಂದ ಮನುಷ್ಯನಿಗೆ ಸಿದ್ಧಿಸಲಾರದು. ಶಾಶ್ವತವಾದ ಶಾಂತಿಸುಖವನ್ನು ಹೊಂದುವುವೇ ಬಾಳಿನ ಉದ್ದೇಶವಾಗಿದ್ದರೂ, ಅದನ್ನು ಸಾಧಿಸಲು ಗೊಂದಲಗಳಿಂದ ನಿಬಿಡವಾದ ಒಂದು ದಾರಿಯನ್ನು ನಾವು ಅವಲಂಬಿಸಬೇಕಾಗಿ ಬರುತ್ತದೆ. ಪ್ರಯತ್ನ, ನಲ್ಮೆ, ಒಲವು ಎಂಬವುಗಳೇ ನಮ್ಮ ಆದರ್ಶಸಾಧನೆಗಿರುವ ಆಯುಧಗಳು! ನಮ್ಮ ಆತ್ಮಗಳನ್ನು ನಾವು ತಿಳಿಯಬೇಕಾದರೆ, ನಮ್ಮ ಆತ್ಮಗಳ ಪ್ರತಿಬಿಂಬಗಳು ಜನತೆಯ ಎದೆಗಳಲ್ಲಿವೆಯೆಂಬುದನ್ನು ನಾವು ದರ್ಶಿಸಿ ತಿಳಿಯಕೊಳ್ಳಬೇಕಾಗಿದೆ! ಇದಲ್ಲದೆ ಧೈರ್ಯವೂ, ಕಲಿತನವೂ ಅತ್ಯಾವಶ್ಯಕವಾಗಿರುವವು. ಹೇಡಿಯು ತನ್ನ ಜೀವನದ ಬೆಲೆಯನ್ನು ತಿಳಿದುಕೊಳ್ಳಲಾರನು. ಅವನು ನೂರುಸಂವತ್ಸರ ಕಾಲ ಜೀವಿಸಿದರೂ, ತನ್ನ ಬಾಳಿನ ಬೆಲೆಯನ್ನಾಗಲೀ ತನ್ನಲ್ಲಿ ಬೆಳಗುತ್ತಿರುವ ಶಕ್ತಿಯನ್ನಾಗಲೀ ಅರಿತುಕೊಳ್ಳಲಾರನು. ನಮ್ಮ ನಾಡು ಎಂದರೆ, ಅದೊಂದು ನಿರ್ಜೀವ ವಸ್ತುವಲ್ಲ. ನಮ್ಮ

ಸಂಸ್ಕೃತಿಯು ಮತ್ತು ನಮ್ಮ ಜೀವನದ ತಳಹದಿಯಾಗಿದೆ ಅದು! ನಮ್ಮ ನಾಡಿಗೆ ಯಾವುದಾದರೂ ಒಂದು ವಿಪತ್ತು ಬಾಧಿಸಿದರೆ, ಅದು ನಮ್ಮೆಲ್ಲರನ್ನೂ ಬಾಧಿಸಿದಂತೆಯೇ ಸರಿ; ಏಕೆಂದರೆ ನಾನು ನನ್ನ ನಾಡಿನ ಪ್ರಜೆಗಳಲ್ಲಿ ಒಬ್ಬನಾದುದರಿಂದ, ನನ್ನ ನಾಡಿನ ಪ್ರಜೆಗಳಿಗೆ ಬಂದೊದಗುವ ಸಂಕಟಗಳು ನನಗೆ ಬಂದೇ ಬರುವವು. ಈ ಗೊಂದಲಗಳು ನನಗೆ ಬೇಕಿಲ್ಲವೆಂದು ನುಡಿದು, ಜನರ ಆ ವಿಪತ್ತುಗಳನ್ನು ಎದುರಿಸಲು ಹೂಡಿರುವ ಕೃತ್ಯಗಳಲ್ಲಿ ಭಾಗವನ್ನು ವಹಿಸಲು ನಾನು ಹಿಂಜರಿದರೆ, ಅದು ನನ್ನ ಹೇಡಿತನದ ಲಕ್ಷಣವಾಗಿದೆ. ಆ ಕೃತ್ಯದಿಂದ ನನಗೆ ಎಂದಿಗೂ ಏಳಿಗೆಯಾಗಲಾರದ.; ಏಕೆಂದರೆ ಹೇಡಿಯು ತನ್ನ ಜೀವನದಲ್ಲಿ ವಿಜಯವನ್ನು ಹೊಂದಲಾರನು. ಆಧ್ಯಾತ್ಮಿಕ ಜೀವನವೆಂಬುದು ಭೀರುಗಳು ಧರಿಸಲು ಯೋಗ್ಯವಾದ ಒಂದು ರಕ್ಷಾಕವಚವಲ್ಲ. ಲೋಕದಲ್ಲಿರುವ ಕೆಲವು ಮತಗಳು ಆ ಕೃತ್ಯಗಳನ್ನು ಅಹಿಂಸೆಯೆಂದು ಪ್ರಶಂಸಿಸುತ್ತಿದ್ದರೂ. ಆರ್ಯಧರ್ಮ ಅದನ್ನು ಒಪ್ಪುವುದಿಲ್ಲ ಗೀತೆಯು ಅಂಥವರನ್ನು ಷಂಢರೆಂದು ನುಡಿದಿದೆ! ಆರ್ಯಧರ್ಮವು ಸದಾ ಪ್ರಯತ್ನಿಸಲು, ತನ್ನ ಕುಟುಂಬದ-ತನ್ನ ನಾಡಿನ ಹಿತಕ್ಕಾಗಿ ಉದ್ಯಮಿಸಲು ಉಪದೇಶಿಸುತ್ತದೆ. ಓರ್ವಜ್ಞಾನಿಯು ತನ್ನ ತಪಸ್ಸಿನ ಮೂಲಕ ಉನ್ನತವಾದ ಯಾವ ಸ್ಥಾನವನ್ನು ಹೊಂದುವನೋ, ಅದೇ ವಲಯವನ್ನು ಒಬ್ಬ ಸಾಧಾರಣ ಮನುಷ್ಯನು ನಿಷ್ಕಾಮಕರ್ಮಗಳ ಮೂಲಕ ಸೇರಬಹುದು. ಸರ್ವಸಂಗ ಪರಿತ್ಯಾಗಿಯಾದ ಸಂನ್ಯಾಸಿಗಿಂತಲೂ, ತನ್ನ ನಾಡಿನ ಹಿತಕ್ಕಾಗಿ ಉದ್ಯಮಿಸುತ್ತಿರುವ ಕರ್ಮಯೋಗಿಯು ಶ್ರೇಷ್ಠನು! ಆದುದರಿಂದಲೇ, ಜ್ಞಾನಮಾರ್ಗದ ರಹಸ್ಯವನ್ನು ತಿಳಿದಿದ್ದರೂ ಶ್ರೀಕೃಷ್ಣ, ಜನಕ, ಮಹಮ್ಮದ ಪೈಗಂಬರ ಎಂಬಿತ್ಯಾದಿ ದಿವ್ಯ ಪುರುಷರು ಗೊಂದಲಗಳಿಂದ ನಿಬಿಡವಾದ ಕರ್ಮಮಾರ್ಗವನ್ನೇ ಸ್ವೀಕರಿಸಿ, ಜನತೆಯ ಅಭ್ಯುದಯಕ್ಕಾಗಿ ಹೆಣಗಿದರು. ಅಷ್ಟೇಕೆ ದೂರ ಹೋಗುವುದು? ಉದಾಹರಣೆಗಾಗಿ ಆರು ಶತಮಾನಗಳ ಹಿಂದೆ ಕನ್ನಡನಾಡಿನಲ್ಲಿ ಬಾಳಿದ ಶ್ರೀ ವಿದ್ಯಾರಣ್ಯರನ್ನೇ ತೆಗೆದುಕೊಳ್ಳೋಣ ಅವರು ಅಸಾಧಾರಣ ತಪಸ್ವಿಗಳಾಗಿದ್ದರು! ಬಾಳಿನಲ್ಲಿ ದಿವ್ಯ ಚೈತನ್ಯವನ್ನು ದರ್ಶಿಸಿದ ಮಹಾತ್ಮರವರು! ಅವರ ಆತ್ಮವು ಬಂಧನದಿಂದ ಬಿಡುಗಡೆಯನ್ನು ಹೊಂದಿದ್ದರೂ ತಮ್ಮ ನಾಡಿಗೆ ಬಂದೊದಗಿದ ವಿಪತ್ತನ್ನು ಕಂಡು ತಮ್ಮ ನಾಡಿನ ಜನತೆಯ ಅಭ್ಯುದಯವನ್ನು ಚಿಂತಿಸಿ, ಕರದಲ್ಲಿ ಖಡ್ಗವನ್ನು ಹಿಡಿದು, ಕರ್ಮಗಳನ್ನು ಆಚರಿಸಲು ಅವರು ಹಿಂಜರಿಯಲಿಲ್ಲ. ಆದುದರಿಂದ ಗೆಳೆಯರೇ, ಇಂದಿನ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವನ್ನು ವಹಿಸುಸುವದು ನಮ್ಮ ಕರ್ತವ್ಯವಾಗಿದೆ ಜನಸೇವೆಯು ಈಗಿನ ಸೇವೆಯ ಒಂದು ರೂಪಭೇದವಾಗಿದೆ. ದೇಹವೆಂಬುವೇ ಒಂದು ದೇವಾಲಯವೆಂದು ಬಲ್ಲವರು ಹೇಳುತ್ತಾರೆ. ಈ ಗುಡಿಗಳಲ್ಲಿ ಬೆಳಗುತ್ತಿರುವ ಸಜೀವ ಮೂರ್ತಿಗಳನ್ನು ಆರಾಧಿಸುವದು ಎಲ್ಲದಕ್ಕಿಂತಲೂ ಉಚಿತವಾದುದಲ್ಲವೆ? ಆದುದರಿಂದ ಎಲ್ಲ ದೃಷ್ಟಿಕೋನಗಳ ಮೂಲಕ ವೀಕ್ಷಿಸಿದರೂ, ವಿದೇಶೀಯ ಶಾಸನದಿಂದ ವಿಮುಕ್ತರಾಗಲು, ಭಾರತೀಯ

ರಾದ ನಾವು ಮಹಾತ್ಮಾಜಿಯವರ ಅಸಹಕಾರ ಆಯುಧವನ್ನು ಧರಿಸಿ ನಾಡಿನ ಅಭ್ಯು ದಯಕ್ಕಾಗಿ ಹೆಣಗುವದು ನಮ್ಮ ಕರ್ತವ್ಯವಾಗಿವೆ"

ನಳಿನೀರಂಜನನು ಉಪದೇಶಗಳನ್ನು ನೀಡುತ್ತಿರುವ ಒಬ್ಬ ಆಚಾರ್ಯನು ಮಾತ್ರವಾಗಿರಲಿಲ್ಲ; ತನ್ನ ಆದರ್ಶಗಳನ್ನು ಆಚರಣೆಯಲ್ಲಿ ತಂದು ತನ್ನ ಶಿಷ್ಯರಿಗೆ ನವೀನ ಮಾರ್ಗವನ್ನು ತೋರಿಸಿಕೊಡುವ ಒಬ್ಬ ಸಾಧಕನೂ ಸಹಾ ಆಗಿದ್ದನು. ಅವನು ತನ್ನ ಉಪದೇಶಗಳಿಂದ ಮಾತ್ರವಲ್ಲ; ತನ್ನ ಪ್ರಯತ್ನಗಳಿಂದಲೂ ನಮ್ಮ ಅಭಿವೃದ್ಧಿಗೆ ಸ್ವಾತಂತ್ರ್ಯ ಸಂಪಾದನೆಯು ಹೇಗೆ ಅವಶ್ಯವಾಗಿದೆ ಎಂಬುದನ್ನು ಪ್ರಯು ಕ್ತಿಸಿದನು. ಸ್ನೇಹಪರಿಪೂರ್ಣವಾದ ವರ್ತನೆ, ಪರರ ದುಃಖಗಳಲ್ಲಿ ಅನುತಾಪ, ಸಹನಾತ್ಮಕ ಬುದ್ಧಿ ಎಂಬೀ ನಳಿನೀರಂಜನನ ಗುಣಗಳು ಯಾರನ್ನೂ ಆಕರ್ಷಿಸದೆ ಇರಲಾರವು. ಅವನು ಒಬ್ಬ ವಕೀಲನಾಗಿದ್ದುದರಿಂದ ಈಗಿನ ವಿಚಾರಣ ಪದ್ಧತಿಯು ಹೇಗೆ ಹೆಚ್ಚು ಬೆಲೆಯುಳ್ಳದ್ದೂ, ಜನರಿಗೆ ನ್ಯಾಯವನ್ನು ಕೊಡಲು ಅಪ್ರಾಪ್ತವಾದದ್ದೂ ಆಗಿವೆ ಎಂಬುದನ್ನು ತಿಳಿದುಕೊಂಡಿದ್ದನು. ಇಂದಿನ ನ್ಯಾಯಶಾಲೆಗಳು ಎಷ್ಟೇ ಉತ್ತಮವಾಗಿದ್ದರೂ ಅವುಗಳಲ್ಲಿ ನ್ಯಾಯದೊರಕಬೇಕಾದರೆ, ಪ್ರಜೆಗಳು ಕೊಡಬೇಕಾ ಗಿರುವ ಬೆಲೆಯು ಹೆಚ್ಚು ಆಗಿರುತ್ತದೆ ವಕೀಲರು, ಸಾಕ್ಷಿಗಳು ಇವರಿಗೆ ನ್ಯಾಯ ವನ್ನು ಬೇಡುವವನು ಕೈತುಂಬ ಹಣವನ್ನು ಕೊಡಬೇಕಾಗಿ ಬರುತ್ತದೆ; ಇದಲ್ಲದೆ ದೂರದ ಹಳ್ಳಿಯಲ್ಲಿ ಜೀವಿಸುತ್ತಿರುವ ಹಳ್ಳಿಗನು ನ್ಯಾಯಸ್ಥಾನಕ್ಕೆ ತೆರಳಿದರೆ, ಅವನ ಆ ವರ್ಷದ ಬೇಸಾಯವೇ ಹಾಳಾಗಿ ಹೋಗುತ್ತದೆ. ಏಕಂದರೆ ಪ್ರಾಚೀನಕಾಲದ ಗ್ರಾಮ ಪಂಚಾಯಿತಿಯ ಪದ್ಧತಿಯು ಈಗ ನಿಂತು ಹೋಗಿದೆ. ಅದರ ಬದಲು ಬಂದಿ ರುವ ಕೋರ್ಟುಗಳು ನಗರಗಳಲ್ಲಿ ಮಾತ್ರವಿರುವುದರಿಂದ, ನ್ಯಾಯಾಲಯಕ್ಕೆ ದಿನ ನಿತ್ಯವೂ ಓಡಬೇಕಾಗಿ ಬರುವ ಬೇಸಾಯಗಾರನಿಗೆ ತನ್ನ ಹೊಲವನ್ನು ನೋಡಲು ಎಲ್ಲಿಯ ಸಮಯವು?

ಈ ಎಲ್ಲಾ ಕಾರಣಗಳಿಂದ ನಳಿನೀರಂಜನನು ಇಂದಿನ ನ್ಯಾಯಾಲಯಗಳಲ್ಲಿ ಬಡ ಜನರು ನ್ಯಾಯವನ್ನು ಸಾಧಿಸುವದಕ್ಕೆ ಕೊಡಬೇಕಾಗಿ ಬರುತ್ತಿರುವ ಬೆಲೆಯು ಬಹಳ ಹೆಚ್ಚಾಗಿದೆ, ಎಂಬುದನ್ನು ತಿಳಿದುಕೊಂಡನು. ಇದಲ್ಲದೆ ಈ ನ್ಯಾಯಾ ಲಯಗಳ ಮೂಲಕ ದೇಶದಲ್ಲಿ ದಾರಿದ್ರ್ಯವು ಹೆಚ್ಚುತ್ತದೆ ಎಂಬ ಸತ್ಯವು ಅವನಿಗೆ ಹೊಳೆಯಿತು. ಆದುದರಿಂದ ಶಿವಪುರದಲ್ಲಿ ಒಂದು ಗ್ರಾಮ-ಪಂಚಾಯಿತಿಯನ್ನು ಸ್ಥಾಪಿಸಿ, ಅದರ ಮೂಲಕ ಜನರಿಗೆ ನ್ಯಾಯವು ದೊರಕುವಂತೆ ಮಾಡಿದನು. ಆ ಗ್ರಾಮದ ಜನರ ವಿಶ್ವಾಸಕ್ಕೆ ಪಾತ್ರರಾದ ನಾಲ್ಕಾರು ಮಂದಿ ಸಜ್ಜನರು ಸೇರಿ ಜನರ ಮಧ್ಯದಲ್ಲಿ ಆವಿರ್ಭವಿಸುತ್ತಿರುವ ವ್ಯವಹಾರಗಳನ್ನು ಸಮರ್ಪಕವಾದ ರೀತಿಯಲ್ಲಿ ತೀರಿಸತೊಡಗಿದರು.

ನಳಿನೀರಂಜನನು ಸಾಧಿಸಿದ ಇನ್ನೊಂದು ಮಹತ್ಕೃತ್ಯವು ಮದ್ಯಪಾನವನ್ನು ತಡೆಗಟ್ಟಿದುದಾಗಿ. ಈ ಬಂಗಾಳ್ಯದ ನಾಡಿನ ಪರಿಸ್ಥಿತಿಯು ಇನ್ನಿಷ್ಟು

ಹಾಳಾಗುತ್ತಿದೆ, ಎಂಬುದನ್ನು ನಳಿನೀರಂಜನನು ಅರಿತುಕೊಂಡನು. ಅರ್ಧನಗ್ನರಾಗಿ ಅರ್ಧಹೊಟ್ಟೆಯಲ್ಲಿ ಜೀವಿಸುತ್ತಿರುವ ಬಡಪಾಯಿಗಳು ಮದ್ಯಪಾನವೆಂಬ ಕ್ರೂರರಾಕ್ಷಸಿಯ ಬಲೆಯಲ್ಲಿ ಸಿಲುಕಿ ನರಳುತ್ತಿರುವ ದಯನೀಯ ನೋಟವು ನಳಿನೀರಂಜನನ ಎದೆಯನ್ನು ಕರಗುವಂತೆ ಮಾಡಿತು. ತನ್ನ ಕಾಸನ್ನು ಹಾಳು ಮಾಡಿ, ಮನುಷ್ಯನು ವಿಷವನ್ನು ಕೊಂಡುಕೊಳ್ಳುತ್ತಲಿದ್ದಾನೆ ಆ ಮದಿರೆಯು ಅವನ ಉದರದಲ್ಲಿ ಪ್ರವೇಶಿಸಿ, ಅವನ ಬುದ್ಧಿಯನ್ನು ಹಾಳು ಮಾಡುತ್ತಿದೆ ಅಮಲು ಹಿಡಿದ ಮನುಷ್ಯನು ಮನೆಗೆ ಬಂದು ತನ್ನ ಹೆಂಡದೀ ಮಕ್ಕಳೊಡನೆ ರಾಕ್ಷಸನಂತೆ ವರ್ತಿಸುತ್ತಾನೆ. ಮನೆಯಲ್ಲಿ ಮಕ್ಕಳು ಉಪವಾಸದಲ್ಲಿ! ಈ ಮದ್ಯಪಾನದಿಂದ ಜನತೆಯು ಅನುಭವಿಸುತ್ತಿರುವ ಭಯಂಕರ ವಿಪತ್ತುಗಳನ್ನು ಕಂಡು ಅವನು ಮರುಗಿದನು. ಅವನು ತನ್ನ ಶಿಷ್ಯರೊಡನೆ ಜನರಿಗೆ ಮದ್ಯಪಾನದಿಂದ ಸಂಭವಿಸುತ್ತಿರುವ ಸಂಕಟಗಳನ್ನು ವಿವರಿಸಲಾರಂಭಿಸಿದನು ಅವರಲ್ಲಿ ವ್ಯಾಪಿಸಿರುವ ಯಾವಿದ್ಯೆಯನ್ನು ಹೊರದೂಡಿ ಜ್ಞಾನದೀಪವನ್ನು ಹಚ್ಚಿಸಿದನು.

ಬೆಳಕು ಹರಿಯಿತು; ಅನೇಕ ವರ್ಷಗಳವರೆಗೆ ನಿದ್ರೆಯಲ್ಲಿ ಬಿದ್ದಿರುವ ಭಾರತವರ್ಷವು ಜಾಗೃತವಾಯಿತು ತನ್ನ ಚೈತನ್ಯವನ್ನು ಪಡೆಯುವದಕ್ಕಾಗಿ-ತನ್ನನ್ನು ತಾನು ತಿಳಿಯುವದಕ್ಕಾಗಿ ನಾಡದೇವಿಯು ಉದ್ಯುಕ್ತಿಸಿದಳು ಆ ಮಂಗಲಮುಹೂರ್ತದಲ್ಲಿ ತಮ್ಮ ನಾಡಿಗೆ ಹೊಸದಾದ ಒಂದು ಕರ್ಮಪದ್ಧತಿಯ ಮೂಲಕ ಮಹಾತ್ಮಜಿಯವರು ಬಿಡುಗಡೆಗೆ ಇರುವ ದಾರಿಯನ್ನು ತೋರಿಸಿದರು. ಜ್ಞಾನದ ಬೆಳಕು ಆಸೇತುಹಿಮಾಚಲ ಪರ್ಯಂತ ವ್ಯಾಪಿಸತೊಡಗಿತು. ಭಾರತವರ್ಷದಲ್ಲಿ ಸ್ವಾತಂತ್ರ್ಯಭಾನುವು ಉದಯವನ್ನು ಹೊಂದುವ ವೇಳೆಯು ಸಂಪ್ರಾಪ್ತವಾಯಿತು! ಬಿಡುಗಡೆಗಾಗಿ ನರಳುತ್ತಿರುವ ಭಾರತೀಯರ ಸ್ವಾತಂತ್ರ್ಯದಾಹವು ವರ್ಧಿಸಿತು!

---

## ೧೮ ಸೆರೆಮನೆಗೆ.

'ಅಣ್ಣಾ!' ಎಂದಳು ಸರೋಜಳು.

"ಏನೇ ಸರೋಜ?"

"ಈ ದಿನ ಬರಲು ಇಷ್ಟೇಕೆ ವಿಳಂಬವಾಯಿತು?"

"ಕಾರ್ಯಬಾಹುಲ್ಯದಿಂದ" ಎನ್ನುತ್ತಾ ತನ್ನ ಮುಖದಲ್ಲಿ ಮೂಡಿದ ಬೆವರಿನ ಹನಿಗಳನ್ನು ತನ್ನ ಶಾಲಿನಿಂದ ಒರೆಸಿಕೊಂಡು, ಮಾಧವನು ಜಗುಲಿಯ ಮೇಲಿರುವ ಒಂದು ಚಾಪೆಯ ಮೇಲೆ ಆಸೀನನಾದನು.

"ಅವೇನು ಅಷ್ಟೊಂದು ಕೆಲಸಗಳು?"

"ಪತ್ರಿಕೆಗಳನ್ನು ನೀನು ಓದುವುದಿಲ್ಲವೆ? ಈಗ ನಮ್ಮ ನಾಡಿನ ಪರಿಸ್ಥಿತಿಯು ಉತ್ಕಟಾವಸ್ಥೆಗೆ ಬಂದು ತಲುಪಿದೆ ಭಾರತೀಯರೂಪ ನಮ್ಮ ಸತ್ವಪರೀಕ್ಷೆಯು

ಕಾಲವು ಸಂಪ್ರಾಪ್ತವಾಗಿದೆ. ಶಾಸಕರು ಜಲಿಯಾನವಾಲಾಬಾಗಿನ ಮೂಲಕ ನೀಡಿದ ಆಹ್ವಾನಕ್ಕೆ ನಾವು ಸರಿಯಾದ ಪ್ರತ್ಯುತ್ತರವನ್ನು ಕೊಡಬೇಕಾಗಿದೆ. ಆ ಭೀಕರದ ಹತ್ಯಾಕಾಂಡವನ್ನು ನೋಡಿಕೊಂಡು, ಸತ್ವಶೂನ್ಯವಾಗಿ ಬಿದ್ದಿರಲು ಭಾರತವರ್ಷಕ್ಕೆ ಸಾಧ್ಯವಿಲ್ಲ. ನಮ್ಮ ನಾಡದೇವಿಯು ತನ್ನಲ್ಲಿರುವ ಚೈತನ್ಯವನ್ನು ಸ್ಫುರಿಸತೊಡಗಿದ್ದಾಳೆ. ಭಾರತಾತ್ಮವು ತನ್ನಲ್ಲಿರುವ ಪ್ರಭೆಯನ್ನು ಬೀರತೊಡಗಿದೆ. ಈ ಸಂದರ್ಭದಲ್ಲಿ ನಾವು ಮೌನವನ್ನವಲಂಬಿಸುವದುಚಿತವಲ್ಲ. ದುಡಿಯಬೇಕು. ಹಿಮಾಚಲದಂಥ ಮಹಚ್ಛಕ್ತಿಗಳು ನಮ್ಮ ಎದುರಾಗಿ ವ್ಯವಿಸುತ್ತಲಿದ್ದರೂ ಚಿಂತೆಯಿಲ್ಲ; ಅವುಗಳನ್ನು ಎದೆಯೊಡ್ಡಿ ಎದುರಿಸಲೇ ಬೇಕು. ಭಾರತೀಯರಾದ ನಾವು ಈಗ ಸ್ವಾಧೀನತೆಯನ್ನು ಸಂಪಾದಿಸಲೇ ಬೇಕಾಗಿದೆ!"

"ಸ್ವಾಧೀನತೆಯನ್ನು ಸಂಪಾದಿಸಲಿರುವ ದಾರಿ ಯಾವುದು?"

'ಕಳೆದ ಡಿಶಂಬರ ತಿಂಗಳಲ್ಲಿ (ಕಲಕತ್ತಾ ಸ್ಪೆಶಲ್ ಕಾಂಗ್ರೆಸ್ಸಿನಲ್ಲಿ) ನಮ್ಮ ನಾಯಕರಾದ ಮಹಾತ್ಮಾಜಿಯವರು ದಾರಿಯನ್ನು ತೋರಿಸಿದ್ದಾರೆ. ಸತ್ಯಾಗ್ರಹವೆಂಬ ಮಂತ್ರವನ್ನು ನಮಗೆ ಉಪದೇಶಿಸಿದ್ದಾರೆ. ಅದರ ಪದ್ಧತಿಯನ್ನು ಅವಲಂಬಿಸಿ ನಾವು ಸ್ವಾತಂತ್ರ್ಯವನ್ನು ಸಾಧಿಸಬೇಕಾಗಿದೆ. ಪರಕೀಯರಿಂದ ನಮ್ಮ ನಾಡು ಬಿಡುಗಡೆಯನ್ನು ಹೊಂದುವುದಕ್ಕಾಗಿ ಅಹಿಂಸಾಪರಿಪೂರ್ಣವಾದ ಅಸಹಕಾರವನ್ನು ಅವಲಂಬಿಸಬೇಕಾಗಿದೆ."

ಮಾಧವನು ಪ್ರಯತ್ನಶೀಲನೆಂಬುವನ್ನು ವಾಚಕರು ಈ ಮೊದಲೇ ಗ್ರಹಿಸಿರಬಹುದು. ಅವನಿಗೆ ತನ್ನದು, ತನ್ನ ಸುಖಕ್ಕಾಗಿ ಎಂಬ ಆಲೋಚನೆಯಿರಲಿಲ್ಲ. ಸುಖದ ಹಂಬಲವೇ ದುಃಖಕ್ಕೆ ಕಾರಣವು ಎಂಬ ಒಬ್ಬ ವೇದಾಂತಿಯ ಭಾವನೆಯು ಮಾಧವನ ಮೆದುಳಿನಲ್ಲಿದ್ದಿತು. ಅವನ ಸಿದ್ಧಾಂತವು "ಪ್ರಯತ್ನಿಸು, ಉದ್ಯಮಿಸು" ಎಂದು ಮಾತ್ರವಾಗಿದ್ದಿತು; ಪ್ರಯತ್ನದ ಫಲವನ್ನು ಕುರಿತು ಚಿಂತಿಸಬೇಕಾದ ಆವಶ್ಯವಿಲ್ಲ. ಈ ತತ್ವದಂತೆಯೇ ಅವನು ವರ್ತಿಸುತ್ತಲಿದ್ದನು. ಜನಸೇವೆಗೆ ದಾಂಪತ್ಯ ಜೀವನವು ಒಂದು ದೊಡ್ಡ ವಿಘ್ನವಾಗಿ ನಿಲ್ಲುವುದೆಂದು ಭಾವಿಸಿ, ಅವನು ವಿವಾಹಿತನಾಗದೆ, ಬ್ರಹ್ಮಚರ್ಯವನ್ನು ಸ್ವೀಕರಿಸಿದ್ದನು. ನಾಡಿನ ಅಭ್ಯುದಯವನ್ನು ಚಿಂತಿಸಿ, ತನ್ನ ಸ್ವಂತ ಸುಖಗಳಿಗೆ ಅವನು ತಿಲಾಂಜಲಿಯನ್ನು ನೀಡಿದ್ದನು. ಅವನ ಈ ಸ್ವಾರ್ಥತ್ಯಾಗದ ಮೂಲಕ ರಾಮನಗರದ ನಿವಾಸಿಗಳೆಲ್ಲರಲ್ಲಿಯೂ ಅವನನ್ನು ಕುರಿತು ಸ್ನೇಹ-ಬಹುಮಾನಗಳು ಜನಿಸಿದುವು.

ಮಾಧವನ ಪ್ರಯತ್ನಗಳು ಅಸಹಕಾರ ಆಂದೋಲನವು ಪ್ರಾರಂಭವಾಗಲು ಹೆಚ್ಚಿದುವು. ಈ ಮೊದಲೇ ಅವನು ತನ್ನ ಪತ್ರಿಕೆಯಲ್ಲಿ ಜನತೆಯ ಹೃದಯದಲ್ಲಿ ರಾಷ್ಟ್ರಬೋಧವು ಸಂಜಾತವಾಗುವಂತೆ ಮಾಡಲು ಉಜ್ವಲವಾದ ಲೇಖಗಳನ್ನು ಬರೆದು ಪ್ರಸಿದ್ಧಪಡಿಸುತ್ತಲಿದ್ದನು. ಅದಲ್ಲದೆ ರಾಮನಗರದಲ್ಲಿ ಹಲವು ರಾತ್ರಿಯ ಪಾಠಶಾಲೆಗಳನ್ನು ಸ್ಥಾಪಿಸಿ ಜನರ ಮಧ್ಯದಲ್ಲಿ ಹರಡಿರುವ ನಿರಕ್ಷರಕುಕ್ಷಿತ್ವವನ್ನು

ಹೋಗಲಾಡಿಸಲು ಅವಿಶ್ರಾಂತವಾಗಿ ಪರಿಶ್ರಮಿಸುತ್ತಲಿದ್ದನು. ಅಲ್ಲಲ್ಲಿ ಹಲವು ಸಭೆಗಳನ್ನು ಸೇರಿಸಿ, ರಾಷ್ಟ್ರವಿಜ್ಞಾನ, ಸಮಾಜವಿಜ್ಞಾನ, ಅನ್ಯದೇಶಗಳ ಸ್ವಾತಂತ್ರ್ಯ ಸಂಪಾದನೆಯ ಇತಿಹಾಸ ಎಂಬ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಮಾಡುತ್ತಿದ್ದನು ಒಂದು ಮಾತಿನಲ್ಲಿ ಹೇಳುವುದಾದರೆ ಮಾಧವನ ಜೀವನವು ಸಂಭವ ಬಹುಲವಾಗಿದ್ದಿತು ಅದಕ್ಕಾಗಿ ಅವನಿಗೆ ಬೇಸರವಿಲ್ಲ. ಪ್ರಜ್ವಲಿಸುತ್ತಿರುವ ಒಂದು ದೀಪದಂತೆ ಅವನು ಸದಾ ತನ್ನ ಚೈತನ್ಯವನ್ನೆಲ್ಲಾ ತನ್ನ ನಾಡಿನ ಏಳಿಗೆಗಾಗಿ ವಿನಿಯೋಗಿಸುತ್ತಲಿದ್ದನು. ಅವನ ನಿರಂತರ ಪರಿಶ್ರಮಗಳ ಫಲವಾಗಿ ರಾಮನಗರದ ನಿವಾಸಿಗಳಲ್ಲಿ ರಾಷ್ಟ್ರೀಯ ಬೋಧವು ಸಂಜಾತವಾಯಿತು.

ಭಾರತವರ್ಷದ ನಭೋವಲಯವನ್ನು ಆವರಿಸಿದ ಅಸಹಕಾರ ಆಂದೋಲನವು ರಾಮನಗರವನ್ನು ಸ್ಪರ್ಶಿಸದಿರಲಿಲ್ಲ. ಮಾಧವನು ಆ ಸಂಗ್ರಾಮದಲ್ಲಿ ತನ್ನ ತನು ಮನ ಧನಗಳನ್ನರ್ಪಿಸಿ ಕಾದಾಡಲಾರಂಭಿಸಿದನು. ಯಾಕೆಂದರೆ ತನ್ನ ನಾಡು ಬಿಡುಗಡೆಯನ್ನು ಹೊಂದಬೇಕಾದರೆ, ಮಹಾತ್ಮಜಿಯವರ ಸತ್ಯಾಗ್ರಹ ಮಂತ್ರವನ್ನು ಅನುಷ್ಠಿಸಬೇಕೆಂದು ಅವನು ತಿಳಿದನು. ಆ ಆಂದೋಲನದಲ್ಲಿ ಸ್ವಾಭಿಮಾನದ ಕಿಡಿಯು ಜ್ವಲಿಸುತ್ತಿರುವ ಹೃದಯದಿಂದ ಕೂಡಿದ ಪ್ರತಿಯೊಬ್ಬ ಭಾರತೀಯನೂ ಭಾಗವನ್ನು ವಹಿಸಿ, ತನ್ನ ನಾಡಿನ ಮೋಚನೆಗಾಗಿ ಯತ್ನಿಸುವುದು ಅವನ ಕರ್ತವ್ಯವಾಗಿದ್ದಿತು. ಮಾಧವನು ತನ್ನ ಕರ್ತವ್ಯವೆಂಬುದನ್ನು ಅರಿತನು.

ರಾಮನಗರಕ್ಕೆ ಅಸಹಯೋಗದ ದಿವ್ಯ ಸಂದೇಶವನ್ನು ಮಾಧವನು ಸಾರಿದನು. ಪರದೇಶೀ ವಸ್ತ್ರಗಳ ಬಹಿಷ್ಕಾರದ ಕೆಲಸವು ಭರದಿಂದ ಮುಂದೆಸಾಗಿತು ಬಡಜನರ ಅಭ್ಯುನ್ನತಿಗೆ, ಅರ್ಧನಗ್ನರಾಗಿ ಅರೆಹೊಟ್ಟೆಯಿಂದ ಜೀವಿಸುತ್ತಿರುವ ದೀನ ಜನರ ಸಂಕಟ ನಿವಾರಣೆಗೆ ಖಾದಿಯೇ ಅತ್ಯುತ್ತಮವಾದ ಔಷಧವೆಂಬುದನ್ನು ಜನರು ತಿಳಿದುಕೊಂಡರು. ಅದರೊಡನೆಯೇ ನ್ಯಾಯಾಲಯಗಳನ್ನು ಬಹಿಷ್ಕರಿಸುವ ಕೆಲಸವೂ ಮುಂದೆ ಸಾಗಿತು. ಹೊಸದಾದ ಒಂದು ಜೀವನವು ಜನತೆಯ ಮಧ್ಯದಲ್ಲಿ ಕಂಗೊಳಿಸಲಾರಂಭಿಸಿತು. 'ನಮ್ಮ ನಾಡು' ಎಂಬ ದೇಶೀಯ ಬೋಧವು ಇದುವರೆಗೆ ಭಿನ್ನ ಭಿನ್ನವಾಗಿ ಬಿದ್ದಿದ್ದ ಜನಾಂಗದ ಹೃದಯದಲ್ಲಿ ಅವತರಿಸಿತು. ಸ್ವಾಧೀನತೆಯಾಗಿದೆ ಬಾಳಿನ ಗುರಿಯು, ಎಂಬ ಮಂತ್ರವು ಮಹಾತ್ಮಜಿಯವರ ವದನ ಮಂಡಲದಿಂದ ಹೊರಬಿದ್ದ ಆ ದಿವ್ಯ ಮಂತ್ರವೂ ಅನೇಕ ಶತಮಾನಗಳ ವರೆಗೆ ನಿದ್ರೆಯಲ್ಲಿ ಬಿದ್ದಿದ್ದ ನಾಡನ್ನು ಎಚ್ಚರಿಸಿತು.

ಅಸಹಯೋಗದ ಆವಿರ್ಭಾವದೊಡನೆ ಮಾಧವನ ಕೆಲಸಗಳು ಹೆಚ್ಚುತೊಡಗಿದುವು. ಪತ್ರಿಕಾ ಪ್ರವರ್ತನೆಯಲ್ಲಿ ಅವನು ಇಟ್ಟಿದ್ದ ತನ್ನ ಶ್ರದ್ಧೆಯನ್ನು ಪರಿತ್ಯಜಿಸಲಿಲ್ಲ. ಎಂದಿನಂತೆ ಅವನ ಪೇನಾದಿಂದ ಹೊರಸೂಸುತ್ತಿರುವ ಉಜ್ವಲ ಲೇಖಗಳು ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದುವು. ಅದರಂತೆಯೇ ಜನತೆಗೆ ಅಕ್ಷರಜ್ಞಾನವನ್ನು ನೀಡಲಿರುವ ರಾತ್ರಿಯ ಪಾಠಶಾಲೆಗಳಾದರೂ ಅವನ ಉದ್ಯಮಗಳ ಫಲವಾಗಿ ನಡೆ

ಯುತ್ತಲಿದ್ದುವು. ಇದಲ್ಲದೆ ಅವನು ತನ್ನ ಪೂರ್ಣದೃಷ್ಟಿಯನ್ನು ಖಾದೀ ಪ್ರಚಾರದ ಮೇಲೆ ಪತಿಸಿದ್ದನು. ವಿರಾಮವೇಳೆಯಲ್ಲಿ ಸ್ವತಃ ತಾನೇ ನೂಲು ಮಾಡುತ್ತಿದ್ದುದಲ್ಲದೆ, ಜನರ ಮಧ್ಯದಲ್ಲಿ ಈ ಕೈಗಾರಿಕೆಯು ಹರಡುವಂತೆ ಮಾಡಲು ಆವಶ್ಯವಿರುವ ಕೆಲಸಗಳನ್ನು ಅವನು ನೆರವೇರಿಸುತ್ತಲಿದ್ದನು. ಖಾದೀ ವಸ್ತ್ರಗಳ ಮೂಟೆಯನ್ನು ತನ್ನ ಶಿರಸ್ಸಿನ ಮೇಲೆ ಹೊತ್ತುಕೊಂಡು ಬೀದಿಗಳಲ್ಲಿ ಸಂಚರಿಸಿ, ಆ ವಸ್ತ್ರಗಳನ್ನು ಅವನು ವಿಕ್ರಯಿಸುತ್ತಲಿದ್ದನು ಇದಲ್ಲದೆ ಅಲ್ಲಲ್ಲಿ ಸಭೆಗಳನ್ನು ಸೇರಿಸಿ, ಜನರಿಗೆ ಸ್ವಾತಂತ್ರ್ಯದ ಆವಶ್ಯಕತೆಯನ್ನೂ, ಪರದಾಸ್ಯದಿಂದ ಭಾರತ ವರ್ಷವು ತನ್ನ ಚೈತನ್ಯವನ್ನು ಹೇಗೆ ಕಳೆದುಕೊಂಡಿದೆ ಎಂಬುದನ್ನೂ ತನ್ನ ಭಾಷಣಗಳ ಮೂಲಕ ಅವನು ತಿಳಿಸುತ್ತಲಿದ್ದನು. ಈ ಎಲ್ಲಾ ಕಾರ್ಯಕಲಾಪಗಳು ಅವನ ವೇಳೆಯನ್ನು ತಿನ್ನುತ್ತಲಿದ್ದವು. ಕೆಲವು ದಿನಗಳಲ್ಲಿ ಅವನಿಗೆ ಸ್ವಲ್ಪವಾದರೂ ವಿಶ್ರಾಂತಿಯು ಲಭಿಸುತ್ತಿರಲಿಲ್ಲ; ಆದರೆ ಆ ಧೀರಾತ್ಮನು ತನ್ನ ದೇಹದ ಸುಖಗಳ ಕಡೆಗೆ ಹೆಚ್ಚಿನ ಶ್ರದ್ಧೆಯನ್ನು ಪತಿಸಲಿಲ್ಲ. ಹೀಗೆ ಅವನು ತನ್ನ ನಾಡಿನ ಅಭ್ಯುನ್ನತಿಯ ಕೆಲಸವನ್ನು ಕಂಡು ನಾಡಿನ ಏಳಿಗೆಗಾಗಿ ನಿರಂತರ ಪರಿಶ್ರಮಿಸುತ್ತಲಿದ್ದನು.

ಈ ರೀತಿ ಉದ್ಯಮಗಳಿಂದ ಬಳಲಿದ ಮಾಧವನು ತನ್ನ ವಾರಾಂತ್ಯದಲ್ಲಿ ವಿಶ್ರಮಿಸುವದಕ್ಕಾಗಿ ಹೊಸೂರ ಗ್ರಾಮಕ್ಕೆ ತೆರಳಿದನು. ಹೊಸೂರ ಗ್ರಾಮದಲ್ಲಾಗಿದೆ ಪದ್ಮಳು ಸರೋಜಳೊಡನೆ ಜೀವಿಸುತ್ತಿರುವದರ ನೆನಪು ವಾಚಕರಿಗಾಗಿರಬಹುದು. ಗಲಭೆಗಳಿಂದ ನಿಬಿಡವಾದ ನಗರಜೀವನದಿಂದ ಬೇಸತ್ತ ಮಾಧವನ ಆತ್ಮಕ್ಕೆ ಯಾವ ಆಲ್ಲೋಲ-ಕಲ್ಲೋಲಗಳಿಗೂ ಅವಕಾಶವಿಲ್ಲದ ಪ್ರಶಾಂತವಾದ ಗ್ರಾಮಜೀವನವು ಅಪಾರವಾದ ಶಾಂತಿಯನ್ನು ನೀಡಿತು. ಕೃತ್ರಿಮದ ಸುಳಿವಿಲ್ಲ; ಆಡಂಬರ ಹಾಗೂ ದಂಭ ಇವುಗಳ ಸ್ಪರ್ಶನವಿಲ್ಲ. ಸ್ವಾರ್ಜನತತ್ಪರತೆಯು ನಗರದಲ್ಲಿ ನಗ್ನವಾಗಿ ನರ್ತಿಸುತ್ತಿರುವಂತೆ ಗ್ರಾಮಜೀವನದಲ್ಲಿ ಅಷ್ಟು ರುಕ್ಷವಾಗಿ ತೋರುವುದಿಲ್ಲ. ಆಡಂಬರದ ಹಾಗೂ ಸುಖಲಾಲಸೆಯ ಹಂಬಲವು ಕಡಿಮೆಯಾಗಿರುವುದರಿಂದ, ಗ್ರಾಮನಿವಾಸಿಗಳಲ್ಲಿ ನಗರವಾಸಿಗಳಲ್ಲಿ ಗೋಚರವಾಗದ ಒಂದು ಸರಳತೆಯು ಪರಿಶೋಭಿಸುತ್ತಲಿದ್ದಿತು. ಔದಾರ್ಯವು ಹಳ್ಳಿಯಲ್ಲಿ ಒಂದು ಬುಗ್ಗೆಯಂತೆ ಹರಿಯುತ್ತಲಿರುವುದು. ಗ್ರಾಮಾಂತರದಲ್ಲಿ ಬೆಳಗುತ್ತಿರುವ ನಿಷ್ಕಲಂಕತೆಯು ಮಾಧವನ ಬಳಲಿಕೆಯನ್ನು ಹೋಗಲಾಡಿಸಿತು.

ಪದ್ಮಳ ಬದುಕಾದರೂ ಒಂದು ತಪಸ್ಸಾಗಿದ್ದಿತು. ತನ್ನ ಸುಖವನ್ನು ಗಣಿಸದೆ, ಆ ಮಹಿಳೆಯು ಹಳ್ಳಿಯ ಹೆಂಗಸರ ಮಧ್ಯದಲ್ಲಿ ಪಸರಿಸಿರುವ ಅಜ್ಞಾನ ಅಂಧವಿಶ್ವಾಸಗಳನ್ನು ಹೊಡೆದೋಡಿಸಲು ಯಾವ ರೀತಿ ಉದ್ಯಮಿಸುತ್ತಿದ್ದಳೆಂಬುದು ನಮಗೆ ತಿಳಿದ ಸಂಗತಿಯಾಗಿದೆ. ಮಾಧವನಾದರೂ ಪರಹಿತಕ್ಕಾಗಿ ದುಡಿಯುತ್ತಿರುವ ಪದ್ಮಳನ್ನು ಕಂಡು ಸಂತಸಪಟ್ಟನು. ಅವನು ಪದ್ಮಳ ಈ ಕೃತ್ಯಗಳಲ್ಲಿ ಒಂದು ಹೊಸ ಜನಾಂಗವನ್ನು ರಚಿಸುತ್ತಿರುವ ಚಿತ್ರವನ್ನು ದರ್ಶಿಸಿದನು. ಅವನ ಅಭಿಪ್ರಾಯವು

ಹಳೆಯದಾದ ಕೊಳೆತ ಮಲಿನ ವಿಚಾರಗಳು ನಶಿಸಬೇಕು; ಪರಿಶುದ್ಧವೂ ನವೀನವೂ ಆದ ಒಂದು ಬಾಳುವೆಯನ್ನು ಸ್ವೀಕರಿಸಬೇಕು, ಎಂಬುದಾಗಿದ್ದಿತು.

ಎಂದಿನಂತೆ ಒಂದು ಶನಿವಾರ ಮಾಧವನು ನಗರದಿಂದ ಹಳ್ಳಿಗೆ ಬಂದಾಗ ಈ ಅಧ್ಯಾಯದ ಪ್ರಾರಂಭದಲ್ಲಿ ಹೇಳಿದಂತೆ ಅವನು ಸರೋಜಳೊಡನೆ ಮಾತಾಡಿದನು. ಎಂದಿನಂತೆ ಆ ದಿನದ ಸಂಭಾಷಣೆಯಾದರೂ ತಾಯ್ನಾಡಿಗೆ ಸಂಬಂಧಿಸಿದ ವಿಷಯವೇ ಆಗಿದ್ದಿತು. ಪದ್ಮಳು ಜಗುಲಿಯ ಮೇಲೆ ಕುಳಿತು ಮಾಧವನ ಮಾತುಗಳನ್ನು ಆಶ್ರಾವಿಸುತ್ತಲಿದ್ದಳು. ಮಾಧವನು ಹೇಳತೊಡಗಿದನು:—"ಅಕ್ಕಾ! ನಾನು ಎಂದಿಗೆ ಸೆರೆಮನೆಗೆ ತೆರಳುವೆನೆಂಬುದು ಹೇಳಲಿಕ್ಕಾಗುವುದಿಲ್ಲ!"

"ಏಕೆ?" ಎಂದು ವಿಸ್ಮಯುವನ್ನು ಸೂಚಿಸುತ್ತ ಸರೋಜಳು ಪ್ರಶ್ನಿಸಿದಳು.

"ನಾಡು ಜಾಗೃತಿಯನ್ನು ಹೊಂದುವುದನ್ನು-ಜನತೆಯು ಸ್ವಾಧೀನತೆಯನ್ನು ಮರಳಿ ಪಡೆಯುವದಕ್ಕಾಗಿ ಪರಿಶ್ರಮಿಸುತ್ತಲಿರುವ ಉದ್ಯಮಗಳನ್ನು ಶಾಸಕರು ಇಷ್ಟಪಡುವುದಿಲ್ಲ. ಭಾರತವರ್ಷದ ಕ್ಷೇಮವನ್ನು ಚಿಂತಿಸಿ ಅವರು ಆಳುತ್ತಿರುವುದಿಲ್ಲ. ತಮ್ಮ ಇಷ್ಟಕ್ಕೆ ವಿಪರೀತವಾಗಿ ನಡೆಯುತ್ತಲಿರುವ ಎಲ್ಲ ಪ್ರಯತ್ನಗಳನ್ನೂ ಅವರು ತಡೆಯುತ್ತಾರೆ. ಜನರು ಜಾಗೃತಿಯನ್ನು ಹೊಂದಿದರೆ ತಮ್ಮ ನಿರಂಕುಶ ಪ್ರಭುತ್ವಕ್ಕೆ ಧಕ್ಕೆ ತಗಲುವುದೆಂಬುದನ್ನು ಅವರು ಬಲ್ಲರು. ಆದುದರಿಂದ ಸ್ವಾತಂತ್ರ್ಯ ಸಾಧನೆಗಾಗಿ ಯತ್ನಿಸುತ್ತಿರುವ ಜನರನ್ನು ಕಾರಾಗೃಹದಲ್ಲಿಡಲೂ ಗುಂಡಿನ ಮಳೆಯನ್ನು ಸುರಿಸಲೂ ಅವರು ಹಿಂಜರಿಯುವದಿಲ್ಲ ಸ್ವಾತಂತ್ರ್ಯಸಾಧನೆಗಾಗಿ ಯತ್ನಿಸುತ್ತಿರುವ ಪ್ರತಿಯೊಬ್ಬನೂ ಈ ಸಂಕಟಗಳಿಗೆ ಸ್ವಾಗತವನ್ನು ನೀಡಬೇಕಾಗಿರುತ್ತದೆ."

"ಅಣ್ಣಾ, ಜೇಲುವಾಸವೆಂಬುದು ಭಯಂಕರವಾದುದಲ್ಲವೆ?"

"ತುರಂಗವಾಸವೆಂಬುದು ಅಸತ್ಯ ಮತ್ತು ಅಧರ್ಮ ಈ ದಾರಿಗಳನ್ನು ಅನುಸರಿಸಿದವರಿಗೆ ಭಯಂಕರವಾಗಿ ತೋರಬಹುದು; ಆದರೆ ಸತ್ಯ ಮತ್ತು ಧರ್ಮ ಎಂಬ ದಾರಿಯನ್ನು ಅವಲಂಬಿಸಿ, ಅಧರ್ಮ ನಿರ್ಮೂಲಕ್ಕಾಗಿ ಹೊರಟ ಕರ್ಮಸಾಧಕನಿಗೆ ತುರಂಗವು ಭಯಂಕರ ರೂಪದಲ್ಲಿ ಗೋಚರವಾಗಲಾರದು; ಏಕೆಂದರೆ, ಅವನು ಭಯಾತೀತನು. ತನ್ನ ಪ್ರಯತ್ನಗಳಲ್ಲಿ ಮಾತ್ರ ಶ್ರದ್ಧೆಯನ್ನು ಪತಿಸಿ ದುಡಿಯುತ್ತಿರುವವನನ್ನು ಬಾಹ್ಯ ಜಗತ್ತಿನ ಕ್ಲೇಶಗಳು ಸ್ಪರ್ಶಿಸಲಾರವು. ಈ ಕರ್ಮಸಾಧಕನು ನರಕಕ್ಕೆ ತೆರಳಿದರೂ, ಅಲ್ಲಿನ ಭೀಕರತೆಯಾಗಲೀ ಹಿಂಸಾಮಯ ವಾತಾವರಣವಾಗಲೀ ಅವನ ಆತ್ಮವನ್ನು ಮುಟ್ಟಲಾರವು."

ಎಂಬ ಮಾತುಗಳನ್ನು ಪೂರೈಸುವುದರೊಳಗಾಗಿ ಒಂದು ಮೋಟಾರ ಲೋರಿಯು ಕುಟೀರದ ಮುಂದೆ ಬಂದು ನಿಂತಿತು. ತಮ್ಮ ಇಲಾಖೆಯ ಪೋಷಾಕಗಳನ್ನು ಧರಿಸಿದ ನಾಲ್ಕು ಮಂದಿ ಪೋಲೀಸು ಕಾನ್ಸ್ಟೇಬಲರೂ ಒಬ್ಬ ಸಬ್‌ಇನ್ಸಪೆಕ್ಟರನೂ ಲಾರಿಯಿಂದಿಳಿದರು. ಸಬ್‌ಇನ್ಸಪೆಕ್ಟರನು ತನ್ನ ಮಸ್ತಕವನ್ನು ಆಚ್ಛಾದಿಸಿರುವ

ಹ್ಯಾಟನ್ನು ತೆಗೆದು ತನ್ನ ಕರದಲ್ಲಿ ಹಿಡಿದುಕೊಂಡು ಕುಟೀರದ ಬಳಿಗೆ ತೆರಳಿದನು. ತಮ್ಮ ಕುಟೀರದ ಮುಂದೆ ಪ್ರತ್ಯಕ್ಷವಾಗಿರುವ ಆ ಕಾನ್ಸ್‌ಟೇಬಲರನ್ನು ಅವಲೋಕಿಸಿ ಹೆಂಗಸರಿಬ್ಬರೂ ಆಶ್ಚರ್ಯಭರಿತರಾದರು ಮಾಧವನು ಅವರ ಆಗಮನಕ್ಕಿರುವ ಕಾರಣವನ್ನು ಅರಿತವನಂತೆ ಒಂದು ಮಂದಸ್ಮಿತವನ್ನು ಬೀರಿದನು.

"ಅಣ್ಣಾ, ಈ ಪೋಲಿಸು ಅಧಿಕಾರಿಗಳು ಬಂದಿರುವುದೇಕೆ?" ಎಂದು ಸರೋಜಳು ಮೌನವನ್ನು ಭಂಜಿಸಿದಳು.

"ಅಪರಾಧಿಯನ್ನು ಹಿಡಿಯಲಿಕ್ಕಾಗಿರಬಹುದು; ಇದು ಅಸಹಕಾರ ಆಂದೋಲನವು ವ್ಯಾಪಿಸಿರುವ ಕಾಲವಾಗಿರುವದರಿಂದ, ರಾಜದ್ರೋಹಿಗಳಿಗೇನೂ ಕಡಿಮೆಯಿಲ್ಲ ಕಳ್ಳ-ಕಾಕರನ್ನು ಹಿಡಿಯುವದು ಮಹತ್ವದ ಕೆಲಸವಾಗಿರುವದಿಲ್ಲ. ಅಸಹಕಾರಿಗಳನ್ನು ಹಿಡಿಯುವದು ಮಹತ್ವದ ಕೆಲಸವಾಗಿರುವದು."

ಇಷ್ಟರಲ್ಲಿ ಸಬ್ ಇನ್ಸ್‌ಪೆಕ್ಟರನು ಕುಟೀರದ ಸಮೀಪಕ್ಕೆ ಬಂದನು ಅವನು ಮಾಧವನನ್ನು ನೋಡುತ್ತ ಅಂದನು:—"ನಮ್ಮ ನಾಡುಪತ್ರಿಕೆಯ ಸಂಪಾದಕರಾದ ಮಾಧವರಾಯರು ಈ ಊರಿಗೆ ಬಂದಿರುವರೆಂಬದಾಗಿ ನಾನು ತಿಳಿದೆನು. ಅವರು ಎಲ್ಲಿರುವರೆಂಬುದನ್ನು ತಾವು ದಯವಿಟ್ಟು ತಿಳಿಸುವಿರಾ?"

"ಅವರನ್ನು ಕಾಣಬೇಕಾದುದು ಬಹು ಅಗತ್ಯವಾದ ಕೆಲಸವೇ?" ಸಬ್ ಇನ್ಸ್‌ಪೆಕ್ಟರನನ್ನು ಎಳೆನಗೆಯೊಡನೆ ಮಾಧವನು ಪ್ರಶ್ನಿಸಿದನು.

"ಮಾಧವರಾಯರನ್ನು ದಸ್ತಗಿರಿ ಮಾಡಬೇಕಾಗಿದೆ!"

ಸಬ್ ಇನ್ಸ್‌ಪೆಕ್ಟರನ ನುಡಿಗಳನ್ನು ಆಶ್ರಾವಿಸಿ ಮಾಧವನ ಮುಖದಲ್ಲಿ ಬಲಹೀನತೆಯನ್ನು ತೋರಿಸತಕ್ಕ ಯಾವ ಭಾವಬೇಧಗಳೂ ಉದಯಿಸಲಿಲ್ಲ. "ನೀವು ಹುಡುಕುತ್ತಿರುವ ಮಾಧವರಾಯನೇ ನಾನಾಗಿರುತ್ತೇನೆ!"

"ಹಾಗಾದರೆ ತಮ್ಮನ್ನು ಬಂಧಿಸಲು ಡಿ. ಮ್ಯಾಜಿಸ್ಟ್ರೇಟರು ವಾರಂಟನ್ನು ಹೊರಡಿಸಿರುತ್ತಾರೆ. ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಹಲವು ಲೇಖನಗಳು ರಾಜದ್ರೋಹ ಪರಿಪೂರ್ಣವಾಗಿದ್ದು, ಸರಕಾರದವರನ್ನು ಕುರಿತು ಜನರ ಮನಸ್ಸಿನಲ್ಲಿ ವಿದ್ವೇಷವು ಉದ್ಭವಿಸುವಂತೆ ಮಾಡಲು ಪರ್ಯಾಪ್ತವಾದವುಗಳಾಗಿರುವುದರಿಂದ, ಇಂಡಿಯಲ್ ಪಿನಲ್‌ಕೋಡು 124 A ಸೆಕ್ಷನ್ಸಿನ ಪ್ರಕಾರ ತಮ್ಮನ್ನು ಬಂಧಿಸುವದಕ್ಕೆ ವಾರಂಟನ್ನು ಹೊರಡಿಸಿರುತ್ತಾರೆ."

ಎಂದೆನುತ್ತಾ ಸಬ್ ಇನ್ಸುಪೆಕ್ಟರನು ತನ್ನ ಜೇಬಿನಿಂದ ವಾರಂಟನ್ನು ತೆಗೆದು ಮಾಧವನ ಕೈಗೆ ಕೊಟ್ಟನು. ಮಾಧವನು ತನ್ನನ್ನು ಬಂಧಿಸ್ಥನನ್ನಾಗಿ ಮಾಡಲು ಜಿಲ್ಲಾಧಿಕಾರಿಯು ಹೊರಡಿಸಿದ ಆ ಆಜ್ಞಾಪತ್ರವನ್ನು ತನ್ನ ಕಣ್ಣುಗಳನ್ನು ಅಗಲಿಸಿ ನೋಡಿದನು.

'ಅಣ್ಣಾ!' ಎಂದಳು ಸರೋಜಳು. 'ನಮ್ಮನ್ನೆಲ್ಲಾ ತ್ಯಜಿಸಿ ನೀನು ತೆರಳುವೆಯಾ?' ಅವಳ ನೇತ್ರಗಳಲ್ಲಿ ಬಾಷ್ಪಬಿಂದುಗಳು ತುಂಬಿದ್ದವು.

"ಸರೋಜ, ಏಕೆ ಎದೆಗುಂದಿದೆ? ಮನುಷ್ಯನಿಗೆ ಈ ಜಗತ್ತೇ ಒಂದು ದೊಡ್ಡ ಬಂಧನವಾಗಿದೆ ಹಲವು ವಿಧದ ಚಿಂತೆಗಳ ಮತ್ತು ದುಃಖಗಳ ದಾವಾಗ್ನಿಯಲ್ಲಿ ಬೆಂದು ಭಸ್ಮೀಭೂತವಾಗಿ ಹೋಗುತ್ತಿರುವ ಮಾನುಷಾತ್ಮಕ್ಕೆ ತುರಂಗವಾಸವು ಅಷ್ಟೇನೂ ದುಃಖದಾಯಕವಾದುದಲ್ಲ. ಈ ಜೀವನವೆಂಬುದು ಹೂವಿನ ಹಾಸಿಗೆಯಲ್ಲ; ವಿಧಾತನ ಆ ಜಗನ್ನಿಯಂತ್ರಣ ಶಕ್ತಿಯು ಸುಖಿಸುವುದಕ್ಕಾಗಿಯಲ್ಲ ಈ ಬದುಕನ್ನು ನೀಡಿದುದು. ಒಂದು ಆದರ್ಶವನ್ನು ಸಾಧಿಸಲು, ಪೂರ್ಣತೆಯನ್ನು ಹೊಂದಲು ಈ ನರಜನ್ಮವು ನಮಗೆ ಪ್ರಾಪ್ತವಾಗಿದೆ. ಆ ದಾರಿಯಲ್ಲಿ ಸಂಚರಿಸುವಾಗ ಲಭಿಸಬಹುದಾದ ಕ್ಲೇಶಗಳನ್ನು ಧೈರ್ಯದಿಂದ ಮನುಷ್ಯನು ಸಹಿಸುವುದು ಪುರುಷೋಚಿತ ಕರ್ಮವಾಗಿರುತ್ತದೆ. ಸತ್ಯವನ್ನೂ, ಧರ್ಮವನ್ನೂ ಅವಲಂಬಿಸಿ ಜ್ಞಾನದೀಪದ ಸಹಾಯದಿಂದ ಮುಂದೆ ತನ್ನ ಹೆಜ್ಜೆಗಳನ್ನಿಡುತ್ತಿರುವ ವ್ಯಕ್ತಿಗೆ ಪರಾಜಯವೆಲ್ಲಿಯದು? ಜನಸೇವೆಯು ಈಶ್ವರಾರಾಧನೆಯು ಒಂದು ರೂಪಬೇಧವೆಂದು ಅರಿತು, ಆ ಉದ್ಯಮಗಳಲ್ಲಿ ನಾನು ನಿರತನಾದೆನು. ನಾಡಿನ ಏಳಿಗೆಯೇ ನನ್ನ ಅಭ್ಯುದಯಕ್ಕಿರುವ ದಾರಿಯೆಂದು ನೆನೆದು ಕರ್ಮಸಾಧನೆಯಲ್ಲಿ ನಿರತನಾದೆನು; ಆದರೆ ನಮ್ಮನ್ನಾಳುತ್ತಿರುವವರಿಗೆ ಈ ನನ್ನ ಉದ್ಯಮಗಳು ರುಚಿಸುತ್ತಿರಲಿಲ್ಲ. ಅವರ ದೃಷ್ಟಿಯಲ್ಲಿ ನಾನು ಒಬ್ಬ ರಾಜದ್ರೋಹಿಯಂತೆ ಗೋಚರನಾದೆನು. ಜನರ ಮಧ್ಯದಲ್ಲಿ ಗೊಂದಲಗಳನ್ನೆಬ್ಬಿಸುವ ವ್ಯಕ್ತಿಯು ನಾನಾದುದರಿಂದ, ಸೆರೆಮನೆಯಲ್ಲಿ ನನ್ನನ್ನಿಡಲು ಅವರು ನಿರ್ಧರಿಸಿದರು. ಅದಕ್ಕಾಗಿ ನನಗೆ ಭಯವಿಲ್ಲ; ಯಾಕಂದರೆ ಸೆರೆಮನೆಯ ಕರಾಳತೆಯು ನನ್ನನ್ನು ಸ್ಪರ್ಶಿಸಲಾರದು."

"ಆದರೆ ಇದುವರೆಗೆ ಕತ್ತಲೆಯಲ್ಲಿ ಬಿದ್ದಿರುವ ನಮಗೆ ದಾರಿಯನ್ನು ತೋರಿಸಲು ನೀನಿದ್ದೆ. ನೀನು ತೆರಳಿದ ಅನಂತರ ನಮಗೆ ಶಾಂತಿಪಿಯೂಷವನ್ನು ನೀಡುವವರು ಯಾರು? ನಮ್ಮವನೆಂದು ಹೇಳಲು ನೀನಲ್ಲದೆ ಬೇರೆ ಬಂಧುಗಳು ಯಾರಿದ್ದಾರೆ?" ವಿಚಾರಮಗ್ನಳಾದ ಪದ್ಮಳು ಮಾಧವನೊಡನೆ ನುಡಿದಳು

"ಅಕ್ಕಾ, ಎದೆಗುಂದಬೇಡ, ನಾನು ಇದುವರೆಗೆ ನಾಡಿನ ಹಿತವನ್ನು ಚಿಂತಿಸಿ ಪ್ರಯತ್ನಿಸಿದೆನು. ನಿನ್ನಲ್ಲಿ ಬೆಳಗುತ್ತಿರುವ ಕಿಡಿಯನ್ನು ಪ್ರಕಾಶಕ್ಕೆ ತಂದು ನೀನು ಶಾಂತಿಯನ್ನು ಹೊಂದಬೇಕಾಗಿದೆಯೆಂದು ಈ ಮೊದಲು ಎಷ್ಟೋ ಬಾರಿ ನಾನು ನುಡಿದಿದ್ದೇನೆ; ಜೀವನದ ಉದ್ದೇಶವನ್ನು ತಿಳಿದು ಅದರಂತೆ ಪ್ರಯತ್ನಿಸುವುದಾಗಿದೆ ಆತ್ಮಶಾಂತಿಯನ್ನು ಹೊಂದಲಿರುವ ದಾರಿಯೆಂಬುದಾಗಿ ಶಾಂತಿಯನ್ನು ಪ್ರದಾನಮಾಡತಕ್ಕವನು ನಾನಲ್ಲ; ನೀನು ನಿನ್ನಲ್ಲಿರುವ ಬೆಳಕನ್ನು ಕಂಡು ಹಿಡಿದು, ಆ ಮೂಲಕ ಶಾಂತಿಯನ್ನು ಹೊಂದಬೇಕಾಗಿದೆ. ನಾನು ಕಾರಾಗೃಹಕ್ಕೆ ತೆರಳುತ್ತಿರುವೆನೆಂದು ನೀವು ಶೋಕಿಸಬೇಕಾದ ಅವಶ್ಯವಿಲ್ಲ; ಏಕೆಂದರೆ, ಭಾರತವರ್ಷದ ಈಗಲಿನ ಪರಿಸ್ಥಿತಿಯಲ್ಲಿ ತುರಂಗವು ದೇಶಭಕ್ತರು ಸಂಚರಿಸಬೇಕಾಗಿರುವ ಒಂದು ತೀರ್ಥಸ್ಥಳವಾಗಿದೆ. ನಮ್ಮ ನಾಡಿನಲ್ಲಿ ನಾವು ಗೈದ ಸೇವೆಯ ಪರೀಕ್ಷೆಯೇ ಅದಾಗಿದೆ. ಈ

ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾಗಬೇಕು. ಜನತೆಯ ಸೇವೆಯಲ್ಲಿ ಕಾಯಕ್ಲೇಶಗಳನ್ನು ಮರೆತು ನಾವು ತ್ಯಾಗ ಸನ್ನದ್ಧರಾಗಬೇಕಾಗಿದೆ. ಕರ್ತವ್ಯನಿರತನಾದ ನನಗೆ ಸಂಪ್ರಾಪ್ತವಾದ ಈ ತುರಂಗ ಗಮನವನ್ನು ಕುರಿತು ನೀವು ಯಾರೂ ಭಯಪಡಬೇಕಾದುದಿಲ್ಲ, ಕ್ಲೇಶಭರಿತರಾಗಬೇಕಾದುದಿಲ್ಲ"

"ಮಾಧವರಾಯರೆ, ಸಮಯವು ಬಹಳವಾಯಿತು, ತಾವು ಬೇಗನೆ ಹೊರಡಬೇಕು." ಇದುವರೆಗೆ ಮೌನವನ್ನವಲಂಬಿಸಿದ್ದ ಸಬ್ ಇನ್ಸಪೆಕ್ಟರನು ನುಡಿದನು.

"ಹೌದು, ನಿಮ್ಮ ಪ್ರಯತ್ನಕ್ಕೆ ನಾನೇಕೆ ಅಡ್ಡಿಯನ್ನು ಮಾಡಲಿ? ಅಕ್ಕಾ, ಬಾಯಾರಿಕೆಯಾಗುತ್ತದೆ. ತುರಂಗಕ್ಕೆ ಹೊರಟಿರುವ ನನಗೆ ಒಂದು ಗ್ಲಾಸು ಜಲವನ್ನು ನೀಡುವಿಯಾ?" ತನ್ನ ಮೋರೆಯನ್ನು ತಿರುಗಿಸಿಕೊಂಡು ಪದ್ಮಳನ್ನು ಪ್ರಶ್ನಿಸಿದನು. ಅವಳು ಒಂದು ಪಾತ್ರೆಯಲ್ಲಿ ಪಾನೀಯವನ್ನು ತಂದು ಮಾಧವನಿಗೆ ನೀಡಿದಳು. ಅವನು ಆ ಶುದ್ಧೋದಕದಿಂದ ತನ್ನ ಪಿಪಾಸೆಯನ್ನು ಪರಿಹರಿಸಿಕೊಂಡನು.

ಚಾಪೆಯಿಂದ ಏಳುತ್ತಾ ಮಾಧವನು: –"ಅಕ್ಕಾ, ಪದ್ಮಾ, ತಂಗೀ ಸರೋಜ, ನನ್ನ ಈ ತೀರ್ಥಾಟನೆಯನ್ನು ಮುಗಿಸಿಕೊಂಡು ಬರುತ್ತೇನೆ! ಶೋಕವಿಹ್ವಲರಾಗಬೇಡಿರಿ. ಸತ್ಯ ಮತ್ತು ಧರ್ಮದ ಪಥವನ್ನು ಅವಲಂಬಿಸುವವರನ್ನು ಸಂರಕ್ಷಿಸಲು ಆ ಪರಂಜ್ಯೋತಿಯಿದೆ. ನಾಡಿನ ಹಿತವನ್ನು ಚಿಂತಿಸಲು ಪ್ರಯತ್ನಿಸಿರಿ!"

"ಅಣ್ಣಾ!"

"ಸರೋಜ, ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಬರುತ್ತೇನೆ."

"ಮಾಧೂ! ಈ ತೀರ್ಥಾಟನವು ಸುಖಪ್ರದವಾಗಲಿ!"

ಮಾಧವನು ಸಬ್ ಇನ್ಸಪೆಕ್ಟರನೊಡನೆ ಪೋಲಿಸ ಲಾರಿಯನ್ನು ಹತ್ತಿದನು. ಆ ವಾಹನವು ಭಯಂಕರವಾದ ಶಬ್ದವನ್ನು ಮಾಡುತ್ತಾ ತೆರಳಿತು. ಹೆಂಗಸರಿಬ್ಬರು ಆ ವಾಹನವು ಕಣ್ಮರೆಯಾಗುವವರೆಗೆ ಶಿಲಾಪ್ರತಿಮೆಗಳಂತೆ ನಿಂತರು.

ಅಧಿಕಾರಿಗಳು ಮಾಧವನನ್ನು ಫರ್ಸ್ಟ್‌ಕ್ಲಾಸ ಮ್ಯಾಜಿಸ್ಟ್ರೇಟರ ನ್ಯಾಯಶಾಲೆಯಲ್ಲಿ ವಿಚಾರಣೆಗಾಗಿ ನಿಲ್ಲಿಸಿದರು. ಮಾಧವನು ತನ್ನ ನಿರಪರಾಧಿತ್ವವನ್ನು ಸ್ಥಾಪಿಸಲು ಯಾವ ಉದ್ಯಮವನ್ನೂ ಜರುಗಿಸಲಿಲ್ಲ, ನ್ಯಾಯಶಾಲೆಯ ಕಾರ್ಯಕಲಾಪಗಳಲ್ಲಿ ಅವನು ಭಾಗವನ್ನು ವಹಿಸಲೂ ಇಲ್ಲ. ಸರಕಾರದವರ ಪರನ್ಯಾಯವಾದಿಗಳು. ಮಾಧವನು 'ನಮ್ಮ ನಾಡು' ಪತ್ರಿಕೆಯಲ್ಲಿ ಬರೆದಿರುವ ಅಗ್ರಲೇಖನಗಳ ಪ್ರತಿಗಳನ್ನು ನ್ಯಾಯಾಧೀಶರ ಮುಂದಿಟ್ಟು, ಅವುಗಳಲ್ಲಿ ಎಷ್ಟರ ಮಟ್ಟಿಗೆ ರಾಜದ್ರೋಹವು ಬೆರೆತಿದೆ ಎಂಬುದನ್ನು ಪ್ರತ್ಯಕ್ಷಪಡಿಸುತ್ತಾ ತಮ್ಮ ಭಾಷಣವನ್ನು ಪ್ರಾರಂಭಿಸಿದರು. ಇದಲ್ಲದೆ ಪತ್ರಿಕೆಯ ಕಾರ್ಯಾಲಯದಿಂದ ಪೋಲಿಸ ಅಧಿಕಾರಿಗಳಿಗೆ ದೊರೆತ ಮಾಧವನ ಕೈಬರೆಹದ ಹಲವು ಲೇಖನಗಳನ್ನು ನ್ಯಾಯಮಂದಿರದಲ್ಲಿ ಓದಿ, ಈ ಬರವಣಿಗೆಗಳಲ್ಲಿ ಜನರ ಮಧ್ಯದಲ್ಲಿ ಸರಕಾರದವರನ್ನು ಕುರಿತು ವಿದ್ವೇಷವು ಹುಟ್ಟುವಂತೆ ಮಾಡುವ ಸಂಗತಿಗಳಿರುವದನ್ನು ನ್ಯಾಯವಾದಿಗಳು ತೋರಿಸಿದರು. ಅವರು ಮಾಧವನಂಥ

ರಾಜದ್ರೋಹಿಯನ್ನು ಶಿಕ್ಷಿಸದಿದ್ದರೆ, ನಾಡಿನ ಶಾಂತತೆಯು ನಾಶವಾಗಿ, ಗಲಭೆಗಳು ಸಮುದ್ಭೂತವಾಗುವುವು ಎಂಬ ಸಂಗತಿಯನ್ನು ಸೂಚಿಸಿದರು.

ಸರಕಾರೀ ನ್ಯಾಯವಾದಿಗಳ ವ್ಯಾಖ್ಯಾನವು ಮುಗಿದ ಅನಂತರ ನ್ಯಾಯಾಧೀಶರು ಮಾಧವನನ್ನು ಪ್ರಶ್ನಿಸಿದರು. "ನಿಮ್ಮ ಹೇಳಿಕೆ ಏನಾದರೂ ಇದೆಯೆ?" ಮಾಧವನು ನ್ಯಾಯಶಾಲೆಯಲ್ಲಿ ಒಂದು ಹೇಳಿಕೆಯನ್ನು ಕೊಟ್ಟನು.

ನನ್ನ ನಾಡಿನ ಸೇವೆಯನ್ನು ಸತ್ಯ ಮತ್ತು ಅಹಿಂಸೆ ಎಂಬ ಪಥವನ್ನವಲಂಬಿಸಿ ಮಾಡತೊಡಗಿದುದರ ಪರಿಣಾಮವಾಗಿ, ಓರ್ವ ಅಪರಾಧಿಯಾಗಿ ನಾನೀಗ ಇಲ್ಲಿ ನಿಂತಿರುತ್ತೇನೆ. ನನ್ನ ನಾಡಿನ ಸ್ವಾತಂತ್ರ್ಯವನ್ನು ಬಯಸಿದುದು-ನಾಡಿನಲ್ಲಿ ಪಸರಿಸಿರುವ ಬಡತನವನ್ನು ಪರಿಹರಿಸಲು ಉದ್ಯಮಿಸಿದುದು-ನಿಯಮದ ದೃಷ್ಟಿಯಲ್ಲಿ ರಾಜದ್ರೋಹವಾಗಿರುವದಾದರೆ, ನನ್ನ ನಾಡಿನ ಜನರೆಲ್ಲರೂ ರಾಜದ್ರೋಹಿಗಳಾಗಲಿ ಎಂಬುದೇ ನನ್ನ ಹಾರೈಕೆಯು! ಈ ಜಗತ್ತಿನಲ್ಲಿ ಸತ್ಯ ಮತ್ತು ಸ್ವಾತಂತ್ರ್ಯ ಇವುಗಳಿಗಾಗಿ ಹೋರಾಡಿದ ಮಹನೀಯರಿಗೆ ಸಾಮ್ರಾಜ್ಯ ಶಕ್ತಿಗಳು ನೀಡುತ್ತಿರುವ ಉಪಹಾರವು ತುರಂಗವಾಸವಾಗಿದೆ ಎಂಬುದನ್ನು ನಾನು ಬಲ್ಲೆನು; ಆದರೆ ಇನ್ನೊಂದು ಜನಾಂಗದ ಸುಲಿಗೆಯಿಂದ ಜೀವಿಸುತ್ತಿರುವ ಸಾಮ್ರಾಜ್ಯಶಕ್ತಿಗಳು ಶಾಶ್ವತವಾಗಿ ನಿಲ್ಲಲಾರವು. ಒಂದು ಬಾರಿ ವಿಶ್ವದಿತಿಹಾಸದ ಬಳಿಗೆ ನಮ್ಮ ದೃಷ್ಟಿಯನ್ನು ಚಲ್ಲಿದರೆ, ಆ ಸತ್ಯವನ್ನು ನಾವು ತಿಳಿದುಕೊಳ್ಳಬಹುದು. ಹಿಂದಿನ ರೋಮ್ರ್ ಸಾಮ್ರಾಜ್ಯ, ಪ್ರಾಚೀನ ಬೇಬಿಲೋನ ಸಾಮ್ರಾಜ್ಯ, ಖಾಲೀಫರ ಇಸ್ಲಾಂ ಸಮ್ರಾಜ್ಯ ಇವುಗಳೆಲ್ಲವೂ ಚೂರ್ಣೀಕೃತವಾಗಿ ಹೋದುವು. ಆ ನಿಯಮವನ್ನು ಇಂದಿನ ಸಾಮ್ರಾಜ್ಯ ಶಕ್ತಿಗಳೂ ಅನುಭವಿಸಬೇಕಾಗಿ ಬರಬಹುದು. ಇಂದಿನ ಆಳರಸರು ನನ್ನನ್ನು ಬಂಧಿಸಿ ತುರಂಗದಲ್ಲಿಡಬಹುದು, ಆದರೆ ಜನತೆಯ ಮಧ್ಯದಲ್ಲಿ ಬೆಳೆದು ಬರುತ್ತಿರುವ ಸ್ವಾತಂತ್ರ್ಯದಾಹದ ಬೆಂಕಿಯನ್ನು ನೊಂದಿಸಲು ಸಾಧ್ಯವಿಲ್ಲ.

ನ್ಯಾಯಾಧೀಶರು ತೀರ್ಪನ್ನು ಬರೆದರು. ವಾಚಕರ ಅವಗಾಹನೆಗಾಗಿ ಅದರ ಪ್ರಧಾನ ಅಂಶವನ್ನು ಕೆಳಗೆ ಕೊಡುತ್ತೇನೆ:

ಅಪರಾಧಿಯು ನಾಡಿನ ಹಿತವನ್ನು ಚಿಂತಿಸಿ ಈ ರೀತಿ ರಾಜದ್ರೋಹಕರವಾದ ಉದ್ಯಮಗಳಲ್ಲಿ ತಾನು ನಿರತನಾದೆನೆಂದು ನುಡಿದಿದ್ದಾನೆ, ಆದರೆ ನಾಡಿನ ದುರವಸ್ಥೆಯನ್ನು ಹೋಗಲಾಡಿಸಲು ನಿಯಮ ಪರಿಧಿಯನ್ನು ಪರಿತ್ಯಜಿಸಿ, ಶಾಸನವಿರುದ್ಧವಾದ ರೀತಿಯಲ್ಲಿ ಪ್ರಯತ್ನಿಸುವದು ಅತ್ಯಂತ ಘೋರವಾದ ಒಂದು ಅಪರಾಧವಾಗಿದೆ. ಜನರು ಈ ರೀತಿಯ ಭಾವನೆಗಳನ್ನು ಪರಿತ್ಯಜಿಸಿ ಶಾಸನಸಮ್ಮತಮಾರ್ಗವನ್ನು ಕೈಗೊಳ್ಳದಿದ್ದರೆ, ಪರಿಣಾಮವಾಗಿ ಹಲವು ಕೆಡಕುಗಳು ಸಂಭವಿಸುವುದರಲ್ಲಿ ಸಂಶಯವಿಲ್ಲ. ಆದುದರಿಂದ ನಾನು ಅಪರಾಧಿಗೆ ಈ ಮೂಲಕ ಇ. ಪಿ. ೧೨೪ A-ಸೆಕ್ಷನ್ನಿನ ಪ್ರಕಾರ ಎರಡು ವರ್ಷಗಳ ತುರಂಗವಾಸದಂಡನೆಯನ್ನು ವಿಧಿಸಿರುತ್ತೇನೆ.

ಈ ತೀರ್ಪನ್ನು ನ್ಯಾಯಾಧೀಶರು ಓದಿ ಹೇಳುವಾಗ ಮಾಧವನ ಮುಖದಲ್ಲಿ

ಯಾವ ಭಾವ ವ್ಯತ್ಯಾಸವೂ ಉದಯಿಸಲಿಲ್ಲ. ಒಂದು ಮಂದಸ್ಮಿತದೊಡನೆ ಅದನ್ನು ಅವನು ಆಶ್ರಾವಿಸಿದನು. ಪೋಲಿಸ ಅಧಿಕಾರಿಗಳು ಒಡನೆಯೇ ಅವನನ್ನು ಒಂದು ಮೋಟರು ಲೋರಿಯಲ್ಲಿ ಸೆರೆಮನೆಗೆ ಒಯ್ದರು. ಮಾಧವನು ಪೋಲಿಸರೊಡನೆ ನ್ಯಾಯಮಂದಿರದಿಂದ ಹೊರಬೀಳುತ್ತಿರುವಾಗ ಕೆಳಗಿನ ಪದ್ಯವು ಅವನ ತುಟಿಗಳಿಂದ ಹೊರಬಿದ್ದಿತು.

ಓ ಜನನಿ! ನಾ ನೀಡುವೆನಿಂದು
ನಿನ್ನಯಾ ಚರಣಗಳಲಿ
ಬಲಿಯಾಗಿ ಈ ದೇಹವನು
ಬಿಡುಗಡೆಯ ಕಾಳಗದಿ!
ಬಾಳಿನಾ ಹೂವನ್ನು ಅರ್ಪಿಸುವೆ;
ನೀ ಬಾಳಲ್ ಅಳಿವವರು
ಯಾರು ನಿನ್ನಯ ಬಿಡುಗಡೆಗೆ
ಹೊರಟಿಹೆವು ನಾವಿಂದು!

---

## ೧೯ ಗೆಳೆಯರಿಬ್ಬರ ಸಂಗಮ.

ಸ್ವಾತಂತ್ರ್ಯ ಶೂನ್ಯವಾದ ತುರಂಗವಾಸವನ್ನು ಮಾಧವನು ಅನುಭವಿಸಬೇಕಾಗಿ ಬಂದಿತು. ವಿದೇಶೀಯರ ಬಂಧನದಲ್ಲಿ ಬಳಲುತ್ತಿರುವ ಭಾರತ ವರ್ಷವೇ ಒಂದು ತುರಂಗವಾಗಿ ಪರಿಣಮಿಸಿರುವಾಗ, ವಿಶಾಲವಾದ ಹೊರಗಿನ ಕಾರಾಗೃಹಕ್ಕೂ ತಾನು ವಾಸಿಸುತ್ತಿರುವ ತುರಂಗಕ್ಕೂ ಹೆಚ್ಚಿನ ವ್ಯತ್ಯಾಸವು ಮಾಧವನಿಗೆ ಗೋಚರವಾಗಲಿಲ್ಲ. ಸಾಧಾರಣ ಮನುಷ್ಯನಿಗೆ ತುರಂಗವಾಸವು ಅತ್ಯಂತ ಕ್ಲೇಶದಾಯಕವಾಗಿ ತೋರಿದರೆ, ಒಬ್ಬ ಸಾಧಕನಿಗೆ ಅದು ಶಾಂತಿಯನ್ನು ನೀಡುತ್ತಿರುವ ಒಂದು ವಸತಿಯಾಗಿದೆ. ಏಕೆಂದರೆ, ಅವನು ತನ್ನಲ್ಲಿಯೇ ಬೆಳಕನ್ನು ಕಾಣುತ್ತಿರುವದರಿಂದ, ತುರಂಗದಲ್ಲಿ ವ್ಯಾಪಿಸಿರುವ ಕರಾಳ ರೂಪದ ಯಾಮಿನಿಯು ಅವನನ್ನು ಸ್ಪರ್ಶಿಸಲಾರಳು. ತುರಂಗದಲ್ಲಿ ಅವನು ವಾಸಿಸುತ್ತಾ ಜ್ಞಾನಸಂಪಾದನೆಯಲ್ಲಿ ನಿರತನಾಗುತ್ತಾನೆ.

ಮಾಧವನಿಗೆ ತುರಂಗವಾಸವು ಕ್ಲೇಶದಾಯಕವಾಗಿರಲಿಲ್ಲ. ಅವನು ಅನೇಕ ವರ್ಷಗಳ ಅವಿಶ್ರಾಂತ ಪರಿಶ್ರಮಗಳಿಂದ ಬಳಲಿದ್ದನು. ತುರಂಗವಾಸವು ಅವನಿಗೆ ಲಭಿಸಿದ ವಿಶ್ರಾಂತಿಸಮಯವಾಗಿದ್ದಿತು. ಅಲ್ಲಿ ಅವನು ಏಕಾಂತವಾಗಿ ಶಾಂತಿಯ ರುಚಿಯನ್ನು ಆಸ್ವಾದಿಸಿದನು. ಕೋಲಾಹಲಗಳಿಂದ ನಿಬಿಡವಾಗಿ ಕುಲಾಲಚಕ್ರದಂತೆ ಗರಗರನೆ ತಿರುಗುತ್ತಿರುವ ಜಗತ್ತಿನಿಂದ ದೂರವಾಗಿರುವ ಕಾರಾಗೃಹದಲ್ಲಿ ಅವನು ವಿಶ್ರಾಮವನ್ನು ಪಡೆದನು. ಹಿಂದಿನ ಕಾಲದ ಜನರು ತಪಸ್ಸನ್ನು ಆಚರಿಸಲು ವಿಪಿ

ನಾಂತರಗಳಿಗೆ ತೆರಳುತ್ತಿದ್ದರೆ, ಈ ಕಾಲದಲ್ಲಿ ಭಾರತೀಯರ ತಪೋಭೂಮಿಯು ತುರಂಗವಾಗಿದೆ. ನಾಡದೇವಿಯ ಬಿಡುಗಡೆಗಾಗಿ ಹೋರಾಡುತ್ತಿರುವ ಭಾರತೀಯನು ತನ್ನಲ್ಲಿ ಕಂದಿರುವ ಚೈತನ್ಯವನ್ನೂ ದೃಢ ಮನಸ್ಕತೆಯನ್ನೂ ಮರಳಿ ಪಡೆಯುವುದಕ್ಕಾವಶ್ಯವಿರುವ ತಪಸ್ಸನ್ನಾಚರಿಸಲು ತುರಂಗಕ್ಕೆ ತೆರಳುತ್ತಾನೆ; ಅಲ್ಲಿ ಅವುಗಳನ್ನು ಅವನು ಮರಳಿ ಪಡೆಯುತ್ತಾನೆ. ಕತ್ತಲೆಯಿಂದ ನಿಬಿಡವಾದ ಆ ಸೆರೆಮನೆಯಲ್ಲಿ ಕುಳಿತು ತನ್ನ ನಾಡಿನ ಬಿಡುಗಡೆಗೆ ಇರುವ ದಾರಿಯನ್ನು ಅವನು ಕಂಡು ಹಿಡಿಯುತ್ತಾನೆ.

ಕಾರಾಗೃಹ—ಇದು ನ್ಯಾಯದ ದಾರಿಯನ್ನು ತಪ್ಪಿದ ದುಷ್ಟರಿಗೆ, ಘಾತುಕರಿಗೆ ಯೋಗ್ಯವಾದ ಒಂದು ಶಿಕ್ಷಣವನ್ನು ನೀಡಲಿರುವ ಆಲಯವಾಗಿದೆ. ಭಯಂಕರವಾದ ಕೃತ್ಯಗಳಿಂದ ತಮ್ಮ ಆತ್ಮಗಳನ್ನು ಮಲಿನಪಡಿಸಿಕೊಂಡ ನರಪ್ರಾಣಿಗಳ ನಿವಾಸಾಲಯವು ಅದಾಗಿದೆ. ದುರ್ವಿಚಾರಗಳ ವಿಷವಾಯುವು ಅಲ್ಲಿ ಹರಡಿದೆ! ಭೂಮಿಯಲ್ಲಿರುವ ನರಕವೆಂದರೆ ಅದಾಗಿದೆ! ಆಯಾ ಕಾಲದಲ್ಲಿ ಜಗತ್ತಿಗೆ ಬೆಳಕನ್ನು ನೀಡಿದ ಮಹಾಪುರುಷರಲ್ಲಿ ಅನೇಕರು ತಮ್ಮ ಬಾಳುಗಳ ಕೆಲವು ಭಾಗಗಳನ್ನು ತುರಂಗದಲ್ಲಿ ವ್ಯಯಗೊಳಿಸಿರುತ್ತಾರೆ. ಈ ಚಿತ್ರಗಳನ್ನು ನೋಡುವಾಗ ಮಲಿನತೆಯಿಂದ ದೂರವಾದ ಪವಿತ್ರಾತ್ಮನಿಗೆ ನರಕವು ಸಹ ಸ್ವರ್ಗವಾಗಿ ಪರಿಣಮಿಸುತ್ತದೆ ಎಂಬುದು ನಮ್ಮ ನೆನಪಿಗೆ ಬರುತ್ತದೆ. ಗೀತಾ ಬೋಧಕನೂ ಪೌರಾಣಿಕಕಾಲದ ಆಚಾರ್ಯರಲ್ಲಿ ಅಗ್ರಗಣ್ಯನೂ ಆದ ಶ್ರೀಕೃಷ್ಣನು ಜನಿಸಿದುದು ತುರಂಗದ ನಾಲ್ಕು ಗೋಡೆಗಳ ಮಧ್ಯದಲ್ಲಾಗಿದೆ. ಈಸಾಯಿಮತಸ್ಥಾಪಕನಾದ ಮಹಾತ್ಮಾ ಏಸುವಾದರೂ ತುರಂಗವಾಸಕ್ಕೊಳಗಾಗಿ ಮರಣ ದಂಡನೆಯನ್ನು ಅನುಭವಿಸಿದನು ಶೀಕಮತಸ್ಥಾಪಕನಾದ ಗುರು ನಾನಕನು ಸಹಾ ತನ್ನ ಜೀವನದಲ್ಲಿ ಕೆಲವು ದಿನಗಳನ್ನು ಕಾರಾಗೃಹದಲ್ಲಿ ವ್ಯಯಗೊಳಿಸಿದನು. ಅಭಿನವಭಾರತದ ಆತ್ಮದಂತಿರುವ ಮಹಾತ್ಮಾಜಿಯವರೂ, 'ಸ್ವಾತಂತ್ರ್ಯವು ನನ್ನ ಜನ್ಮಸಿದ್ಧವಾದ ಹಕ್ಕು!' ಎಂಬ ಮಂತ್ರವನ್ನು ಜನತೆಗೆ ಉಪದೇಶಿಸಿದ ಲೋಕಮಾನ್ಯರೂ ಕಾರಾಗೃಹದ ನಾಲ್ಕು ಗೋಡೆಗಳ ಮಧ್ಯದಲ್ಲಿ ತಮ್ಮ ಜೀವನದ ಕೆಲವು ಕಾಲವನ್ನು ವಿನಿಯೋಗಿಸಿದರು. ಈ ಮಹಾ ಪುರುಷರೆಲ್ಲರೂ ತಮ್ಮ ಆದರ್ಶ ಸಾಧನೆಗಾಗಿ ಬಂದೊದಗಿದ ಅನೇಕ ವಿಪತ್ತುಗಳನ್ನು ಅನುಭವಿಸಿದರು. ನೀಚರ ಮತ್ತು ದುಷ್ಟರ ನಿವಾಸಭೂಮಿಯಾದ ತುರಂಗವು ಈ ಪುಣ್ಯಪುರುಷರ ಚರಣಸ್ಪರ್ಶನದಿಂದ ಪಾವನತೆಯನ್ನು ಹೊಂದಿತು. ಆತ್ಮಚೈತನ್ಯವನ್ನು ಸಂಪಾದಿಸಿದ ಪುನೀತನು ಎಲ್ಲಿ ಜೀವಿಸಿದರೇನು? ಮಲಿನತೆಯನ್ನು ನೀಗಿದ ಪುಣ್ಯಪುರುಷನು ನರಕಕ್ಕೆ ತೆರಳಿದರೆ, ಆ ನರಕವು ಸ್ವರ್ಗವಾಗಿ ಪರಿಣಮಿಸುವದು.

ತುರಂಗದ ನಾಲ್ಕು ಗೋಡೆಗಳ ಮಧ್ಯದಲ್ಲಿ ಏಕಾಂಗಿಯಾಗಿ ಮಾಧವನು ಆ ದಿನಗಳನ್ನು ಕಳೆಯಬೇಕಾಗಿಬಂದಿತು. ಅದಕ್ಕಾಗಿ ಅವನಿಗೆ ಬೇಸರವಿಲ್ಲ. ಆ ದಿವ್ಯ ಚೈತನ್ಯದ ಬೆಳಕು ಸರ್ವತ್ರ ಹರಡಿರುವಾಗ, ತುರಂಗದಲ್ಲಿ ಸಹ ಆ ಪ್ರಭೆಯು ಗೋ-

ಚರವಾಗದಿರುವದೇ? ತನ್ನ ನಾಡಿನ ಹಿತವನ್ನು ಚಿಂತಿಸಿ ನಿಷ್ಕಾಮಕರ್ಮದಲ್ಲಿ ನಿರತನಾದ ಒಬ್ಬ ಸಾಧಕನಿಗೆ ತುರಂಗದ ಜೀವನವು ತನ್ನ ಆದರ್ಶಸಾಧನೆಗಿರುವ ಉದ್ಯಮಗಳಲ್ಲಿ ಗೋಚರವಾಗುತ್ತದೆ. ತುರಂಗದ ನಿಯಮಗಳನ್ನು ಮಾಧವನು ಅಕ್ಷರಶಃ ಪಾಲಿಸಿದನು. ಅಲ್ಲಿ ಅವನು ಹೀನವೆಂದೂ ನಿಸ್ಸಾರವೆಂದೂ ತೋರುತ್ತಿರುವ ಕೆಲಸಗಳನ್ನು ಕೂಡ ಮಾಡಿದನು. ಕಾಯಿಪಲ್ಯಗಳನ್ನು ಬೆಳೆಯುವದು ಮೊದಲಾದ ದೇಹದಂಡನದ ಕೆಲಸಗಳನ್ನು ಅವನು ಸಂತೋಷದಿಂದ ನೆರವೇರಿಸಿದನು. ತುರಂಗದಲ್ಲಿ ತನಗೆ ಲಭಿಸಿದ ವಿರಾಮ ವೇಳೆಯನ್ನು ಅವನು ಜ್ಞಾನಾರ್ಜನೆಗಾಗಿ ವಿನಿಯೋಗಿಸಿದನು. ಭಯಂಕರವಾದ ಅಪರಾಧಗಳನ್ನು ಗೈದುದಕ್ಕಾಗಿ ದಂಡನೆಯನ್ನು ಅನುಭವಿಸುತ್ತಿರುವ ಇತರ ತುರಂಗವಾಸಿಗಳ ಬಾಳುವೆಗಳಲ್ಲಿ ಬೆಳಕನ್ನು ತೋರಿಸಲು ಮಾಧವನು ಪ್ರಯತ್ನಿಸಿದನು. ಅವನು ಪ್ರದರ್ಶಿಸುತ್ತಲಿರುವ ವಿನಯ ಮತ್ತು ಸಹಾನುಭೂತಿ ಇವುಗಳನ್ನವಲೋಕಿಸಿ, ಇತರ ಸೆರೆಯಾಳುಗಳು ಮಾಧವನಿಗೆ ಸ್ನೇಹವನ್ನು ತೋರಿಸದೆ ಇರಲಿಲ್ಲ. ಈ ಭುವನದಲ್ಲಿ ಸ್ನೇಹದ ಮೂಲಕ ಎಲ್ಲರನ್ನೂ ಆಕರ್ಷಿಸಬಹುದೆಂಬುದಕ್ಕೆ ಇದೊಂದು ಉತ್ತಮವಾದ ಉದಾಹರಣೆಯಾಗಿದೆ. ತಾನು ಗೈದ ಪಾಪಗಳ ಮೂಲಕ ಮಾನುಷ ಹೃದಯವು ಎಷ್ಟು ಕರಾಲ ವರ್ಣವನ್ನು ಹೊಂದಿದ್ದರೂ ಪ್ರೇಮದ ಮಧುರಾಲಾಪವನ್ನು .ಆಶ್ರಾವಿಸುವಾಗ ಅದು ಮೃದುತ್ವವನ್ನು ಹೊಂದುತ್ತದೆ. ನರದೇಹದಲ್ಲಿ ಅಡಗಿರುವ ಆತ್ಮನು ತನ್ನ ಪ್ರತಿಬಿಂಬಗಳನ್ನು ಇತರ ಜೀವಿಗಳಲ್ಲಿ ದರ್ಶಿಸಲು ಬಯಸುತ್ತಾನೆ.

ಮಾಧವನು ಸ್ವಲ್ಪ ಸಮಯದಲ್ಲಿಯೇ ತುರಂಗವಾಸಿಗಳ ಸ್ನೇಹಾದರಗಳನ್ನು ಸಂಪಾದಿಸಿದನು. ಯಾರನ್ನೂ ವಶೀಕರಿಸುವ ಸಾಮರ್ಥ್ಯವು ಅವನಲ್ಲಿದೆ. ಅವನ ಸ್ನೇಹಪುರಸ್ಸರವಾದ ನುಡಿಗಳು ಮನಸ್ಸಿಗೆ ಶಾಂತಿಯನ್ನು ನೀಡತಕ್ಕವುಗಳಾಗಿರುತ್ತವೆ. ಅವನು ತುರಂಗವಾಸಿಗಳ ಆದರಕ್ಕೆ ಪಾತ್ರೀಭವಿಸಿದನು. ಅವನು ಕತ್ತಲೆಯಲ್ಲಿ ಕೊಳೆಯುತ್ತಿರುವ ಆ ಬಡಪಾಯಿಗಳ ಮಾರ್ಗದರ್ಶಕನಾದನು. ತನ್ನ ಸದುಪದೇಶಗಳ ಮೂಲಕ ನಿದ್ರೆಯಲ್ಲಿ ಬಿದ್ದಿರುವ ಅವರ ಆತ್ಮಗಳನ್ನು ಮಾಧವನು ಎಚ್ಚರಗೊಳಿಸಿದನು. ವಿದ್ಯೆಯಿಲ್ಲದೆ ನರಳುತ್ತಿರುವ ಆ ಬಡಪಾಯಿಗಳಿಗೆ ಜ್ಞಾನದಾನವನ್ನು ಮಾಡಿ ಸುಪ್ರಬುದ್ಧರನ್ನಾಗಿ ಮಾಡಲು ಅವನು ಉದ್ಯಮಿಸಿದನು. ಕಳವು, ಮೋಸ ಎಂಬಿತ್ಯಾದಿ ಅಪರಾಧಗಳಿಗಾಗಿ ದಂಡನೆಯನ್ನು ಹೊಂದಿದ್ದ ತುರಂಗವಾಸಿಗಳ ಜೀವನವು ಶೋಚನೀಯವಾದುದಾಗಿದೆ. ತುರಂಗದ ಹೊರಗಾಗಲೀ ಒಳಗಾಗಲೀ ಈ ಬಡಪಾಯಿಗಳಿಗೆ ಸಹಾನುಭೂತಿಯನ್ನು ಪ್ರದರ್ಶಿಸುವವರಿಲ್ಲ. ಈ ಪತಿತರನ್ನೂ ಸಶಕ್ತರನ್ನಾಗಿ ಮಾಡುವದಕ್ಕೆ ಮಾಧವನು ಪರಿಶ್ರಮಿಸಿದನು. ಅವನ ಉದ್ಯಮಗಳಾದರೂ ಫಲಶೂನ್ಯವಾಗಲಿಲ್ಲ. ಅವನ ಸದುಪದೇಶಗಳಿಂದ ಇದುವರೆಗೆ ಮಾಲಿನ್ಯ ನಿಬಿಡವಾದ ಬದುಕುಗಳಲ್ಲಿ ಹೊಸದೊಂದು ಪ್ರಕಾಶವು ಸ್ಫುರಿಸಲಾರಂಭಿಸಿತು. ಇದುವರೆಗೆ ಕರ್ಕಶವೂ ಪರಹಿಂಸಾ ನಿರತವೂ ಆಗಿದ್ದ ಅವರ ಮನಸ್ಸುಗಳು ಸ್ವಂತ ಅಭ್ಯು

ನ್ನತೆಯನ್ನು ಕುರಿತು ಚಿಂತಿಸಲಾರಂಭಿಸಿದುವು.

ದಿನಗಳು ಗತಿಸಿದುವು. ಮಾಧವನು ಸ್ಥಿರೋತ್ಸಾಹಗಳಿಂದ ತನ್ನ ಸಹ ತುರಂಗ ಜೀವಿಗಳ ಅಭ್ಯುದಯಕ್ಕಾಗಿ ಉದ್ಯಮಿಸುತ್ತಲಿದ್ದನು. ಈ ವೇಳೆಯಲ್ಲಿ ಒಬ್ಬ ಹೊಸ ಬಂದಿಯು ಕಾರಾಗೃಹದೊಳಗೆ ಪ್ರವೇಶಿಸಿದನು. ಅವನೊಬ್ಬ ತರುಣನು. ಪ್ರಕಾಶ ಮಾನವಾದ ಅವನ ಕಣ್ಣುಗಳು ಅವನು ಹೀನಕೃತ್ಯಗಳಿಗಾಗಿ ದಂಡಿತನಾದವನಲ್ಲ ವೆಂಬುದನ್ನು ಸೂಚಿಸುತ್ತಲಿದ್ದವು. ಅವನ ಪ್ರಸನ್ನತೆ ಮತ್ತು ವಿನಯ ಇವುಗಳು ಯಾರನ್ನೂ ಆಕರ್ಷಿಸದಿರಲಾರವು.

ಹೊಸ ಸೆರೆಯಾಳು ತುರಂಗದೊಳಗೆ ಪ್ರವೇಶಿಸಿದನು. ಮಾಧವನಿಗೆ ಹೊಸಬ ನನ್ನು ತಾನು ಎಲ್ಲಿಯೋ ನೋಡಿದುದರ ನೆನಪು ಬಂದಿತು; ಆದರೆ ಎಲ್ಲಿ ಎಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ. ಯಾವಾಗಲೂ ಉದ್ಯಮಶೀಲನಾದ ಅವನಿಗೆ ಹತ್ತೆಂಟು ವರ್ಷಗಳ ಹಿಂದಿನ ನೆನಪು ಹೇಗೆ ಉಳಿಯಬೇಕು ?

ಮಾಧವನು ಹೊಸಬನ ಮೈತ್ರಿಯನ್ನು ಸಂಪಾದಿಸುವದಕ್ಕಾಗಿ ಅವನ ಬಳಿಗೆ ಗಮಿಸಿದನು. ಮಾಧವನು 'ತಮ್ಮ ಊರು ಯಾವುದು?' ಎಂದು ಪ್ರಶ್ನಿಸಿದನು. ಹೊಸಬನು ಮಾಧವನ ವದನಮಂಡಲವನ್ನು ಕೆಲವು ನಿಮಿಷಗಳವರೆಗೆ ನಿರೀಕ್ಷಿಸಿದ ಅನಂತರ ಹೇಳಿದನು: 'ಶಿವಪುರ' ಎಂಬುದಾಗಿ.

"ತಮ್ಮನ್ನು ಎಲ್ಲಿಯೋ ನೋಡಿದುದರ ನೆನಪಿರುತ್ತದೆ; ತಮ್ಮ ಹೆಸರೇನು?"

"ಸುಧಾಂಶು!"

"ತಾವು ಯಾವ ಅಪರಾಧದ ಬಗ್ಗೆ ದಂಡಿತರಾದಿರಿ?"

"ರಾಜದ್ರೋಹ! ನನ್ನ ನಾಡಿನ ಅಭ್ಯುದಯಕ್ಕಾಗಿ ಪ್ರಯತ್ನಿಸಿದುದು."

ಈ ಕಂಠಸ್ವರವು ತನಗೆ ಚಿರಪರಿಚಿತವಾದುದಾಗಿದೆ ಎಂಬುದು ಮಾಧವನಿಗೆ ಹೊಳೆದಿತು. ಆ ಮಂಜುಳ ಸ್ವರವನ್ನು ಅದೆಷ್ಟೋ ಬಾರಿ ತಾನು ಆಶ್ರಾವಿಸಿರುವೆನೆಂಬು ದಾಗಿ ಅವನ ಬುದ್ಧಿಯು ಹೇಳತೊಡಗಿತು; ಆದರೆ ಎಲ್ಲಿ, ಯಾವಾಗ ಎಂಬುದು ಮಾತ್ರ ನೆನಪಾಗದು.

ಸ್ವಾಭಾವಿಕವಾದ ತನ್ನ ಮಂದಹಾಸವೊಂದನ್ನು ಹೊರಸೂಸಿ ಸುಧಾಂಶುವು ಪ್ರಶ್ನಿಸಿದನು: "ತಾವು ಯಾರು?"

"ಮಾಧವನೆಂದು ನನ್ನನ್ನು ಕರೆಯುತ್ತಾರೆ. ತಮ್ಮಂತೆಯೇ ರಾಜದ್ರೋಹದ ಅಪರಾಧಕ್ಕೆ ದಂಡಿತನಾದವನು ನಾನು."

ಈ ನುಡಿಗಳನ್ನು ಶ್ರಾವಿಸುತ್ತಲೆ ಸುಧಾಂಶುವಿನ ಮೋರೆಯು ತುಸ ಕೆಂಬಣ್ಣ ವನ್ನು ತಾಳಿತು. ಮಾತಾಡಲು ಶಕ್ತನಾಗದೆ, ಒಂದು ಶಿಲಾಪ್ರತಿಮೆಯಂತೆ ಕೆಲವು ನಿಮಿಷಗಳವರೆಗೆ ಅವನು ನಿಂತನು.

"ತಮ್ಮ ಊರು?"

"ರಾಮನಗರ!"

ಬೇರೆ ನುಡಿಗಳು ಹೊರಬೀಳಲಿಲ್ಲ. ಇಬ್ಬರೂ ಪರಸ್ಪರ ಮೊಗ ನೋಡುತ್ತ ನಿಂತರು. ಸುಧಾಂಶುವಿನ ನೇತ್ರಗಳಿಂದ ಎರಡು ಬಾಷ್ಪಬಿಂದುಗಳು ಹೊರಸೂಸಿದುವು. ಮಾಧವನಿಗೆ ತನ್ನ ಮುಂದೆ ನಿಂತಿರುವದು ಯಾರೆಂಬುದು ತಿಳಿದಿತು. ಸುಧಾಂಶುವನ್ನು ತಬ್ಬಿಕೊಳ್ಳಲು ತನ್ನ ಎರಡು ಬಾಹುಗಳನ್ನೂ ಅವನು ಚಾಚಿದನು; ಆದರೆ ಸುಧಾಂಶುವು ಆ ಬಂಧನಕ್ಕೆ ಸಿಗಲಿಲ್ಲ. ಅವನು ಹಿಂದಕ್ಕೆ ಸರಿದನು; ಮಾಧವನು ಕಂಪಿಸುತ್ತ ನುಡಿದನು ರಂಗಾ!' ಎಂಬುದಾಗಿ.

"ರಂಗನಲ್ಲ ನಾನು! ನನ್ನ ಹೆಸರು ಸುಧಾಂಶುವೆಂದಾಗಿದೆ!"

"ರಂಗಾ! ಹನ್ನೆರಡು ಸಂವತ್ಸರಗಳು ಗತಿಸಿದರೂ, ನಿನ್ನನ್ನು ನಾನು ಮರೆಯುವೆನೆಂದು ಬಗೆದಿರುವೆಯಾ? ಗೆಳೆಯ, ಈ ಆತ್ಮಬಂಧುವಿಗೆ ನಿನ್ನ ವೇಷವನ್ನು ತೋರಿಸದಿರುವದೇಕೆ?"

"ರಂಗನಲ್ಲ, ಅವನು ಮೃತನಾಗಿ ಕಾಲವೆಷ್ಟೋ ಕಳೆದು ಹೋಗಿದೆ!"

"ನನ್ನ ರಂಗನನ್ನು-ಆ ನನ್ನ ಬಾಲ್ಯದ ಗೆಳೆಯನನ್ನು ನೋಡಲು ಸಾಧ್ಯವಿಲ್ಲವೇ? ಯಾವನೊಡನೆ ನಾಡದೇವಿಯ ಸೇವೆಯ ಮೊದಲಿನ ಪಾಠಗಳನ್ನು ಕಲಿತೆನೋ, ಯಾವನು ನನ್ನನ್ನು ರಾಷ್ಟ್ರಸೇವೆಯ ದಾರಿಗೆ ಹಚ್ಚಿದನೋ, ಆ ನನ್ನ ಆತ್ಮಬಂಧುವನ್ನು, ನನ್ನ ಆಚಾರ್ಯನನ್ನು ದರ್ಶಿಸಲು ಸಾಧ್ಯವಾಗದೆ?" ಶೋಕಸ್ವರದಲ್ಲಿ ಮಾಧವನು ನುಡಿದನು. ಸುಧಾಂಶುವಿನ ವಚನಗಳು ದೃಢಮನಸ್ಕನಾದ ಮಾಧವನ ಎದೆಯನ್ನು ನಡುಗುವಂತೆ ಮಾಡಿದುವು.

"ನಿಮ್ಮ ರಂಗನು ಈಗ ಇಲ್ಲ; ಅವನು ತನ್ನ ಆ ಹಳೆಯ ಜೀರ್ಣಿಸಿದ ಬಾಳನ್ನು ಪರಿತ್ಯಜಿಸಿ, ಹೊಸ ಜನ್ಮವನ್ನು ಪಡೆದಿರುತ್ತಾನೆ. ಈರ್ಷಾಗ್ನಿ ಮತ್ತು ಕಾಪಟ್ಯಗಳಿಂದ ನಿಬಿಡವಾದ ಪ್ರದೇಶವನ್ನು ಪರಿತ್ಯಜಿಸಿ, ಶಾಂತತೆಯಿಂದಲೂ, ಪ್ರೇಮದಿಂದಲೂ ಪರಿಪೂರ್ಣವಾದ ಒಂದು ವಲಯದಲ್ಲಿ ಪ್ರವೇಶಿಸಿರುತ್ತಾನೆ."

"ನಿಜವಾಗಿಯೂ ಹೇಳುವುದಾದರೆ ನೀನು,-ಅಲ್ಲ ನೀವು ನನ್ನ ನಚ್ಚಿನ ರಂಗನಾಥನೇ ಆಗಿರುತ್ತೀರಿ!"

"ಮಾಧವರಾಯರೆ! ನನ್ನ ದೇಹವು ಆ ಹಳೆಯ ರಂಗನ ದೇಹವಾಗಿರುತ್ತದೆ ಎಂಬುದು ನಿಜವು; ಆದರೆ ನಾನೀಗ ಹೊಸ ಜೀವನವನ್ನು ಪಡೆದಿರುತ್ತೇನೆ. ವಂಚನೆ-ಕೃತ್ರಿಮಗಳಿಂದ ನಿಬಿಡವಾದ ಸಂಸಾರಕ್ಕೆ ಹೇಸಿ, ಶಾಂತಿಯನ್ನು ಪಡೆಯುವುದಕ್ಕಾಗಿ ತಪಸ್ಸನ್ನಾಚರಿಸತಕ್ಕ ಸಾಧಕನು ನಾನಾಗಿರುತ್ತೇನೆ. ಮಿತ್ರದ್ರೋಹದಿಂದ ಮನನೊಂದ ಆ ರಂಗನಾಥನೇ ನಾನು!"

"ರಂಗಾ, ಮಿತ್ರದ್ರೋಹವನ್ನು ಬಗೆದವರು ಯಾರು?

"ಎಲ್ಲವನ್ನೂ ಬಲ್ಲ ನೀನು, ಏಕೆ ಏನನ್ನೂ ತಿಳಿಯದವರಂತೆ ಪ್ರಶ್ನಿಸುತ್ತಿರುವೆ? ಈ ಕಪಟಜಾಲದಿಂದ ಪಾರಾಗಲು ಬಯಸಿ ನಾನು ಬಹು ದೂರ ತೆರಳಿದೆನು. ನಾನು ಉದ್ದೇಶಿಸಿದ ಧ್ಯೇಯಗಳನ್ನು ಸಾಧಿಸುವುದಕ್ಕಾಗಿ ಒಬ್ಬ ಗುರುವರ್ಯನ ಚರಣಗಳ

ಬಳಿಯಲ್ಲಿ ಬೇಕಾದ ಪಾಠಗಳನ್ನು ಕಲಿತೆನು; ಆದರೆ ಈ ಕಾರಾಗಾರದಲ್ಲಿ ಸಹಾ ಆ ವಂಚನೆಯು ವ್ಯಾಪಿಸಿದೆ ಎಂಬುದನ್ನು ನಾನು ತಿಳಿದಿರಲಿಲ್ಲ.''

''ನಿನ್ನ ಮಾತುಗಳ ಅರ್ಥವು ನನಗೆ ತಿಳಿಯುವದಿಲ್ಲ!''

''ಮಾಧೂ! ಹೇಗೆ ತಿಳಿದೀತು? ಸುಖಮಯವಾಗಿದ್ದ ನನ್ನ ದಾಂಪತ್ಯ ಜೀವನ ವನ್ನು ಸೂರೆಗೊಂಡ ಅನಂತರವೂ ನೀನು ತೃಪ್ತನಾಗದೆ, ತೀವ್ರವಾದ ಮುಳ್ಳುಗಳಿಂದ ನನ್ನ ಎದೆಯನ್ನು ಚುಚ್ಚಿ ನೋವು ಮಾಡಬೇಕೆಂದಿರುವ ಈ ಹಂಬಲವೇಕೆ? ನಾನಾ ದರೋ ಆ ನನ್ನ ಪ್ರಪಂಚವನ್ನು ಪರಿತ್ಯಜಿಸಿ ದೂರ ಬಂದಿರುತ್ತೇನೆ. ನಿನ್ನ ಇಷ್ಟದಂತೆ ವರ್ತಿಸಲು ಯಾವ ಆತಂಕವನ್ನೂ ನೀಡದೆ ದೂರ ಸರಿದಿರುತ್ತೇನೆ.''

''ರಂಗಾ! ರಂಗಾ! ನಿನ್ನ ಜೀವನದಲ್ಲಿ ವಿಷವನ್ನು ಬಿತ್ತಿದವನು ನಾನಲ್ಲ. ನನ್ನ ಸಹೋದರನಿಗೆ, ನನ್ನ ಆಚಾರ್ಯನಿಗೆ ದ್ರೋಹವನ್ನು ಎಣಿಸುವ ಪಾಪಿಯು ನಾನಲ್ಲ!''

ಸುಧಾಂಶುವು ಮಾತಾಡಲಿಲ್ಲ! ಇನ್ನು ನಾವು ಅವನನ್ನು ಸುಧಾಂಶುವೆಂದು ಸಂಬೋಧಿಸುವ ಬದಲು ರಂಗನಾಥನೆಂದು ಕರೆಯುವುದೇ ಮೇಲು; ಏಕೆಂದರೆ, ಅದು ಅವನ ನಿಜವಾದ ಹೆಸರಾಗಿದೆ. ಇದುವರೆಗಿನ ಅಧ್ಯಾಯಗಳನ್ನು ವಾಚಿಸಿದ ಓದುಗರು ರಂಗನಾಥನು ಯಾರೆಂಬುದನ್ನೂ, ಅವನೇಕೆ ತನ್ನ ಮಡದಿಯನ್ನು ತ್ಯಜಿಸಿದ ನೆಂಬ ಸಂಗತಿಯನ್ನೂ ತಿಳಿದುಕೊಂಡಿರಬಹುದು. ಅವನು ಮಾಧವನಂತೆಯೇ ಅಸಹ ಕಾರ ಸಂಗ್ರಾಮದಲ್ಲಿ ಧುಮುಕಿ, ತನ್ನ ನಾಡಿನ ಮೋಚನೆಗಾಗಿ ಪ್ರಯತ್ನಿಸಿದನು. ಅವನನ್ನು ಅಧಿಕಾರಿಗಳು ರಾಜದ್ರೋಹ ಆಪಾದನೆಯನ್ನು ಹೊರಿಸಿ ತುರಂಗಕ್ಕೆ ಕಳು ಹಿಸಿದರು. ಇದರಲ್ಲಿ ನಾವು ಆಶ್ಚರ್ಯಪಡಬೇಕಾದುದಿಲ್ಲ. ಬೆಳೆದು ಬರುತ್ತಿರುವ ಸ್ವಾತಂತ್ರ್ಯದ ಬಯಕೆಯನ್ನು ತಡೆಗಟ್ಟಲು ಆಳರಸರು ನಿರಂತರ ಯತ್ನಿಸುತ್ತಲಿರು ವರು. ರಂಗನಾದರೂ ಸುಧಾಂಶುವೆಂಬ ಹೆಸರನ್ನು ಧರಿಸಿ, ನಳಿನೀರಂಜನನ ''ಸಾಧನ ಕುಟೀರ''ದಲ್ಲಿ ತನ್ನ ಆಚಾರ್ಯನ ಮುಖದಿಂದ ಸ್ವಾಧೀನ ಜೀವನದ ಮಂತ್ರ ವನ್ನು ಪಠಿಸಿದನು. ಅವನಲ್ಲಿ ಬೆಳಗುತ್ತಿರುವ ಸ್ವಾತಂತ್ರ್ಯಪ್ರೇಮವು, ಭಾರತ ಉದಯದ ಸೂರ್ಯರಾದ ಮಹಾತ್ಮಾಜಿಯವರ ಸತ್ಯಾಗ್ರಹದಲ್ಲಿ ಭಾಗವನ್ನು ವಹಿಸುವಂತೆ ಪ್ರೇರಿ ಸಿತು. ಅವನು ಸ್ವಾತಂತ್ರ್ಯಸಂಪಾದನೆಯ ಉದ್ಯಮಗಳಲ್ಲಿ ಹೆಚ್ಚು ಕಾಲ ನಿರತ ನಾಗುವುದರೊಳಗಾಗಿ, ಸರಕಾರದವರು ಅವನನ್ನು ಬಂಧಿಸಿ, ತುರಂಗವಾಸವನ್ನು ಅನು ಭವಿಸಲು ಕಳುಹಿಸಿದರು. ಈ ತುರಂಗದಲ್ಲಾಗಿತ್ತು ಅವನಿಗೆ ಅವನ ಬಾಲದ ಗೆಳೆಯನ ಸಮಾಗಮವು.

''ಮಾಧು, ನಿನ್ನ ಈ ನುಡಿಗಳನ್ನು ಹೇಗೆ ನಂಬಲಿ? ನಿನ್ನ ವಿಶ್ವಾಸ ವಂಚನೆಯ ಬಗ್ಗೆ ನನಗೆ ಪ್ರತ್ಯಕ್ಷ ನಿದರ್ಶನವು ಇದೆ. ಇಗೋ, ನೋಡು'' ಎನ್ನುತ್ತಾ ರಂಗನು ತನ್ನ ಕಣ್ಣುಗಳನ್ನು ಸ್ವಲ್ಪ ಕೆಂಪು ಮಾಡಿಕೊಂಡು, ತನ್ನ ಅಂಗಿಯೊಳಗಿನಿಂದೊಂದು ಕಾಗದವನ್ನು ಹೊರಗೆ ತೆಗೆದನು. ಅದನ್ನು ಅವನು ಮಾಧವನ ಕೈಗೆ ಕೊಟ್ಟನು. ಮಾಧವನು ಅದನ್ನು ಸ್ವೀಕರಿಸಿ ವಾಚಿಸಿದನು. ಅದು ಒಂದು ಪ್ರಣಯ ಪತ್ರ; ಎಂದು

ಮಾತ್ರವಲ್ಲ. ಅದು ಮಾಧವನ ಹಸ್ತಾಕ್ಷರವಾಗಿದ್ದಿತು. ಅವನು ಪದ್ಮಳಲ್ಲಿ ಪ್ರೇಮ ಭಿಕ್ಷೆಯನ್ನು ಯಾಚಿಸಿದ ತಾತ್ಪರ್ಯವನ್ನು ಆ ಕಾಗದವು ಹೊರಸೂಸುತ್ತಲಿದ್ದಿತು. ಅದನ್ನು ಓದಿದನಂತರ ಮಾಧವನು ಆಶ್ಚರ್ಯದಿಂದ ಸ್ತಂಭೀಭೂತನಾಗಿಹೋದನು.

"ಮಾಧೂ, ನಿನ್ನ ಮೋಸಕ್ಕೆ ಇದಕ್ಕಿಂತ ಮಿಗಿಲಾದ ನಿದರ್ಶನವು ಬೇರೆ ಏನಿದೆ? ನೀನು ಗೈದ ಕೃತ್ಯವು ಎಷ್ಟು ಭಯಂಕರವಾದುದೆಂಬುದನ್ನು ಆಲೋಚಿಸು! ನನ್ನ ಪ್ರೇಮದ ಮಡದಿಯಿಂದ ನೀನು ನನ್ನನ್ನು ಅಗಲಿಸಿದೆ. ಪಾಪದ ದಾರಿಯಲ್ಲಿ ಪುನಃ ನನ್ನ ಅವಳನ್ನು ಪ್ರವೇಶಿಸುವಂತೆ ಮಾಡಿದೆ. ನಿಮ್ಮ ಸುಖಗಳಿಗೆ ನಾನು ಅಡ್ಡಿಯಾಗಿ ನಿಲ್ಲಲು ಬಯಸುವದಿಲ್ಲ!"

"ರಂಗಾ, ಇದು ನಿನ್ನ ಕುಟುಂಬದಲ್ಲಿ ವಿಷಬೀಜವನ್ನು ಬಿತ್ತಲು ಯತ್ನಿಸಿದ ಒಬ್ಬ ತಂತ್ರಜ್ಞನ ಕಪಟಸೂತ್ರವಾಗಿದೆ! ನಾನು ಅಷ್ಟು ಕೀಳ್ತರಗತಿಯ ನರಕೀಕಟವೆಂದು ನೀನು ಭಾವಿಸಿರುವೆಯಾ? ನನ್ನ ಭಗಿನಿಯೆಂಬುದಾಗಿ ವಿಚಾರಿಸಿ, ನಾನು ಇದುವರೆಗೆ ಪದ್ಮಳೊಡನೆ ವರ್ತಿಸಿದೆನು. ನನ್ನಲ್ಲಿ ಕಿಂಚಿತ್ತಾದರೂ ಪಾಪಸ್ಪರ್ಶನವಿಲ್ಲ. ಇದಕ್ಕೆ ಕರುಣಾಮಯನಾದ ಪರಂಜ್ಯೋತಿಯೇ ಸಾಕ್ಷಿಯು! ಈ ಕುಟುಂಬ ಛಿದ್ರದಿಂದ ಲಾಭವನ್ನು ಹೊಂದಬಹುದಾದ ಒಂದು ವ್ಯಕ್ತಿಯು ಈ ಕಪಟ ಪತ್ರವನ್ನು ಸೃಷ್ಟಿಸಿದನು, ಆದರೆ ಅವನ ಕರ್ಮಫಲವು ಅವನನ್ನೇ ಆವರಿಸಿತು!"

"ಈ ಪತ್ರದ ಕೈ ಅಕ್ಷರವು ನಿನ್ನದಾಗಿದೆ!"

"ಆದರೆ ಇದರ ಹಸ್ತಾಕ್ಷರವು ನನ್ನ ಕೈಬರೆಹದಂತಿದೆ, ಎಂಬ ಮಾತ್ರದಿಂದ ಅದು ನನ್ನದಾಗಬೇಕೆಂಬ ನಿರ್ಬಂಧವಿಲ್ಲವಷ್ಟೆ? ನಾನು ನಿರಪರಾಧಿಯು!"

ರಂಗನು ಮರುಮಾತಾಡಲಿಲ್ಲ, ಅವನು ವಿಚಾರಮಗ್ನನಾದನು. ಮಾಧವನ ವದನಮಂಡಲವನ್ನು ಅವನು ನೋಡಿದನು. ನಿಷ್ಕಲಂಕತೆಯು ಆ ವದನದಲ್ಲಿ ಹರಿದಾಡುತ್ತಿದ್ದಿತು. ಪಾಪವನ್ನು ಆಚರಿಸಿದ ವ್ಯಕ್ತಿಯು ಮಾಧವನಾಗಿದ್ದರೆ, ಅವನಲ್ಲಿ ಈ ನಿಷ್ಕಲಂಕತೆಯು ಗೋಚರವಾಗುವದು ಹೇಗೆ? ಎಂದು ತನ್ನನ್ನು ತಾನೇ ರಂಗನು ಪ್ರಶ್ನಿಸಿದನು.

'ರಂಗಾ! ಪದ್ಮಳು ಪಾವನಳಿರುವಳು! ಎಂದು ಮಾಧವನು ಹೇಳಿದನು "ನಿನ್ನ ವಿಯೋಗದಿಂದ ಅವಳ ಹೃದಯವು ಒಡೆದುಹೋಗಿದೆ! ಹೊಸೂರು ಗ್ರಾಮದಲ್ಲಿ ಹಳ್ಳಿಯ ಜನರ ಅಭ್ಯುನ್ನತಿಗಾಗಿ ಅವಳು ಯತ್ನಿಸುತ್ತ, ಅವಳು ಅಖಂಡವಾದ ತಪಸ್ಸನ್ನು ಆಚರಿಸುತ್ತಲಿರುವಳು! ಅವಳನ್ನು ನೀನು ಸಂಶಯದೃಷ್ಟಿಯಲ್ಲಿ ವೀಕ್ಷಿಸುವದು ಭಯಂಕರವಾದ ಒಂದು ಅಪರಾಧವಾಗಿದೆ! ನೀನು ಸಂಶಯಹೃದಯನಾಗಿ ಒಂದು ಹೆಣ್ಣಿನ ಬದುಕಿನಲ್ಲಿ ಬೂದಿಯನ್ನು ಎರಚುವದಕ್ಕಿಂತ, ಘೋರವಾದ ಪಾಪಕೃತ್ಯವು ಬೇರೊಂದಿಲ್ಲವೆಂಬುದನ್ನು ತಿಳಿ!"

'ಮಾಧೂ, ಈ ನಿನ್ನ ನುಡಿಗಳನ್ನು ಹೇಗೆ ನಂಬಲಿ? ನನಗೆ ಈ ಕುಟುಂಬ ಜೀವನವು ಹೇಸಿಗೆಯಾಗಿದೆ. ಅಲ್ಲಿಗೆ ಆ ನರಕಕ್ಕೆ ಪುನಃ ನನ್ನನ್ನು ಹಿಡಿದೆಳೆಯಲು ಪ್ರಯ-

ತ್ತಿಸಬೇಡ!' ಎಂದು ದೃಢನಿಶ್ಚಯದಲ್ಲಿ ರಂಗನು ಹೇಳಿದನು.

"ರಂಗ, ನಿನ್ನ ಹೃದಯವು ಕಲ್ಲು! ಆ ಮುದ್ದು ಕುವರನನ್ನು, ನಿನ್ನ, ಆಪ್ತ-ಮಿತ್ರನನ್ನು, ಕೈಹಿಡಿದ ಮಡದಿಯನ್ನು ತ್ಯಜಿಸಿದ ನಿನ್ನ ಮನಸ್ಸು ಎಷ್ಟು ಕರ್ಕಶವು!" ಮಾಧವನು ನಿರಾಶೆಯ ಧ್ವನಿಯಲ್ಲಿ ಎಂದನು.

ಗೆಳೆಯರಿಬ್ಬರ ಸಂಗಮವಾಯಿತು, ಆದರೆ ಒಂದಿನ ದಿನಗಳ ಸ್ನೇಹವಿಲ್ಲ; ಆದರವಿಲ್ಲ. ಅವರಿಬ್ಬರ ನಡುವೆ ಅನ್ಯನೊಬ್ಬನ ಕುಡುಕತನದ ಫಲವಾಗಿ ಒಂದು ಗೋಡೆಯು ನಿಂತಿದ್ದಿತು!

## ೨೦ ಭಯಂಕರ ವರ್ಗೀಯ ಕಲಹ!



ವರ್ಷಗಳೆರಡು ಗತಿಸಿದವು, ರಂಗನಾಥನು ಕಾರಾಗೃಹದಿಂದ ವಿಮುಕ್ತನಾಗಿ ಹೊರಗೆ ಬಂದನು. ಆಗ ಅದು ೧೯೨೪ನೇ ಸಂವತ್ಸರವಾಗಿದ್ದಿತು. ಅಸಹಕಾರ ಆಂದೋಲನವು ಪರಿಶಾಂತತೆಯ ಅವಸ್ಥೆಯನ್ನು ಹೊಂದಿದ್ದಿತು, ಆದರೆ ಜನರಲ್ಲಿ ಉಂಟಾಗಿರುವ ಜಾಗ್ರತೆಯು ನಾಶವಾಗಿರಲಿಲ್ಲ. ದೇಶವು ಮಹಾತ್ಮಾಜಿಯವರ ನೇತೃತ್ವದಲ್ಲಿ ರಚನಾತ್ಮಕ ಕಾರ್ಯಗಳಲ್ಲಿ ನಿರತವಾಗಿದ್ದಿತು. ಮುಂಬರುವ ಸಂಗ್ರಾಮಕ್ಕೆ ಅವಶ್ಯವಿರುವ ಶಕ್ತಿಯನ್ನು ಸಂಪಾದಿಸುವದರಲ್ಲಿ ನಾಡು ಉದ್ಯಮಿಸುತ್ತಲಿದ್ದಿತು. ಭಾರತವರ್ಷವು ಜಾಗ್ರತೆಯನ್ನು ಹೊಂದುವದಕ್ಕಾಗಿ ಪ್ರಯತ್ನಿಸುತ್ತಲಿದ್ದಿತು

ಈ ಸಂದರ್ಭದಲ್ಲಿ ರಂಗನು ತುರಂಗವನ್ನು ತ್ಯಜಿಸಿ ಹೊರಗೆ ಬಂದನು ತನ್ನ ಮಡದಿಯನ್ನಾಗಲಿ, ಕಂದನನ್ನಾಗಲಿ ನೋಡುವ ಆಸಕ್ತಿಯು ಅವನಿಗಿರಲಿಲ್ಲ. ಕುಟುಂಬ ಜೀವನದಲ್ಲಿ ಅವನಿಗೆ ಜಿಗುಪ್ಸೆಯು ಉದಯಿಸಿದ್ದಿತು. ಅವನ ಮನಸ್ಸನ್ನು ಚಲಿಸಲು ತುರಂಗದಲ್ಲಿ ಮಾಧವನು ಅದೆಷ್ಟೋ ಬಗೆಯಿಂದ ಪ್ರಯತ್ನಿಸುತ್ತಲಿದ್ದನು; ಆದರೆ ಅವನ ಉದ್ಯಮಗಳೆಲ್ಲವೂ ವಿಫಲವಾದವು. ರಂಗನು ಕಾರಾಗೃಹದಿಂದ ವಿಮುಕ್ತನಾಗಲು ಶಿವಪುರದಲ್ಲಿರುವ ನಳಿನೀರಂಜನನ 'ಸಾಧನಕುಟೀರ'ಕ್ಕೆ ನಿರ್ಗಮಿಸಿದನು.

ನಳಿನೀರಂಜನನ ನಿರಂತರ ಪ್ರಯತ್ನಗಳ ಫಲವಾಗಿ ಜಾಗ್ರತೆಯನ್ನು ಪಡೆದ ಶಿವಪುರದಲ್ಲಿ ಮನುಷ್ಯನಲ್ಲಿರುವ ಅಂಧತೆಯನ್ನೂ ವರ್ಗವಿದ್ವೇಷವನ್ನೂ ತೋರಿಸುವ ಒಂದು ಪ್ರಸಂಗವು ಜರುಗಿತು. ತಿಳುವಳಿಕೆಯನ್ನು ಪಡೆದ ಶಿವಪುರದಲ್ಲಿ ಆ ದಾರುಣ ಸಂಭವವು ಜರುಗುವುದೆಂದು ಯಾರೂ ಭಾವಿಸಿರಲಿಲ್ಲ; ಆದರೆ ಸಮಾಜದಲ್ಲಿ ಪಸರಿಸಿರುವ ನೆಮ್ಮದಿಯನ್ನು ಭಂಗಪಡಿಸಿ, ಕೋಲಾಹಲವನ್ನು ಎಬ್ಬಿಸುವ ನೀಚರು ಎಲ್ಲ ಸ್ಥಳಗಳಲ್ಲಿಯೂ ಇದ್ದೇ ಇರುತ್ತಾರೆ! ಮತದ ಹೆಸರನ್ನೂ ಈಶ್ವರನ ಹೆಸರನ್ನೂ ಹೇಳಿ, ಮತಕಲಹಗಳನ್ನೆಬ್ಬಿಸಿ, ರಕ್ತದ ನದಿಯನ್ನು ಹರಿಸುವದೇ ಈ ಜನರ ಕೆಲಸವು ನಳಿನೀರಂಜನನೂ ಅವನ ಅನುಯಾಯಿಗಳೂ ಜನತೆಯ ಮಧ್ಯ

ದಲ್ಲಿ ಹರಡಿರುವ ವರ್ಗವಿದ್ವೇಷದ ಭೂತವನ್ನು ಹೊಡೆದೋಡಿಸುವದಕ್ಕಾಗಿ ಪ್ರಯತ್ನಿಸುತ್ತಿದ್ದರೂ ಶಿವಪುರದಲ್ಲಿ ಈ ನರಹತ್ಯೆಯು ನಡೆದೇ ಹೋಯಿತು!

ವಿನಾಯಕನ ಹಬ್ಬವು ಬಂದಿತು. ಇದು ಅಖಿಲ ಭಾರತದಲ್ಲಿಯೇ ಹಿಂದುಗಳಿಗೆ ಪ್ರಧಾನವಾದ ಒಂದು ಹಬ್ಬವಾಗಿರುತ್ತದೆ. ಪ್ರತಿಯೊಬ್ಬರೂ ತಮ್ಮ ಶಕ್ತಿಗನುಸಾರವಾಗಿ ಈ ಉತ್ಸವವನ್ನು ಆಚರಿಸುತ್ತಾರೆ. ಶಿವಪುರದಲ್ಲಿಯಾದರೂ ಜನರು ಈ ಹಬ್ಬವನ್ನು ಅತ್ಯುತ್ಸಾಹದಿಂದ ಆಚರಿಸಿದರು. ಸಕಲ ವಿಘ್ನಗಳನ್ನೂ ನಿವಾರಿಸುವ ಗಜಾನನ ಅರ್ಚನೆಯು ಎಲ್ಲೆಲ್ಲಿಯೂ ನಡೆದಿತು. ಜನರು ಆ ದಿನ ರಾತ್ರಿ ವಿನಾಯಕ ವಿಗ್ರಹವನ್ನು ಶಿವಪುರದ ಬೀದಿಯಲ್ಲಿ ಮೆರವಣಿಗೆ ಮಾಡಲು ನಿರ್ಧರಿಸಿದರು. ಒಂದು ಗಜಾನನ ಬಿಂಬವನ್ನು ವಿವಿಧ ವಸ್ತ್ರ-ಭೂಷಣಗಳಿಂದ ಅಲಂಕರಿಸಿ ಸುಂದರವಾದ ಒಂದು ಪಲ್ಲಕ್ಕಿಯಲ್ಲಿಟ್ಟು ಅವರು ಗ್ರಾಮಸಂಚಾರ ಮಾಡತೊಡಗಿದರು. ಸಂಗೀತಗಾರರು ಪಲ್ಲಕ್ಕಿಯ ಸುತ್ತಲೂ ನೆರೆದು, ವಿವಿಧ ರಾಗಾಲಾಪನೆಗಳನ್ನು ಮಾಡುತ್ತ ದೇವರ ಸ್ತುತಿ-ಗೀತೆಗಳನ್ನು ಹಾಡತೊಡಗಿದರು. ಬಹು ಸಂಭ್ರಮದಿಂದ ಮೆರವಣಿಗೆಯು ಆ ರಾತ್ರಿ ಮುಂದೆ ಸಾಗಿತು.

ಶಿವಪುರದ ನಿವಾಸಿಗಳು ಹಲವು ಮತಾನುಯಾಯಿಗಳಾಗಿದ್ದರು. ಇಸ್ಲಾಮ ಧರ್ಮಾವಲಂಬಿಗಳೂ ಶಿವಪುರದಲ್ಲಿ ವಾಸಿಸುತ್ತಿದ್ದರು. ಇದುವರೆಗೆ ಶಾಂತತೆಯ ವಾತಾವರಣದಲ್ಲಿ ಶಿವಪುರದಲ್ಲಿರುವ ವಿವಿಧ ಧರ್ಮಾನುಯಾಯಿಗಳು ಪರಸ್ಪರ ಸಹೋದರ ಭಾವದಲ್ಲಿ ವರ್ತಿಸುತ್ತಲಿದ್ದರು. ಹಿಂದೂಧರ್ಮೀಯನು ಮುಸ್ಲಿಂಧರ್ಮ ವಿಶ್ವಾಸಿಯನ್ನು ಕಂಡರೆ ಕಣ್ಣು ಕೆಂಪಗೆ ಮಾಡುತ್ತಿರಲಿಲ್ಲ. ಮುಸ್ಲಿಂ ಧರ್ಮದವನಾದರೂ ಇತರ ಮತದವರೊಡನೆ ಸ್ನೇಹಪುರಸ್ಸರವಾದ ರೀತಿಯಲ್ಲಿಯೇ ನಡೆದುಕೊಳ್ಳುತ್ತಿದ್ದನು. ಶಿವಪುರದಲ್ಲಿರುವ ಕೆಲವು ಮಂದಿ ಕುಹಕಿಗಳ ಪ್ರಯತ್ನದ ಫಲವಾಗಿ ಈ ಮೈತ್ರಿಗೆ ಭಂಗಬರುವಂತಾಯಿತು. ಅಮೃತಮಯವಾದ ಈ ಸ್ನೇಹಸಂಬಂಧದಲ್ಲಿ ಒಂದು ವಿಷಬಿಂದುವು ಬೆರೆತಿತು. ಮತಾಂಧತೆಯು ಮನುಷ್ಯನನ್ನು ತನ್ನ ಆತ್ಮವನ್ನು ಮರೆಯುವಂತೆ ಮಾಡಿತು.

ಹಿಂದೆ ಹೇಳಿದಂತೆ ವಿನಾಯಕ ಹಬ್ಬದ ದಿನ ಶಿವಪುರದ ಹಿಂದೂನಿವಾಸಿಗಳು ವಿಘ್ನೇಶ್ವರನ ವಿಗ್ರಹವನ್ನು ಮೆರವಣಿಗೆ ಮಾಡಿ ಬೀದಿಯಲ್ಲಿ ಮೆರೆಯಿಸಿದರು. ಈ ಮೆರವಣಿಗೆಯು ಶಿವಪುರದಲ್ಲಿರುವ ಮುಸ್ಲಿಂ ನಿವಾಸಿಗಳ ಪ್ರಾರ್ಥನಾಲಯದ ಮುಂದೆ ಬಂದು ತಲುಪಿತು. ಈ ಮಸೀದಿಯ ಮುಂದೆ ಮೆರವಣಿಗೆಯವರು ತಮ್ಮ ವಾದ್ಯಘೋಷಗಳನ್ನು ನಿಲ್ಲಿಸಲಿಲ್ಲ. ಆ ಪ್ರಾರ್ಥನಾಲಯದಲ್ಲಿರುವ ಮುಸಲ್ಮಾನರು ಮೆರವಣಿಗೆಯವರೊಡನೆ ವಾದ್ಯಘೋಷಗಳನ್ನು ನಿಲ್ಲಿಸಬೇಕೆಂದು ನುಡಿದರು. ಹಿಂದುಗಳು ಇಸ್ಲಾಂಧರ್ಮದ ಮತ-ವಿಶ್ವಾಸಗಳಿಗೆ ಮಾನ್ಯತೆಯನ್ನು ನೀಡಿ ತಮ್ಮ ವಾದ್ಯಘೋಷಗಳನ್ನು ನಿಲ್ಲಿಸಿದ್ದರೆ ಯಾವ ಗಲಭೆಗಳಿಗೂ ಅವಕಾಶ ದೊರಕುತ್ತಿರಲಿಲ್ಲ; ಆದರೆ ಮನುಷ್ಯನಿಗೆ ಈ ಉದಾರ ಬುದ್ಧಿಯು ಹೇಗೆ ಉಂಟಾಗಬೇಕು? ನಮಗೆ ಹೇಗೆ ನಮ್ಮ

ಮತ-ವಿಶ್ವಾಸಗಳು ಪವಿತ್ರವಾಗಿವೆಯೋ ಅದರಂತೆಯೇ ಅನ್ಯಧರ್ಮಿಗಳಿಗೆ ಅವರ ಮತ ವಿಚಾರಗಳು ಪಾವನವಾದವುಗಳು, ಎಂಬದನ್ನು ತಿಳಿದುಕೊಳ್ಳಲು ತಿಳಿಗೇಡಿತನವು ಅಡ್ಡವಾಗಿ ನಿಂತಿದ್ದಿತು. ಮುಸ್ಲೀಂ ಜನರು ಹಿಂದುಗಳೊಡನೆ ಮಸೀದಿಯ ಮುಂದೆ ವಾದ್ಯಘೋಷಗಳನ್ನು ನಿಲ್ಲಿಸಬೇಕೆಂದು ಅಪೇಕ್ಷಿಸಲು, ಜನರ ಮಧ್ಯದಲ್ಲಿದ್ದ ಒಬ್ಬ ಅವಿವೇಕಿಯು, "ಏಕಯ್ಯಾ! ನೀವು ಆ ಜನರಿಗೆ ಹೆದರುತ್ತೀರಿ? ಮಸೀದಿಯ ಮುಂದೆ ವಾದ್ಯಗಳನ್ನು ಬಾರಿಸಿದರೆ ಆಗಿಹೋಗುವ ಪ್ರಮಾದವೇನು?" ಎಂದು ನುಡಿದನು.

ಕೆಲವು ಜನರು ಅಂದರು, 'ಮಸೀದೆಯ ಮುಂದೆ ವಾದ್ಯಗಳನ್ನು ಬಾರಿಸೋಣ.'

ಸರಿಯಾದ ದಾರಿಯನ್ನು ತೋರಿಸಿ ವಿವೇಕದಿಂದ ಮುಂಬರುವ ವಿಪತ್ತನ್ನು ನಿವಾರಿಸಲು ಬುದ್ಧಿಶಾಲಿಗಳಾದವರು ಯಾರೂ ಆ ಜನರ ಗುಂಪಿನಲ್ಲಿರಲಿಲ್ಲ. ಜನರು ಮಸೀದಿಯ ಮುಂದೆ ವಾದ್ಯಘೋಷಗಳನ್ನು ಮಾಡಬೇಕೆಂದೇ ನಿರ್ಧರಿಸಿದರು. ಇದಲ್ಲದೆ ಕೆಲವು ಮಂದಿ ಮುಸ್ಲೀಮರ ನುಡಿಗಳನ್ನು ಕೇಳಿ ವಾದ್ಯಘೋಷಗಳನ್ನು ನಿಲ್ಲಿಸಿದುದೇ ಆದರೆ, ತಾವು ಅವರಿಗೆ ಹೆದರಿದಂತಾಗುವದೆಂಬ ಒಂದು ದುರಭಿಮಾನವು ಜನರನ್ನು ಆವರಿಸಿತು. ಅನ್ಯಧರ್ಮಿಗಳ ಮತವಿಶ್ವಾಸಗಳನ್ನು ಮನ್ನಿಸುವದಕ್ಕಾಗಿ ಅವರು ತಮ್ಮ ವಾದ್ಯಘೋಷಗಳನ್ನು ನಿಲ್ಲಿಸಲಿಲ್ಲ

ಮಸೀದಿಯೊಳಗಿರುವ ಮುಸ್ಲೀಮ ಜನರಾದರೂ ಹೆಚ್ಚು ವಿವೇಕವುಳ್ಳವರಾಗಲೀ ವಿಶಾಲಮನಸ್ಕರಾಗಲೀ ಆಗಿರಲಿಲ್ಲ. ಒಂದುವೇಳೆ ತಮ್ಮ ಪ್ರಾರ್ಥನಾಲಯದ ಮುಂದೆ ಅನ್ಯರು ಶಬ್ದಗಳನ್ನು ಮಾಡುತ್ತ ಹೋದ ಮಾತ್ರದಿಂದ ಲೋಕವು ತಲೆಕೆಳಗಾಗದು, ಎಂಬ ಜ್ಞಾನವು ಅವರಿಗಿರಲಿಲ್ಲ. ಅನ್ಯರು ತಮ್ಮ ಮತ-ವಿಶ್ವಾಸಗಳಿಗೆ ಭಂಗವನ್ನು ತರುವಂಥ ಕೆಲಸಗಳನ್ನು ಜರುಗಿಸಿ ತಮ್ಮ ಎದೆಗೆ ನೋವನ್ನುಂಟುಮಾಡುವ ಸಂದರ್ಭದಲ್ಲಿ ಅನ್ಯ ಧರ್ಮೀಯರಿಂದ ಜರುಗಿದ ಅವಿವರ್ತನೆಯನ್ನು ಸಹನಾತ್ಮಕ ಬುದ್ಧಿಯಿಂದ ವೀಕ್ಷಿಸಿ, ಪ್ರೇಮಮಂತ್ರದ ಮೂಲಕ ಪರಸ್ಪರ ತಿಳಿದುಕೊಂಡು ಸೌಹಾರ್ದವನ್ನು ಬೆಳಿಸಬೇಕೆಂಬುದನ್ನು ಆ ಬಡನಾಯಿಗಳು ತಿಳಿದವರಾಗಿರಲಿಲ್ಲ ಮನುಷ್ಯನಲ್ಲಿರುವ ತಿಳಿಗೇಡಿತನವು ಯಾವಾಗಲೂ ಅನರ್ಥಕಾರಿಗಳಾದ ಕೆಲಸಗಳನ್ನು ಜರುಗಿಸುವಂತೆ ಅವನನ್ನು ಪ್ರೇರಿಸುತ್ತದೆ. ಸಂಸ್ಕೃತಿಯನ್ನು ಪಡೆಯದವರು ಸಾಧಾರಣವಾಗಿ ಉದ್ದೇಶವಿಲ್ಲದೆ ತಮ್ಮ ಮಾತುಗಳಿಗೆ ಇದಿರು ನುಡಿದವರೊಡನೆ ಜಗಳವನ್ನು ಹೂಡಲು ಹಿಂದುಮುಂದು ನೋಡುವುದಿಲ್ಲ. ಅದರಂತೆಯೇ ಆಯಿತು ಶಿವಪುರದ ಮುಸ್ಲೀಂ ಧರ್ಮಿಗಳ ಸ್ಥಿತಿಯು ಅವರು ಉದ್ದೇಶಪೂರ್ವಕವಾಗಿ ಕಲಹವನ್ನು ಆರಂಭಿಸಿರಲಾರರು; ಆದರೆ ಹಲವು ಸಾರೆ ದುರಭಿಮಾನವು ಮನುಷ್ಯನ ಕಣ್ಣುಕಾಣದಂತೆ ಮಾಡುತ್ತದೆ. ಅವರು ತಮ್ಮ ಮತ-ವಿಶ್ವಾಸಗಳಿಗೆ ಭಂಗವನ್ನು ತರುವಂಥ ಕೃತ್ಯಗಳನ್ನು ಜರುಗಿಸಬಾರದೆಂದು ಈ ಮೊದಲು ಹೇಳಿದಂತೆ ಪ್ರಾರ್ಥಿಸಿದರು, ಆದರೆ ಮೆರವಣಿಗೆಗಾರರು ಅವರ ಮಾತುಗಳನ್ನು ಮನ್ನಿಸಲಿಲ್ಲ. ಇದು ಮುಸ್ಲೀಮರನ್ನು ರೇಗುವಂತೆ ಮಾಡಿತು.

"ಮರ್ಯಾದೆಯಲ್ಲಿ ಹೇಳಿದರೆ ನೀವು ಕೇಳುವದಿಲ್ಲವೆ?" ಎಂದು ಸ್ವಲ್ಪ ಬಲಿಷ್ಠನಾದ ಮುಸ್ಲಿಂಬಾಂಧವನೊಬ್ಬನು ಮಸೀದಿಯ ಹೊರಗೆ ಬಂದು ನಿಂತು ನುಡಿದನು.

"ನಿಮ್ಮ ಮಾತನ್ನು ಕೇಳವೆ ಹೋದರೆ ನಮ್ಮ ತಲೆಗಳನ್ನು ತೆಗೆಯುವಿರಾ?" ಎಂದು ಮೆರವಣಿಗೆ ಮಧ್ಯದಿಂದ ಒಬ್ಬ ತುಂಟನು ಕೂಗಿ ಕೇಳಿದನು.

"ಹೌದು. ಈ ಜನರಿಗೆ ನಾವು ತಲೆಬೊಗ್ಗಿಸಿ ನಡೆಯಬೇಕೇ?" ಎಂದರು ಕಲಹ ಆಸಕ್ತರಾದ ಇನ್ನು ಕೆಲವರು.

"ನಮ್ಮ ಮಸೀದೆಯ ಮುಂದೆ ತಂಬಟೆಗಳನ್ನು ಬಾರಿಸುವದನ್ನು ನೋಡಿ ನಾವು ಸುಮ್ಮನಿರಲಾರೆವು. ಪರಿಶುದ್ಧ ಖುರಾಣದಲ್ಲಿ ಹೇಳಿದುದಕ್ಕೆ ಪ್ರತಿಯಾಗಿ ನೀವು ವರ್ತಿಸುವುದಾದರೆ, ಅದಕ್ಕೆ ಯೋಗ್ಯವಾಗಿ ನಾವು ಪ್ರತೀಕಾರವನ್ನು ಮಾಡಿಯೇ ಮಾಡುವೆವು."

"ಹೂಂ, ಇವನೊಬ್ಬ ಮಹಾಪುರುಷ! ಈ ಪ್ರಾಣಿಗಳಿಗೆ ಹೆದರಿ ವಾದ್ಯಘೋಷಗಳನ್ನು ನಿಲ್ಲಿಸಬೇಕಂತೆ! ನಮ್ಮ ಕೈಗಳಲ್ಲಿ ಕಡಬುಗಳು ಇವೆಯೋ? ನಡೆಯಿರಿ ವಾದ್ಯಗಳನ್ನು ಬಾರಿಸುತ್ತ! ಇವರ ಗಂಡಸುತನವೆಷ್ಟಿದೆಯೋ ನೋಡಿಬಿಡೋಣ!" ಎಂಬ ಕೋಪಯುಕ್ತವಾಣಿಯು ಮೆರವಣಿಗೆಯ ಮಧ್ಯದಿಂದ ಹೊರಸೂಸಿತು.

ಮಸೀದಿಯ ಅಂಗಳದಲ್ಲಿ ನಿಂತಿದ್ದ ಬಲಾಢ್ಯನು ಒಳಗೆ ತೆರಳಿ ತನ್ನ ಸಹಧರ್ಮಿಗಳೊಡನೆ ಹೇಳಿದನು: "ಆ ಹರಾಮ್‌ಜಾತಿಯವರು ಮರ್ಯಾದೆಯಲ್ಲಿ ಹೇಳಿದರೆ ನಮ್ಮ ಮಾತುಗಳನ್ನು ಮನ್ನಿಸುವಂತಿಲ್ಲ! ವಾದ್ಯಗಳನ್ನು ಬಾರಿಸಿದರೆ ನೀವೇನು ತಲೆತೆಗೆಯುತ್ತಿರೋ? ಎಂಬುದಾಗಿ ಹಾಸ್ಯಮಾಡುತ್ತಿದ್ದಾರೆ. ನಮ್ಮ ಧರ್ಮಕ್ಕೆ ವಿಪರೀತವಾಗಿ ಜರುಗುತ್ತಲಿರುವ ಈ ಕೃತ್ಯವನ್ನು ಎದುರಿಸದೆ ಹೋದರೆ, ನಮ್ಮ ಮಾನವು ಉಳಿಯುವಂತಿಲ್ಲ!"

"ಅಲ್ಲಾ! ಏನು ನೋಡುತ್ತೀರಿ? ಪರಿಶುದ್ಧ ಖುರಾಣದಲ್ಲಿರುವ ಮಾತಿಗೆ ಯಾವ ಭಂಗವೂ ಬರಬಾರದು. ನಿಮ್ಮ ನಾಡಿಗಳಲ್ಲಿ ಬಿಸಿರಕ್ತವು ಹರಿಯುವುದಿಲ್ಲವೇ? ಆ ಪೈಗಂಬರ ಮತವನ್ನು ಅವಲಂಬಿಸಿರುವ ನೀವು, ಈ ಕಾಫರ ಪ್ರಾಣಿಗಳಿಗೆ ಹೆದರಿ ಕುಳಿತರೆ ಹೇಗೆ? ಹಿಂದಿನವರು ಈ ಪವಿತ್ರಧರ್ಮವನ್ನು ಹರಡುವದಕ್ಕಾಗಿ ಯಾವ ಯಾವ ಸಾಹಸಗಳನ್ನು ಜರುಗಿಸಿದರೆಂಬುದು ನಿಮಗೆ ತಿಳಿಯದೆ? ನಿಮ್ಮ ಪ್ರಾರ್ಥನಾಲಯದ ಮುಂದೆ ವಿಧರ್ಮಿಗಳು ತಂಬಟೆಗಳನ್ನು ಬಾಜಿಸುತ್ತಿರುವಾಗ, ಅವರ ಕೃತ್ಯಗಳನ್ನು ನಿಲ್ಲಿಸಲು ನಿಮ್ಮಿಂದ ಸಾಧ್ಯವಾಗದೆ ಹೋದರೆ, ನೀವು ಗಂಡಸರಾಗಿ ಹುಟ್ಟಿದುದಕ್ಕೆ ಏನು ಸಾರ್ಥಕವಾಯಿತು?" ಈ ರೀತಿ ಅಲ್ಲಿ ನಿಂತಿರುವ ಬಿಳೀ ಗಡ್ಡದ ಖಾಜಿಯು ತನ್ನ ಮುಷ್ಟಿಯನ್ನು ಗಟ್ಟಿಹಿಡಿದು ಒದರಿದನು.

ಸಾಧಾರಣವಾಗಿ ಎಲ್ಲಾ ಮತಗಳಲ್ಲಿಯೂ ಪುರೋಹಿತರಿಗೆ ಅಸಾಮಾನ್ಯ ಸ್ವಾಧೀನಶಕ್ತಿಯಿದೆ. ನಮಗೆ ಇಷ್ಟವಿಲ್ಲದೆ ಇರುವ ಕೆಲಸಗಳನ್ನು ನಾವು ಈ ಜನರಿಂದ ಪ್ರೇರಿತರಾದಾಗ ಮಾಡುತ್ತೇವೆ. ಮತ--ಸಿದ್ಧಾಂತಗಳ ಪರಿಜ್ಞಾನವಿಲ್ಲದ ಒಬ್ಬ

ಬಡಮುಹಮ್ಮದೀಯನಿಗಂತೂ ಖಾಜಿಯ ವಚನವು ವೇದವಾಕ್ಯವೇ ಆಗಿರುತ್ತದೆ. ಖಾಜಿಯ ನುಡಿಯನ್ನು ತಿರಸ್ಕರಿಸಲು ಅವನಿಗೆ ಧೈರ್ಯವಿಲ್ಲ. ಶಿವಪುರವು ಒಂದು ಹಳ್ಳಿಯಾಗಿದ್ದುದರಿಂದ, ಅಲ್ಲಿಯ ಮುಸ್ಲೀಮರ ಪೈಕಿ ವಿದ್ಯಾವಂತರು ಬಹುಮಂದಿ ಯಿರಲಿಲ್ಲ. ಅದರ ಮೂಲಕ ಉದ್ದೇಶಕ್ಕೊಳಗಾಗದೆ ಸ್ವತಂತ್ರವಾಗಿ ಚಿಂತಿಸುವ ಚೈತನ್ಯವು ಅವರಿಗಿರಲಿಲ್ಲ. ಅಲ್ಲಿ ನೆರೆದಿದ್ದ ಆ ಮುಸ್ಲೀಂ ಬಡಪಾಯಿಗಳು ಖಾಜೀ ಸಾಹೇಬರ ನುಡಿಗಳನ್ನು ಕೇಳಿ ಈರ್ಷಾಭರಿತರಾದರು. ವಿಚಾರಶಕ್ತಿಯು ಅವರಲ್ಲಿ ಉಳಿಯಲಿಲ್ಲ. ಅವರ ನೆತ್ತಿಗಳಿಗೆ ನೆತ್ತರು ಏರತೊಡಗಿತು. "ಧರ್ಮ" ರಕ್ಷಣೆಗಾಗಿ ಕೈಗೆ ಸಿಕ್ಕಿದ ಹಲವು ಆಯುಧಗಳನ್ನು, ಕಲ್ಲು, ದೊಣ್ಣೆ, ಚೂರಿ ಮುಂತಾದ ವಸ್ತುಗಳನ್ನು ಹಿಡಿದುಕೊಂಡು, ಅವರು ಮಸೀದೆಯ ಹೊರಗೆ ಬಂದರು. ಇದುವರೆಗೆ ಸ್ನೇಹದಲ್ಲಿ ಪರಸ್ಪರ ಸಹೋದರರಂತೆ ಬಾಳಿದ್ದ ಅನ್ಯಧರ್ಮೀಯರ ನೆತ್ತರನ್ನು ಹೀರುವ ಲಾಲಸೆಯು ಮತಾಂಧತೆಯ ಮೂಲಕ ಆ ಜನರ ಹೃದಯಗಳನ್ನು ಆವರಿಸಿತು!

ಕಲಹವು ಪ್ರಾರಂಭವಾಯಿತು, ಮೆರವಣಿಗೆಯಲ್ಲಿ ನೆರೆದಿದ್ದ ಜನರಾದರೂ ಡೊಣ್ಣೆಗಳನ್ನು ಹಿಡಿದುಕೊಂಡು ಕಾದಲು ಸನ್ನದ್ಧರಾದರು. ಜನರು ಮತಾಂಧತೆಯ ಮೂಲಕ ಅಂಧರಾದರು. "ಹೊಡೆಯಿರಿ! ಬಡಿಯಿರಿ!" ಎಂಬ ಕ್ರಂದನಗಳು ಆಗಸದಲ್ಲಿ ವ್ಯಾಪಿಸಿದುವು.

ಈ ರೀತಿಯ ಒಂದು ಗಲಭೆಯು ಉಂಟಾಗುವದೆಂದು ಯಾರೂ ತಿಳಿಯದುದರಿಂದ, ಹೆಂಗಸರೂ ಮಕ್ಕಳೂ ಆ ಮೆರವಣಿಗೆಯಲ್ಲಿ ನೆರೆದಿದ್ದರು. ಅವರೆಲ್ಲರೂ ಬಂದೊದಗಿದ್ದ ಈ ಭಯಂಕರ ಪ್ರಸಂಗವನ್ನು ದರ್ಶಿಸಿ ಹೆದರಿದರು. ಅಜ್ಞಾತೆಯಿಂದ ಕೂಡಿದ ಜನರು ಯಾವ ಹೀನ ಕೃತ್ಯಗಳನ್ನು ಜರುಗಿಸಲೂ ಹಿಂಜರಿಯುವವರಲ್ಲ. ಮತಾಂಧತೆಯ ಕಾಹಿಲೆಗೆ ಒಳಗಾದವರಿಗೆ ಹೆಂಗಸರು ಮಕ್ಕಳೆಂಬ ವ್ಯತ್ಯಾಸವಿಲ್ಲ. ಅವರು ಎಲ್ಲರ ಮೇಲೆಯೂ ಕೈ ಮಾಡಿಯೇ ಮಾಡುವರು. ಒಂದು ಕಡೆಯಲ್ಲಿ ಎರಡು ಪಂಗಡದವರೂ ಅಶ್ಲೀಲಭಾಷೆಯಲ್ಲಿ ಪರಸ್ಪರ ಬಯ್ದು, ಒಬ್ಬರ ದೇಹವನ್ನು ಇನ್ನೊಬ್ಬರು ಹಿಂಸಿಸುವದರಲ್ಲಿ ನಿರತರಾಗಿದ್ದರೆ. ಇನ್ನೊಂದು ಪಾರ್ಶ್ವದಲ್ಲಿ ಹೆಂಗಸರೂ ಮಕ್ಕಳೂ ಈ ಭಯಂಕರ ಚಿತ್ರವನ್ನು ಕಂಡು ಪ್ರಾಣಭಯದಿಂದ ರೋದಿಸುತ್ತಲಿದ್ದರು.

ಡೊಣ್ಣೆಗಳ ಪ್ರಹಾರನಾದಗಳು ಮೊಳಗಿದವು, ಒಬ್ಬರು ಇನ್ನೊಬ್ಬರ ಕಾಲನ್ನು ತಮ್ಮ ಕಾಲುಗಳಿಂದ ತುಳಿಯುತ್ತ, ತಮ್ಮ ಪ್ರತಿಸ್ಪರ್ಧಿಗಳನ್ನು ಎದುರಿಸಲು ಜನರು ಮುಂದೆ ಸಾಗುತ್ತಿದ್ದರು. ತಲೆಗಳೊಡೆದುವು, ಕಾಲುಗಳು ಮುರಿದವು, ಒಬ್ಬಿಬ್ಬರು ಯಮಲೋಕಕ್ಕೂ ಪ್ರಯಾಣ ಮಾಡಿದರು. ಜನರಿಗೆ ಅಪಾಯಗಳು ಹೆಚ್ಚಿದಂತೆಯೇ ಅವರಲ್ಲಿರುವ ವಿದ್ವೇಷಬೆಂಕಿಯು ಹೆಚ್ಚು ಬೇಗನೆ ಉರಿಯತೊಡಗಿತು. ಮಾನುಷ ಸ್ವಭಾವವನ್ನು ಪರಿತ್ಯಜಿಸಿ, ಸೊಕ್ಕಿ ಬೆಳೆದಿರುವ ಗೂಳಿಗಳಂತೆ ಅವರು ಹೋರಾಡಿದರು.

ಅವರು ಧರ್ಮದ ಹೆಸರನೂ ದೇವರ ಹೆಸರನ್ನೂ ಉಸುರಿ ಹೊರಾಡುತ್ತಿದ್ದರು;

ಆದರೆ ವಿಶ್ವಗಳ ಜನಕನಾದ ಆ ವಿಭುವು ತನ್ನ ಮಕ್ಕಳು ತನ್ನ ಹೆಸರನ್ನು ಹೇಳಿ, ಪರಸ್ಪರರ ನೆತ್ತರನ್ನು ಹೀರುತ್ತಿರುವ ಭಯಂಕರ ಚಿತ್ರವನ್ನು ಅವಲೋಕಿಸಿ ಎಂದಾದರೂ ಸಂತಸಗೊಳ್ಳುವನೆ? ಮನುಷ್ಯನು ಅನ್ಯಧರ್ಮಿಯ ಮೇಲೆ ಹಿಂಸೆಯನ್ನೂ ದ್ವೇಷವನ್ನೂ ಪ್ರದರ್ಶಿಸಬೇಕೆಂದು ಇದುವರೆಗೆ ಅವತರಿಸಿರುವ ಯಾವ ಮತಸ್ಥಾಪಕರೂ ನುಡಿದಿರುವುದಿಲ್ಲ, ಆದರ ಈ ಜಗತ್ತಿನಲ್ಲಿ ಜನರು ಧರ್ಮದ ಹೆಸರನ್ನು ಉಚ್ಚರಿಸಿ ಅನ್ಯೋನ್ಯ ಕಾದಾಡುತ್ತಲಿರುವರು. ನಮ್ಮ ದುರದೃಷ್ಟದಿಂದ ನಮ್ಮ ತಾಯ್ನಾಡಿನಲ್ಲಿ ಮತದ್ವೇಷವು ಉಲ್ಬಣಾವಸ್ಥೆಗೆ ಬಂದು ತಲುಪಿರುತ್ತದೆ. ಭಾರತಾಂಬೆಯ ಎರಡು ನೇತ್ರಗಳಂತಿರುವ ಹಿಂದೂ-ಮುಸ್ಲೀಮರು ಪರಸ್ಪರರ ವಿದ್ವೇಷದಲ್ಲಿ ಜೀವಿಸುತ್ತಲಿರುವರು. ಅಜ್ಞಾತೆಯ ಪಾಶದಲ್ಲಿ ಸಿಲುಕಿ ಕೇವಲ ಉನ್ಮತ್ತರಂತೆ ಹಲವು ಸಾರೆ ವಿವೇಕಿಗಳೆಂದೆನಿಸಿಕೊಂಡವರು ಸಹಾ ವರ್ತಿಸುತ್ತಲಿರುವರು, ಆದರೆ ಭಾರತ ವರ್ಷವು ಅಭ್ಯುನ್ನತೆಯನ್ನು ಹೊಂದಬೇಕಾದರೆ, ಈ ಎರಡು ವರ್ಗಗಳೂ ಮೈತ್ರಿಯಲ್ಲಿರಬೇಕಾದುದು ಅತ್ಯಾವಶ್ಯಕವಾಗಿದೆ. ಆ ಪಾವನ ಮುಹೂರ್ತವು ಬೇಗನೆ ಪ್ರಾಪ್ತವಾಗಲಿ, ಎಂಬುದೇ ನನ್ನ ಹಾರೈಕೆಯು!

ಶಿವಪುರದಲ್ಲಿ ವಿನಾಯಕ ಹಬ್ಬದ ದಿನ ಆವಿರ್ಭವಿಸಿದ ಈ ಗಲಭೆಯನ್ನು ಸಾಧನಕುಟೀರದವರು ತಿಳಿದಿರಲಿಲ್ಲ. ಈ ಅನಿಷ್ಟ ಸಂಭವವು ನಡೆದ ರಾತ್ರಿಯಲ್ಲಿಯೂ ಎಂದಿನಂತೆ ತನ್ನ ಆಶ್ರಮದಲ್ಲಿ ನಳಿನೀರಂಜನನು ತನ್ನ ಶಿಷ್ಯ ಮಂಡಲಿಗೆ ಉಪದೇಶಗಳನ್ನು ನೀಡುತ್ತಲಿದ್ದನು. ಮೌನವನ್ನವಲಂಬಿಸಿ ಶಿಷ್ಯರು ಅವನ ವಚನ ಪಿಯೂಷವನ್ನು ಆಸ್ವಾದಿಸುತ್ತಲಿದ್ದರು. ಆಗ ಅಲ್ಲಿನ ಶಾಂತತೆಯ ವಾತಾವರಣವನ್ನು ಗ್ರಾಮವಾಸಿಯೊಬ್ಬನು ಬಂದು ಭಂಗಪಡಿಸಿದನು. ಅವನು ಉದ್ವೇಗಭರಿತನಾಗಿದ್ದನು. ಅವನ ತೋಳಿನ ಮೇಲೆ ಕತ್ತಿಯಿಂದ ಆದ ಒಂದು ಗಾಯವಿದ್ದಿತು. ಗಾಯದಿಂದ ನೆತ್ತರು ಹರಿದು ಅವನು ಧರಿಸಿರುವ ಜುಬ್ಬವನ್ನು ನೆನೆಯುವಂತೆ ಮಾಡಿದ್ದಿತು. ಅವನು ತನ್ನ ತೋಳಿನ ಮೇಲೆ ಆಗಿರುವ ಗಾಯವನ್ನು ನಳಿನೀರಂಜನನಿಗೆ ತೋರಿಸುತ್ತ ಅಂದನು:—"ಮಹಾಶಯರೇ! ನನಗೆ ಈ ದುರವಸ್ಥೆಯು ಬಂದಿತು!"

ನಳಿನೀರಂಜನನು ಆಘಾತವನ್ನು ಹೊಂದಿ ಆಶ್ರಮದೊಳಗೆ ಪ್ರವೇಶಿಸಿದ ಆ ಗ್ರಾಮವಾಸಿಯನ್ನು ದರ್ಶಿಸಲು, ತನ್ನ ನುಡಿಗಳನ್ನು ಸಾಕು ಮಾಡಿದನು. ಎಲ್ಲರ ವದನಗಳಲ್ಲಿಯೂ ಭಯ ಮತ್ತು ಪರಿಭ್ರಮ ಇವುಗಳು ನರ್ತಿಸುತ್ತಲಿದ್ದವು. ಯಾರ ತುಟಿಗಳಿಂದಲೂ ನುಡಿಗಳು ಹೊರಬೀಳಲಿಲ್ಲ.

'ಏನಾಯಿತು?' ಎಂದೆಂದು ಅಂತ್ಯದಲ್ಲಿ ಸಾಧನಕುಟೀರದ ಆಚಾರ್ಯನೇ ಆ ನಿಲಯದಲ್ಲಿ ವ್ಯಾಪಿಸಿದ್ದ ಶಾಂತತೆಯನ್ನು ಭಂಜಿಸಿದನು.

"ಮಸೀದಿಯ ಮುಂದೆ ಭಯಂಕರವಾದ ಗಲಭೆಯು ನಡೆಯುತ್ತಲಿದೆ! ಇಲ್ಲಿ ನೋಡಿರಿ: ಅವರು ನನ್ನ ತೋಳನ್ನು ಕತ್ತರಿಸಿದರು!"

"ಏಕೆ ಈ ಗಲಭೆ?"

"ಈ ದಿನ ವಿನಾಯಕ ಹಬ್ಬವಷ್ಟೆ? ನಾವು ಮೆರವಣಿಗೆಯನ್ನು ಜರುಗಿಸಿದೆವು. ಮಸೀದಿಯ ಮುಂದೆ ವಾದ್ಯಘೋಷಗಳನ್ನು ಮಾಡಕೂಡದೆಂದು ಮುಸ್ಲೀಮರು ತಡೆದರು. ಅವರ ನುಡಿಗಳನ್ನು ನಾವು ಕೇಳಲಿಲ್ಲ. ನಮ್ಮೊಡನೆ ಅವರು ಜಗಳಕ್ಕೆ ಬಂದರು. ಈಗ ಅಲ್ಲಿ ಭಯಂಕರ ಹೋರಾಟವು ನಡೆಯುತ್ತಲಿದೆ."

ನಿರಾಶೆಯ ಹಾಗು ಕರುಣೆಯ ಕಿರಣಗಳು ಸಾಧನ ಕುಟೀರದ ಆಚಾರ್ಯನ ಆನನದಲ್ಲಿ ಹೊಳೆದುವು. ಅವನು ತನ್ನ ದರ್ಶನೇಂದ್ರಿಯಗಳನ್ನು ಶಿಷ್ಯಮಂಡಲಿಯ ಬಳಿಗೆ ಚಲಿಸಿದನು. "ನಾವು ಇಲ್ಲಿಯ ಜನರನ್ನು ಪ್ರಬುದ್ಧರನ್ನಾಗಿ ಮಾಡಲು ಜರುಗಿಸಿದ ಉದ್ಯಮಗಳು ವ್ಯರ್ಥವಾದುವು. ವರ್ಗವಿದ್ವೇಷದಿಂದ ಉನ್ಮತ್ತರಾಗಿ ನರವಧೆಯಲ್ಲಿ ನಿರತರಾದ ಜನರ ಈ ಭಯಂಕರ ಅವಿವರ್ತನೆಯನ್ನು ಯಾವ ರೀತಿಯಿಂದಲಾದರೂ ನಾವು ನಿವಾರಿಸಲೇ ಬೇಕು. ಆದುದರಿಂದ ನೀವೆಲ್ಲರೂ ಗಲಭೆಯು ನಡೆಯುತ್ತಿರುವ ಪ್ರದೇಶಕ್ಕೆ ತೆರಳಿ, ಅದನ್ನು ನಿವಾರಿಸಲು ಯತ್ನಿಸಿರಿ ನೆತ್ತರ ನದಿಯ ಪ್ರವಾಹಕ್ಕೆ ಅವಕಾಶವನ್ನು ಕೊಡದೆ, ಈ ವರ್ಗದ್ವೇಷದ ಬೆಂಕಿಯನ್ನು ನಂದಿಸುವದು ನಮ್ಮ ಕರ್ತವ್ಯವಾಗಿದೆ. ನಾನಂತೂ ಗಾಯವನ್ನು ಹೊಂದಿದ ಈ ಬಡಪಾಯಿಗೆ ಯೋಗ್ಯವಾದ ವೈದ್ಯಚಿಕಿತ್ಸೆಯನ್ನು ನೀಡಿ, ನಂತರ ಅಲ್ಲಿಗೆ ಬಂದು ತಲುಪುತ್ತೇನೆ."

ಆಚಾರ್ಯನ ತುಟಿಗಳಿಂದ ಈ ನುಡಿಗಳು ಹೊರಬಿದ್ದುದೇ ತಡ, ಶಿಷ್ಯರು ಗಲಭೆಯು ಜರುಗುತ್ತಲಿರುವ ಪ್ರದೇಶಕ್ಕೆ ಗಮಿಸಿದರು. ಆ ಶಿಷ್ಯವೃಂದದಲ್ಲಿ ಒಬ್ಬನು ನಮ್ಮ ಸುಧಾಂಶುವಾಗಿದ್ದನೆಂಬುದನ್ನು ಇಲ್ಲಿ ಹೇಳಬೇಕಾದುದಿಲ್ಲ. ಗಾಯಪಡೆದು ಬಂದಿರುವ ಗ್ರಾಮವಾಸಿಗೆ ಆವಶ್ಯವಾದ ಪ್ರಥಮ ಚಿಕಿತ್ಸೆಗಳನ್ನು ನೀಡುವುದರಲ್ಲಿ ನಳಿನೀರಂಜನನು ನಿರತನಾದನು ಪರಹಿತಸಾಧನೆಯೇ ಆ ಮಹಾನುಭಾವನ ಧ್ಯೇಯವಾಗಿದ್ದುದರಿಂದ, ಆ ಕೆಲಸದಲ್ಲಿ ಆವನಿಗೆ ಯಾವ ಬೇಸರವೂ ಇರಲಿಲ್ಲ. ಓರ್ವ ನರಜೀವಿಗೆ ತನ್ನ ಕೈಲಾದ ಸಹಾಯವನ್ನು ಮಾಡಲು ಅವಕಾಶವು ಲಭಿಸಿದುದಕ್ಕೆ ಅವನು ಅತ್ಯಂತ ಸಂತುಷ್ಟನಾದನು

ಸುಧಾಂಶುವು ತನ್ನ ಗೆಳೆಯರೊಡನೆ ಮಸೀದಿಯ ಬಳಿಗೆ ತೆರಳಿದನು. ಪ್ರಚಂಡವಾದ ಒಂದು ಕಾಳಗವು ಅಲ್ಲಿ ನಡೆಯುತ್ತಿರುವುದು ಅವನಿಗೆ ದೃಗ್ಗೋಚರವಾಯಿತು. ಜನರು ನರಹತ್ಯೆಯನ್ನು ಮಾಡುವದರಲ್ಲಿ ನಿರತರಾಗಿದ್ದರು. ಹೆಂಗಸರು ಮತ್ತು ಮಕ್ಕಳು ಪ್ರಾಣಭಯದಿಂದ ಕರುಣಾಜನಕವಾಗಿ ಅಳುತ್ತಿದ್ದರು, ಆದರೆ ಕಲಹನಿರತರಾದ ಆ ಜನರಿಗೆ ಆ ಬಡಪಾಯಿಗಳನ್ನು ವಿಪತ್ತುಗಳಿಂದ ಸಂರಕ್ಷಿಸಬೇಕೆಂಬ ಬುದ್ಧಿಯು ತೋರಲಿಲ್ಲ. ಅವರು ತಮ್ಮ ಶ್ರದ್ಧೆಯನ್ನೆಲ್ಲಾ ಪ್ರತಿಪಕ್ಷದವರನ್ನು ಹಿಂಸಿಸುವುದರಲ್ಲಿ ಪತಿಸಿದ್ದರು. ಕೆಲವರು ತಲೆಯೊಡೆದು ನೆಲದ ಮೇಲೆ ಪತಿಸುತ್ತಲಿದ್ದರು. ಹೋರಾಟವು ಒಂದೇಸವನೆ ಸಾಗುತ್ತಿದ್ದಿತು.

ಈ ಸಂದರ್ಭದಲ್ಲಿ ಸುಧಾಂಶುವೂ ಅವನ ಗೆಳೆಯರೂ ಅಲ್ಲಿಗೆ ಬಂದು ತಲುಪಿ ದರು. ಅವನು ಜನರನ್ನು ಮೃದುಸ್ವರದಲ್ಲಿ ಪ್ರಶ್ನಿಸಿದನು:—"ನೀವೆಲ್ಲರೂ ಈ ರೀತಿ ಬಡೆದಾಡುತ್ತೀರುವದೇಕೆ?"

"ನಮ್ಮ ಧರ್ಮದ ಸಲುವಾಗಿ!" "ನಮ್ಮ ದೇವರ ಸಲುವಾಗಿ!"

"ಮನುಷ್ಯನು ತನ್ನ ಬಾಂಧವನಾದ ಇನ್ನೊಂದು ನರಜೀವಿಯನ್ನು ಕೊಲ್ಲುವದ ರಿಂದ ಧರ್ಮವು ತಿಳಿದಂತಾಗುವದೇ? ತನ್ನ ಮಕ್ಕಳು ಈ ರೀತಿ ಹೋರಾಡಿ ನೆತ್ತರ ನದಿಯನ್ನು ಹರಿಸುವದನ್ನು ಕಂಡು ದೇವರು ಮೆಚ್ಚುವನೇ?" ಎಂದು ಸುಧಾಂಶುವು ಗಲಭೆಗಾರರನ್ನು ಶಾಂತಿಗೊಳಿಸುವದಕ್ಕಾಗಿ ನುಡಿದನು. ಆದರೆ ಅವರಲ್ಲಿ ಹರಡಿದ್ದ ದ್ವೇಷಭಾವವು ಕಡಿಮೆಯಾಗಲಿಲ್ಲ. ಅವನ ನುಡಿಗಳನ್ನು ಜನರು ಕಿವಿಗಳಿಗೆ ಹಾಕಿ ಕೊಳ್ಳಲಿಲ್ಲ. ಹೆಂಗಸರು-ಮಕ್ಕಳೆನ್ನದೆ ಅವರು ಎಲ್ಲರ ಮೇಲೆಯೂ ಕೈಮಾಡಲಾರಂಭಿ ಸಿದರು.

ಸಾಧನಕುಟೀರದ ನಿವಾಸಿಗಳು ಈ ಗಲಭೆಯ ಪ್ರದೇಶದಿಂದ ಹೆಂಗಸರು-ಮಕ್ಕ ಳನ್ನು ಒಯ್ದು ಸುರಕ್ಷಿತರನ್ನಾಗಿ ಮಾಡುವ ಕೃತ್ಯಗಳಲ್ಲಿ ನಿರತರಾದರು. ಅದು ಅತ್ಯಂತ ಪ್ರಧಾನವಾದ ಒಂದು ಕೆಲಸವಾಗಿದ್ದಿತು. ಗಲಭೆಗಾರರು ತಮ್ಮ ಆಲೋಚನಾಶಕ್ತಿ ಯನ್ನು ಕಳೆದುಕೊಂಡುದರಿಂದ ಅಬಲೆಯರ ಮೇಲೆ ಬೀಳತೊಡಗಿದರು. ಆಶ್ರಮ ವಾಸಿಗಳ ಈ ಕೃತ್ಯವು ತಕ್ಕಮಟ್ಟಿಗೆ ಯಶಸ್ವಿಯಾಯಿತೆಂದು ನುಡಿಯಬಹುದು. ಹಲವು ಮಂದಿ ಹೆಂಗಸರನ್ನೂ ಮಕ್ಕಳನ್ನೂ ನಳಿನೀರಂಜನನ ಶಿಷ್ಯರು ವಿಪತ್ತು ಗಳಿಂದರಕ್ಷಿಸಿದರು. ಹಲವರು ಗಾಯಹೊಂದಿದವರಾಗಿ, ಭೂಮಿಯಲ್ಲಿ ಬಿದ್ದು ನರಳುತ್ತಿದ್ದರು. ಅವರನ್ನಾದರೂ ಸುರಕ್ಷಿತವಾದ ಒಂದು ಸ್ಥಳಕ್ಕೆ ಒಯ್ದು ಅವರಿಗೆ ವೈದ್ಯನು ಶುಷ್ರೂಷೆಯನ್ನು ನೀಡುವದು ಅತ್ಯಾವಶ್ಯಕವೆಂದರು. ಆಶ್ರಮವಾಸಿಗಳು ಗಲಭೆಗಾರರಿಂದ ತಮಗೆ ಸಿದ್ಧಿಸಬಹುದಾದ ವಿಪತ್ತುಗಳನ್ನೂ ಸಹ ಲಕ್ಷಿಸದೆ, ಗಾಯ ಹೊಂದಿದವರನ್ನು ಗಲಭೆಯ ಪ್ರದೇಶದಿಂದ ದೂರಕ್ಕೆ ಒಯ್ದು ವೈದ್ಯಸಹಾಯವನ್ನು ನೀಡಿದರು.

ಜನರು ಶಾಂತರಾಗಲಿಲ್ಲ. ಸುಧಾಂಶುವು ಹಲವು ರೀತಿಗಳಲ್ಲಿ ಅವರನ್ನು ಸಮಾಧಾನಗೊಳಿಸಿ ನರಹತ್ಯೆಯನ್ನು ನಿಲ್ಲಿಸಲು ಪ್ರಯತ್ನಿಸಿದನು, ಆದರೆ ಅವನ ಪ್ರಯತ್ನವು ವಿಫಲವಾಯಿತು. ಈ ಜನರ ಗುಂಪಿನಲ್ಲಿ ಸಿಲುಕಿದ ಒಬ್ಬ ಎಂಟು ವರ್ಷದ ಬಾಲಕನು ಚೀರುತ್ತಿದ್ದನು; ಆದರೆ ಅವರು ಆ ಬಾಲಕನನ್ನು ಲಕ್ಷ್ಯಕ್ಕೆ ತಾರದೆ ಅವನನ್ನು ತುಳಿಯುತ್ತ ಕಾದುತ್ತಿದ್ದರು. ಆ ಹಸುಳೆಯು ಏನು ಮಾಡ ಬಲ್ಲದು? ಗುಂಪಿನ ಕಾಲುಗಳ ಅಡಿಯಲ್ಲಿ ಸಿಲುಕಿ ಸಾಯಬೇಕಾದ ಪ್ರಸಂಗವು ಬಂದೊದಗುತ್ತಲಿದ್ದಿತು. ಆ ಹಸುಳೆಯ ಸಂಕಟವನ್ನು ಜನರನ್ನು ಶಾಂತಗೊಳಿಸಲು ಪ್ರಯತ್ನಿಸುತ್ತಲಿದ್ದ ಸುಧಾಂಶುವು ಅವಲೋಕಿಸಿದನು. ಅವನು ಮರುಕಗೊಂಡು, ಆ ಶಿಶುವನ್ನು ರಕ್ಷಿಸುವದಕ್ಕಾಗಿ ಜನರ ಗುಂಪಿನ ಮಧ್ಯಕ್ಕೆ ಧುಮುಕಿದನು. ಅನಂತರ

ಅಲ್ಲಿ ನೆರೆದಿರುವ ಜನರ ನಡುವೆ ದಾರಿಯನ್ನು ಬಿಡಿಸಿಕೊಂಡು ಆ ಬಾಲಕನಿದ್ದಲ್ಲಿಗೆ ತೆರಳಿದನು; ಹಾಗು ಜನರ ಕಾಲಡಿಗಳಲ್ಲಿ ಸಿಲುಕಿದ ಆ ಮಗುವನ್ನು ಎತ್ತಿಕೊಂಡು ಸುಧಾಂಶುವು ಮರಳಿದನು.

ಒಬ್ಬ ಮುಸ್ಲೀಂ ಗಲಭೆಗಾರನು ತನ್ನ ಕರದಲ್ಲಿ ಚೂರಿಯನ್ನು ಹಿಡಿದುಕೊಂಡು ಸುಧಾಂಶುವಿಗೆ ಇದಿರು ಬಂದನು. ಸುಧಾಂಶುವು ಅವನಿಗೆ ಯಾವ ಕೇಡನ್ನೂ ಬಗೆದವನಾಗಿರಲಿಲ್ಲ, ಆದರೆ ಮದಾಂಧತೆಯಿಂದ ಕೂಡಿದ ಆ ಇಸ್ಲಾಂ ಧರ್ಮಾನುಯಾಯಿಯು ಸುಧಾಂಶುವನ್ನು ಕೊಲ್ಲುವದಕ್ಕಾಗಿ ತನ್ನ ಹಸ್ತದಲ್ಲಿರುವ ಚೂರಿಯನ್ನು ಹಿರಿದನು. ಇನ್ನೇನು ಸುಧಾಂಶುವಿನ ಎದೆಯನ್ನು ಸೀಳಬೇಕು! ತನ್ನ ಎದೆಯನ್ನು ಬಗೆಯುವದಕ್ಕಾಗಿ ಎದುರಿಗೆ ನಿಂತಿರುವ ಆ ಗಲಭೆಗಾರನನ್ನು ಕಂಡು ಸುಧಾಂಶುವು ಬೆದರಲಿಲ್ಲ. ಅವನು ಈ ರೀತಿ ನುಡಿದನು—"ನನ್ನನ್ನು ಕೊಲ್ಲುವದರಿಂದ ನಿನ್ನ ಮನಸ್ಸಿಗೆ ಹರ್ಷವಾಗುವುದಾದರೆ ನನ್ನನ್ನು ವಧಿಸು! ನೀನು ನನ್ನ ನೆತ್ತರನ್ನು ಹೀರಲು ಉದ್ಯುಕ್ತನಾಗಿದ್ದರೂ ನಾನು ನಿನಗೆ ಹಿಂಸೆಯನ್ನು ಬಯಸಲಾರೆನು; ಆದರೆ ಏನನ್ನೂ ತಿಳಿಯದ ಈ ಹಸುಳೆಯನ್ನು ಕೊಲ್ಲಲು ನೀನು ಮಾತ್ರ ಉದ್ಯುಕ್ತನಾಗಬೇಡ. ನನ್ನನ್ನು ನೀವಿಲ್ಲಿ ವಧಿಸುವದರಲ್ಲಿ ಚಿಂತೆಯಿಲ್ಲ; ಅದರೊಡನೆಯೇ ಈ ಭೀಷಣ ನರಹತ್ಯೆಯನ್ನು ಸಾಕುಮಾಡಿರಿ! ನನ್ನನ್ನು ಬಲಿಯಾಗಿ ತೆಗೆದುಕೊಂಡ ನಂತರ ನಿಮ್ಮಲ್ಲಿರುವ ಮತವಿದ್ವೇಷವೆಂಬ ಬೆಂಕಿಯು ಶಾಂತವಾಗಲಿ!"

ಇನ್ನೇನು ಚೂರಿಯು ಬಂದು ಸುಧಾಂಶುವಿನ ಎದೆಯನ್ನು ಸೀಳಬೇಕು! ದೂರದಲ್ಲಿದ್ದ ಆಶ್ರಮವಾಸಿಗಳು ತಮ್ಮ ಗೆಳೆಯನಿಗೆ ಬಂದೊದಗಿದ ವಿಪತ್ತನ್ನು ಅವಲೋಕಿಸಿ ಅವನನ್ನು ರಕ್ಷಿಸುವದಕ್ಕಾಗಿ ಓಡಿಬರುತ್ತಲಿದ್ದರು. ಸುಧಾಂಶುವೆಂದರೆ ಅವರೆಲ್ಲರಿಗೂ ಅಚ್ಚುಮೆಚ್ಚಿನವನಾಗಿದ್ದನು. ವಿವೇಕವಿಲ್ಲದ ಆ ಮುಸ್ಲೀಮನು ತನ್ನ ಕತ್ತಿಯನ್ನು ಪ್ರಯೋಗಿಸಿದನು. ಅಷ್ಟರಲ್ಲಿ ಎಲ್ಲಿಂದಲೋ ಒಂದು ವ್ಯಕ್ತಿಯು ಓಡಿ ಬಂದು ಸುಧಾಂಶುವನ್ನು ತಬ್ಬಿಕೊಂಡಿತು. ಮುಸ್ಲೀಮನು ಪ್ರಯೋಗಿಸಿದ ಕತ್ತಿಯು ಸುಧಾಂಶುವಿಗೆ ತಗುಲದೆ, ಅವನನ್ನು ತಬ್ಬಿಕೊಂಡಿರುವ ಆ ಅಪರಿಚಿತ ವ್ಯಕ್ತಿಯ ಬೆನ್ನಿನೊಳಗೆ ಪ್ರವೇಶಿಸಿತು. ಭಯಂಕರವಾದ ಒಂದು ಗಾಯವು ಆ ಬಡವಾಯಿಯ ಬೆನ್ನಿನ ಮೇಲಾಗಿ, ನೆತ್ತರು ಧಾರೆಧಾರೆಯಾಗಿ ಪ್ರವಹಿಸತೊಡಗಿತು!

ತನ್ನ ಪ್ರಾಣವನ್ನು ಸಹ ಲೆಕ್ಕಿಸದೆ ತನ್ನನ್ನು ರಕ್ಷಿಸಲು ಉದ್ಯುಕ್ತನಾದ ಆ ವ್ಯಕ್ತಿ ಯಾರೆಂಬುದನ್ನು ತಿಳಿಯಲು ಸುಧಾಂಶುವು ಉತ್ಸುಕನಾದನು. ಅವನು ಗಾಯಗೊಂಡು ನೆಲದಲ್ಲಿ ಬಿದ್ದಿರುವ ಆ ಪುರುಷನ ಮೊಗವನ್ನು ನೋಡಿದನು. ಅವನು ಕೆಲವು ದಿನಗಳಿಂದ ಶಿವಪುರದ ಬೀದಿಯಲ್ಲಿ ಅಲೆಯುತ್ತಿದ್ದ ಒಬ್ಬ ಹುಚ್ಚನಾಗಿರುವನೆಂಬದನ್ನು ಸುಧಾಂಶುವು ತಿಳಿದನು. ತನ್ನ ಪ್ರಾಣವನ್ನು ರಕ್ಷಿಸಲು ಈ ರೀತಿ ಪರರನ್ನು ಬಲಿಯರ್ಪಿಸಲು ಒಬ್ಬ ಹುಚ್ಚನನ್ನು ಪ್ರೇರೇಪಿಸಿದ ಶಕ್ತಿಯಾವುದೆಂಬುದಾಗಿ ನೆನೆದು ಸುಧಾಂಶುವು ಆಶ್ಚರ್ಯಪಟ್ಟನು.

ನಳಿನೀರಂಜನನು ಅಲ್ಲಿಗೆ ಬಂದನು. ತನ್ನ ಚಾತುರ್ಯದಿಂದಲೂ ತನ್ನ ಶಿಷ್ಯರ ಸಹಾಯದಿಂದಲೂ ಗಲಭೆಯನ್ನು ಶಾಂತಗೊಳಿಸಲು ಅವನು ಯತ್ನಿಸಿದನು. ಕೆಲವು ತಾಸುಗಳ ಅನಂತರ ನಳಿನೀರಂಜನನ ಉದ್ಯಮಗಳಿಂದ ಗಲಭೆಯು ಶಾಂತ ವಾಯಿತು. ಆಶ್ರಮವಾಸಿಗಳು ಹುಚ್ಚನನ್ನೂ, ಗಾಯಗೊಂಡ ಇತರರನ್ನೂ ಚಿಕಿತ್ಸೆ ಮಾಡುವದಕ್ಕಾಗಿ ಸಾಧನಕುಟೀರಕ್ಕೆ ಕರೆದುಕೊಂಡು ಹೋದರು. ಹರ್ಷದಿಂದ ಕೂಡಿದ್ದ ಆ ವಿನಾಯಕ ಹಬ್ಬವು ಒಂದು ಭಯಂಕರ ನರಹತ್ಯೆಯಲ್ಲಿ ಅಂತ್ಯ ವಾಯಿತು!

——

## ೨೧ ಪಾಪಿಯ ಪಶ್ಚಾತ್ತಾಪ!

ಸಾಧನ ಕುಟೀರ; ಹಲವು ಜನ ರೋಗಿಗಳು ಅಲ್ಲಿ ನೆರೆದು ಆಶ್ರಮವಾಸಿಗಳು ನೀಡುತ್ತಿರುವ ವೈದ್ಯಶುಶ್ರೂಷೆಯನ್ನು ಪಡೆಯುತ್ತಿದ್ದರು. ಹಿಂದಿನ ರಾತ್ರಿ ನಡೆದ ಭಯಂಕರ ವರ್ಗೀಯ ಕಲಹದಲ್ಲಿ ಭಾಗವನ್ನು ವಹಿಸಿದವರು ಅಲ್ಲಿಗೆ ಬಂದು ತಮ ಗಾದ ಗಾಯಗಳಿಗೆ ಅವಶ್ಯವಿರುವ ಚಿಕಿತ್ಸೆಯನ್ನು ಪಡೆಯುತ್ತಿದ್ದರು. ಪರಹಿತ ಸಾಧ ನವೇ ತಮ್ಮ ಆದರ್ಶವೆಂದು ಬಗೆದಿರುವ ಆಶ್ರಮವಾಸಿಗಳು ಯಾವ ಬೇಸರವೂ ಇಲ್ಲದೆ ಅವರೆಲ್ಲರ ಚಿಕಿತ್ಸೆ ಮಾಡುತ್ತಲಿದ್ದರು.

ಆಶ್ರಮದ ಒಂದು ಮೂಲೆಯಲ್ಲಿ ರೋಗಿಯೊಬ್ಬನು ಪವಡಿಸಿದ್ದನು. ಅವನಿಗಿನ್ನೂ ಪ್ರಜ್ಞೆಯು ಉಂಟಾಗಿರಲಿಲ್ಲ. ಬೆನ್ನಿನ ಮೇಲೆ ಕಟ್ಟಿರುವ ಒಂದು ವಸ್ತ್ರದಿಂದ ಅವ ನಿಗೆ ಭಯಂಕರವಾದ ಒಂದು ಗಾಯವಾಗಿದೆ ಎಂಬುದನ್ನು ತಿಳಿದುಕೊಳ್ಳಬಹುದು. ಅವನು ಒಂದು ಮರದ ಕೊರಡಿನಂತೆ ಬಿದ್ದಿರುವನು. ಅವನ ದೇಹವು ಬೆಂಕಿಯಂತೆ ತಪ್ತವಾಗಿದೆ. ಸುಧಾಂಶುವು ರೋಗಿಯ ಹಾಸಿಗೆಯ ಬಳಿಯಲ್ಲಿ ಕುಳಿತು ಅವನನ್ನು ಶುಶ್ರೂಷಿಸುತ್ತಲಿದ್ದನು. ರೋಗಿಯ ಆಗಿನ ಪರಿಸ್ಥಿತಿಯು ಸುಧಾಂಶುವನ್ನು ಚಿಂತಾ ಕುಲನನ್ನಾಗಿ ಮಾಡಿದ್ದಿತು. ಆ ರೋಗಿಯು ಹಿಂದಿನ ರಾತ್ರಿ ನಡೆದ ಗಲಭೆಯಲ್ಲಿ ಸುಧಾಂಶುವಿನ ಪ್ರಾಣವನ್ನು ರಕ್ಷಿಸಿದ ಹುಚ್ಚನಾಗಿದ್ದನು.

ಸಮಯವು ಗತಿಸಿತು, ರೋಗಿಯು ಕಂಗಳನ್ನು ತೆರೆದು ಎಚ್ಚತ್ತನು. ಸುಧಾಂ ಶುವು ಸಮೀಪದಲ್ಲಿದ್ದ ಬಟ್ಟಲಿನಿಂದ ಹಾಲನ್ನು ರೋಗಿಯ ಗಂಟಲೊಳಗೆ ಹೊಯ್ದನು. ಉದರದೊಳಗೆ ಹಾಲು ಪ್ರವೇಶಿಸಲು ರೋಗಿಗೆ ಮಾತಾಡುವ ಚೈತನ್ಯವು ಬಂದಿತು. ಅವನು ನಡುಗುತ್ತಿರುವ ತನ್ನ ತುಟಿಗಳನ್ನು ತೆರೆದು ಹೇಳಿದನು — "ನಾನು ಒಬ್ಬ ಪಾಪಿಯು; ನನ್ನನ್ನು ಬದುಕಿಸಲು ಏಕೆ ಪ್ರಯತ್ನಿಸುತ್ತೀರಿ?" ಎಂಬುದಾಗಿ.

"ನೀನು ಮಾತಾಡಬೇಡ; ಬಹಳ ಬಳಲಿರುತ್ತೀಯೆ." ಎಂದು ಸುಧಾಂಶುವು ಅಂದನು. ಅವನ ನಿರ್ಬಂಧದ ಮೂಲಕ ರೋಗಿಯು ಮಾತಾಡಲಿಲ್ಲ. ರೋಗಿ ಗುಂಟಾದ ಆ ಭಯಂಕರ ಗಾಯದಿಂದ ಅವನೆಲ್ಲಿ ಮೃತನಾಗುವನೋ? ಎಂಬ ಭೀತಿಯು

ಸುಧಾಂಶುವಿಗಿದ್ದಿತು. ರೋಗಿಗೆ ಪರಿಪೂರ್ಣವಾದ ವಿಶ್ರಾಮವು ಅವಶ್ಯವಾಗಿದೆಯೆಂದೂ, ಆದುದರಿಂದ ಅವನನ್ನು ಮಾತಾಡಬಿಡಕೂಡದೆಂದೂ ಸುಧಾಂಶುವಿಗೆ ವೈದ್ಯನು ಉಪದೇಶಿಸಿದ್ದನು. ಅದರಂತೆಯೇ ರೋಗಿಯು ಮಾತಾಡಲು ಪ್ರಯತ್ನಿಸಿದಾಗ ಸುಧಾಂಶುವು ಅವನನ್ನು ತಡೆದನು.

ದಿನಗಳೆರಡು ಗತಿಸಿದವು, ಹುಚ್ಚನ ಕಾಹಿಲೆಯು ಸ್ವಲ್ಪ ವಾಸಿಯಾಯಿತು. ಬೆನ್ನಿನ ಮೇಲಿನ ಗಾಯವು ಮಾಯತೊಡಗಿತು. ಅವನು ಮಾತಾಡುವದಕ್ಕೂ ಹಾಸಿಗೆಯಲ್ಲಿ ಎದ್ದು ಕುಳಿತುಕೊಳ್ಳುವದಕ್ಕೂ ಶಕ್ತನಾದನು. ಆ ದಿನ ಸಂಜೆಯಲ್ಲಿ ತನ್ನನ್ನು ಶುಶ್ರೂಷೆ ಮಾಡುತ್ತಿರುವ ಸುಧಾಂಶುವಿನೊಡನೆ ದೈನ್ಯಸ್ವರದಲ್ಲಿ ಹೀಗೆ ನುಡಿದನು:—'ರಾಯರೆ, ನಾನು ಮಹಾ ಪಾಪಿಯು.'

"ಅದೇಕೆ ನುಡಿಯುತ್ತಿರುವೆ ಈ ರೀತಿ?"

"ಹಲವರಿಗೆ ಕೇಡುಗಳನ್ನು ಬಗೆದ ಕರ್ಮಗಳ ಫಲವಾಗಿ ನಾನು ಈ ಸ್ಥಿತಿಗೆ ಬಂದೆನು. ಈ ಜೀವನಕ್ಕೆ ಹೇಸಿ, ಅಂತ್ಯದಲ್ಲಿ ತಮ್ಮ ಜೀವರಕ್ಷಣೆಗಾಗಿ ಈ ದೇಹವನ್ನು ವಿನಿಯೋಗಿಸಬೇಕೆಂದಿದ್ದೆನು."

ಇಲ್ಲಿ ಒಂದು ಆಶ್ಚರ್ಯವೇನಂದರೆ, ಇದುವರೆಗೆ ಹುಚ್ಚನಾಗಿ ಚಿತ್ತಚಾಂಚಲ್ಯದಿಂದ ಭಿಕಾರಿಯಂತೆ ಅಲೆಯುತ್ತಿದ್ದ ಆ ಮನುಷ್ಯನು ಕಾಹಿಲೆಯಿಂದ ಏಳುವಾಗ ಅವನಲ್ಲಿರುವ ಹುಚ್ಚು ಪರಿಪೂರ್ಣವಾಗಿ ಮಾಯವಾಗಿದ್ದಿತು. ಉನ್ಮಾದದ ಯಾವ ಲಕ್ಷಣಗಳೂ ಅವನ ನುಡಿಗಳಲ್ಲಾಗಲೀ ಹಾವ ಭಾವಗಳಲ್ಲಾಗಲೀ ಗೋಚರವಾಗುತ್ತಿದ್ದಿಲ್ಲ. ಚಿತ್ತ ಸ್ವಾಧೀನವಿರುವ ಒಬ್ಬ ಮನುಷ್ಯನಂತೆ ಅವನು ಮಾತಾಡುತ್ತಿದ್ದನು.

"ಅದೇಕೆ ಹಾಗೆ ಹೇಳುತ್ತಿರುವೆ? ಈ ನಿನಗೆ ಜೀವನದಲ್ಲಿ ಅಷ್ಟು ಜಿಗುಪ್ಸೆಯು ಹುಟ್ಟಲು ಕಾರಣಗಳಾದರೂ ಏನು?"

"ಪಾಪಕೃತ್ಯಗಳಿಂದ ನಾನು ನನ್ನ ಆತ್ಮವನ್ನು ಕೆಡಿಸಿಕೊಂಡೆನೆಂದು ಮಾತ್ರವಲ್ಲ; ಸುಖ-ಸಂತೋಷಗಳಿಂದ ಬಾಳುತ್ತಿರುವ ಒಂದು ಕುಟುಂಬದಲ್ಲಿ ವಿಷಬೀಜವನ್ನು ಬಿತ್ತಿದೆನು. ಆ ದುಷ್ಕೃತ್ಯದ ಪರಿಣಾಮವಾಗಿ ನಾನು ಭಿಕಾರಿಯಾದೆನು."

"ನೀನು ಯಾರ ಕುಟುಂಬದಲ್ಲಿ ವಿಷವನ್ನು ಚೆಲ್ಲಿದೆ?"

"ಅದೊಂದು ದೊಡ್ಡ ಕತೆ!" "ಆದರೂ ಹೇಳು."

ತನ್ನ ದೃಷ್ಟಿಯನ್ನು ಒಂದು ಬಾರಿ ಗೋಡೆಯ ಕಡೆಗೆ ಚಲಿಸಿದ ನಂತರ ಆ ಮಾನವನು ನುಡಿದನು:—"ರಾಯರೆ, ನಾನು ಯಾರೆಂಬುದನ್ನು ತಾವು ತಿಳಿದಿರಲಿಕ್ಕಿಲ್ಲ; ಆದರೆ ತಾವು ಯಾರೆಂಬುದನ್ನು ನಾನು ಬಲ್ಲೆನು. ತಾವು ರಾಮನಗರದ ಜಮೀನದಾರರಾಗಿದ್ದ ಅನಂತರಾಯರ ಅಳಿಯಂದಿರಾಗಿರುವಿರಿ."

"ನೀನು ಯಾರು!" ಎಂದು ವಿಸ್ಮಯಭರಿತನಾಗಿ ಸುಧಾಂಶುವು ಪ್ರಶ್ನಿಸಿದದೇ

"ತಮ್ಮ ಕುಟುಂಬದಲ್ಲಿ ವಿಷವನ್ನು ಬೆರಿಸಿದ ಆ ಪಾಪಿ ವೆಂಕಟರಾಮನು ನಾನಾಗಿರುತ್ತೇನೆ! ನನ್ನ ಅಪರಾಧಗಳನ್ನು ಮನ್ನಿಸಿ."

"ವೆಂಕಟರಾಮು!"

"ಹೌದು."

ಆ ವ್ಯಕ್ತಿಯು ವೆಂಕಟರಾಮುನಾಗಿದ್ದನು. ಉನ್ಮಾದಗ್ರಸ್ತನಾಗಿ ಸ್ವಂತ ನಾಡನ್ನು ತ್ಯಜಿಸಿದ ಸರೋಜಳ ಗಂಡನು.

"ವೆಂಕಟರಾಮು, ನೀನು ನನಗೆ ಮಾಡಿದ ಕೆಡಕಾದರೂ ಯಾವದು?"

"ಸಕಲ ಅನಾಹುತಗಳಿಗೂ ನಾನೇ ಕಾರಣಭೂತನು!"

"ನಿನ್ನ ನುಡಿಗಳ ಅರ್ಥವು ಹೊಳೆಯಲೊಲ್ಲದು."

"ಹಾಗಾದರೆ ಬಿಚ್ಚಿ ಹೇಳುತ್ತೇನೆ ನನ್ನ ಜೀವನವು ಯಾವ ತರಗತಿಯದೆಂಬುದು ತಮಗೆ ತಿಳಿದ ವಿಷಯವೇ ಆಗಿರುತ್ತದೆ. ನನ್ನನ್ನು ದುರಾಚಾರಗಳಿಂದ ವಿಮೋಚಿಸಲು ತಾವು ಯಾವ ರೀತಿ ಉಪದೇಶಗಳನ್ನು ನೀಡಿ, ಕಷ್ಟಪಟ್ಟಿರಿ ಎಂಬುಹು ನನ್ನ ನೆನಪಿನಲ್ಲಿದೆ. ಅಂದು ಅಮೃತದಂತಿರುವ ತಮ್ಮ ಉಪದೇಶಗಳನ್ನು ಮನ್ನಿಸಿ, ಅವುಗಳನ್ನು ನಾನು ಅನುಸರಿಸಿದ್ದರೆ, ಈ ಅನಾಹುತಗಳಿಗೆ ಅವಕಾಶವೇ ಇರಲಿಲ್ಲ. ದುರ್ಬುದ್ಧಿಯೂ ಮದಾಂಧಕಾರಿಯೂ ಆದ ನನಗೆ ಆ ಜ್ಞಾನವು ಹೇಗೆ ಹೊಳೆಯಬೇಕು? ವಿಷಯಸುಖವೇ ಸ್ವರ್ಗವೆಂದು ನನಗೆ ಆ ದಿನಗಳಲ್ಲಿ ತೋರಿತು. ಪಾಪಪರಿಪೂರ್ಣವಾದ ಬದುಕನ್ನೇ ನಾನು ಮುಂದುವರಿಸಿದೆನು. ನನ್ನಿಂದ ಆ ಬಡ ಹುಡುಗಿ ಸರೋಜಳು ಬಹಳ ಕಷ್ಟಬಟ್ಟಳು. ಅವಳು ನನ್ನ ಕೈಹಿಡಿದ ಮಡದಿಯಾಗಿದ್ದರೂ ಅವಳೊಡನೆ ನಾನು ಪ್ರೇಮದಿಂದ ವರ್ತಿಸಲಿಲ್ಲ. ಅವಳನ್ನು ನಾನು ಪರಿಪರಿಯಾಗಿ ಪೀಡಿಸಿವೆನು."

"ನನ್ನ ತಂದೆಯು ಸಂಪಾದಿಸಿದ ಹಣವು ನನ್ನ ದುರಾಚಾರಗಳಿಂದಲೂ ವಿಲಾಸಗಳಿಂದಲೂ ಕರಗಿಹೋಯಿತು, ನಾನು ಬಡವನಾಗುತ್ತ ಬಂದೆನು, ಆದರೆ ದುರ್ನಡತೆಯನ್ನು ನಿಲ್ಲಿಸಲು ನನಗೆ ಮನಸ್ಸು ಬರಲಿಲ್ಲ. ಯಾವ ರೀತಿಯಿಂದಲಾದರೂ ವಿಷಪರಿಪೂರ್ಣವಾದ ನನ್ನ ವಿಲಾಸಮಯ ಜೀವನವನ್ನು ಮುಂದುವರಿಸಬೇಕೆಂದು ನಾನು ನಿಶ್ಚಯಿಸಿದೆನು. ಹಣವು ನನಗೆ ಅವಶ್ಯವಾಗಿದ್ದಿತು ಹಣವನ್ನು ಸಂಪಾದಿಸಲು ಯಾವ ಭಯಂಕರ ಕೃತ್ಯವನ್ನಾದರೂ ನೆರವೇರಿಸಲು ನಾನು ಹಿಂಜರಿಯಲಿಲ್ಲ. ಸ್ವಾಭಾವಿಕವಾಗಿಯೇ ನನ್ನ ದೃಷ್ಟಿಯು ತಮ್ಮ ಕುಟುಂಬದ ಮೇಲೆ ಬಿದ್ದಿತು. ಪದ್ಮಳ ಧನವನ್ನು ಅಪಹರಿಸಬೇಕೆಂದು ನಾನು ನಿರ್ಧರಿಸಿದೆನು. ಕುಟುಂಬದಲ್ಲಿ ಕಲಹ ಬೀಜವನ್ನು ಬಿತ್ತಿ ನಿಮ್ಮನ್ನು ತೊಲಗುವಂತೆ ಮಾಡಿದರೆ, ಕಾರ್ಯವನ್ನು ಸಾಧಿಸಬಹುದೆಂಬ ನಂಬಿಕೆಯು ನನಗಿದ್ದಿತು."

"ಅದು ಹೇಗೆ?"

"ತಮ್ಮನ್ನು ಮನೆಯಿಂದ ತೊಲಗಿಸಿದರೆ, ಪದ್ಮಳಿಗೆ ರಕ್ಷಕರಿಲ್ಲದಂತಾಗುವದು. ವಿಷಪ್ರಯೋಗದಿಂದ ಪದ್ಮಳಿಗೆ ಹುಚ್ಚು ಹಿಡಿಯುವಂತೆ ಮಾಡಿದರೆ, ಅವಳ ದೊಡ್ಡ ತಂದೆಯ ಮಗನು ನಾನಾಗಿರುವದರಿಂದ, ಅವಳ ಸಂಪತ್ತನ್ನು ನೋಡಿ ಸಂರಕ್ಷಿಸುವ

ಕೆಲಸವು ನ್ಯಾಯಶಾಲೆಯಿಂದ ನನಗೇ ದೊರಕುವದೆಂದು ನಾನು ನಂಬಿದ್ದೆನು; ಆದರೆ ತಮ್ಮನ್ನು ಹೇಗೆ ಗೃಹವನ್ನು ಪರಿತ್ಯಜಿಸುವಂತೆ ಮಾಡುವುದು? ಎಂಬುದನ್ನು ಕುರಿತು ನಾನು ಬಹುವಾಗಿ ಆಲೋಚಿಸಿದೆನು. ಅಂತ್ಯದಲ್ಲಿ ಒಂದು ಉಪಾಯವು ಹೊಳೆಯಿತು. ಆದನ್ನು ನಾನು ಪ್ರಯೋಗಿಸಿದೆನು, ಅದು ಯಶಸ್ವಿಯಾಯಿತು!''

''ಯಾವದು ಆ ತಂತ್ರ?''

''ತಮ್ಮಲ್ಲಿ ತಮ್ಮ ಮಡದಿಯ ಸತೀತ್ವವನ್ನು ಕುರಿತು ಸಂಶಯವು ಜನಿಸುವಂತೆ ಮಾಡುವುದರಿಂದ. ಆದರಂತೆಯೇ ಮಾಧವನು ಪದ್ಮಳಿಗೆ ಬರೆದಂತೆ ಒಂದು ಕಾಗದವನ್ನು ತಯಾರಿಸಿ ಅದನ್ನು ನಾನು ತಮ್ಮ ಕಣ್ಣಿಗೆ ಬೀಳುವಂತೆ ತಮ್ಮ ಆಫೀಸು ಕೋಣೆಯಲ್ಲಿ ಇಟ್ಟೆನು. ಆ ಪತ್ರವು ತಮ್ಮ ಕರಗತವಾಗಿ, ಆದರಲ್ಲಿರುವ ಸಂಗತಿಗಳನ್ನು ತಾವು ಓದಿ ತಿಳಿದುಕೊಳ್ಳಲು, ನನ್ನ ಊಹೆಯಂತೆ ತಾವು ಗೃಹವನ್ನು ತ್ಯಜಿಸಿದಿರಿ.''

''ಆದರೆ ಅದು ಮಾಧವನ ಹಸ್ತಾಕ್ಷರವಾಗಿದ್ದಿತಲ್ಲ!'' ಎಂದನು ಸುಧಾಂಶು.

''ಹಾಗಿದೆ ನಾನು ಹೂಡಿದ ತಂತ್ರಜಾಲ! ಅದು ಮಾಧವನ ಹಸ್ತಾಕ್ಷರವಾಗಿರುವದಿಲ್ಲ. ಮಾಧವನಲ್ಲಿ ತಮಗಿರುವ ಸ್ನೇಹವನ್ನು ಹೋಗಲಾಡಿಸುವದಕ್ಕಾಗಿ ನಾನು ಆ ಪತ್ರವನ್ನು ಸೃಷ್ಟಿಸಿದೆನು. ರಾಮನಗರದಲ್ಲಿ ಕೋರಪ್ಪ ನಾಯರ ಎಂಬುವನೊಬ್ಬನಿರುವನು. ಯಾರ ಹಸ್ತಾಕ್ಷರವನ್ನು ಬೇಕಾದರೂ ಅವನು ನಕಲಿ ಮಾಡಬಲ್ಲನು. ಅಯ್ಯೋ! ಮಾಧವನ ಹಸ್ತಾಕ್ಷರದಂತಿರುವ ಆ ಕಪಟ ಪತ್ರವನ್ನು ಸೃಷ್ಟಿಸಲು ಆ ನರಪಿಶಾಚಿಗೆ ಸಾವಿರ ರೂಪಾಯಿಗಳ ಪ್ರತಿಫಲವನ್ನು ಕೊಟ್ಟೆನು. ಆ ನನ್ನ ಕಾಗದವನ್ನು ನೋಡಿ, ಅದು ಮಾಧವನು ಬರೆದುದಾಗಿ ನಂಬಿ, ತಾವು ತಮ್ಮ ಮಡದಿ-ಮಕ್ಕಳನ್ನು ಪರಿತ್ಯಜಿಸಿ ಅನ್ಯ ಊರಿಗೆ ಬಂದಿರಿ. ಹಾಯ್! ತಮ್ಮ ಜೀವನವನ್ನೇ ನಾನು ಕ್ಲೇಶಮಯವಾಗಿ ಮಾಡಲು ಹೊರಟೆನು!''

''ವೆಂಕಟರಾಮು! ವೆಂಕಟರಾಮು! ಪದ್ಮಳು ನಿಷ್ಪಾಪಳೇ?''

''ಪಾಪ! ಅವಳು ಪರಿಶುದ್ಧಳು, ಅವಳಲ್ಲಿ ಯಾವ ದೋಷವೂ ಇರುವುದಿಲ್ಲ. ನನ್ನ ಕುಹಕತನವೇ ಈ ಅನಾಹುತಗಳಿಗೆ ಮೂಲ ಕಾರಣವು!''

''ಅಯ್ಯೋ! ನಾನೆಷ್ಟು ಅವಿವೇಕಿಯು! ನಿಷ್ಕಲಂಕಳಾದ ಮಡದಿಯನ್ನು, ಮುದ್ದುಗೂಸು ರಾಮಚಂದ್ರನನ್ನು ನಾನು ಪರಿತ್ಯಜಿಸಿದೆನಲ್ಲ! ಒಡಹುಟ್ಟಿದ ತಮ್ಮನಂತಿರುವ ಮಾಧವನನ್ನು-ನಾಡಸೇವೆಗಾಗಿ ನನ್ನೊಡನೆ ಟೊಂಕಕಟ್ಟಿರುವ ಆ ಸಂಗಾತಿಯನ್ನು ಪರಿತ್ಯಜಿಸಿದೆನಲ್ಲಾ! ನನ್ನ ಬಾಳಿನಲ್ಲಿ ಬೂದಿಯನ್ನೆರಚಿದುದರ ಮೂಲಕ ನೀನು ಯಾವ ಪುರುಷಾರ್ಥವನ್ನು ಸಾಧಿಸಿದೆ!'' ತನ್ನ ಎದೆಯಲ್ಲಿ ಉಕ್ಕಿ ಬರುತ್ತಿರುವ ಶೋಕವನ್ನು ಸಹಿಸಲಾರದೆ ಸುಧಾಂಶುವು ನುಡಿದನು. ಇದುವರೆಗೆ ಅವನ ಎದೆಯಲ್ಲಿ ಮಾಯವಾಗಿದ್ದ ಅನುರಾಗವು ಮತ್ತೆ ಪ್ರಕಾಶಿಸಿತು. ತನ್ನ ವರ್ತನೆಗಳಿಂದ ಪದ್ಮಳ ಹೃದಯವು ಎಷ್ಟು ಶೋಕಭರಿತವಾಗಿರಬಹುದೆಂಬುದನ್ನು

ಆಲೋಚಿಸಿ ಅವನು ಸಂತಾಪಪಟ್ಟನು. ತನ್ನ ಮುದ್ದುಗೂಸನ್ನು-ತನ್ನ ಪ್ರತಿಬಿಂಬ ದಂತಿರುವ ಒಲುವಿನ ರಾಮಚಂದ್ರನನ್ನು-ನೆನೆದು ಕಂಬನಿ ಹರಿಸಿದನು. ತಾನು ಕಾರಾಗೃಹದಲ್ಲಿ ಮಾಧವನೊಡನೆ ವರ್ತಿಸಿದುದು ಅವನ ನೆನಪಿಗೆ ಬರಲು, ಅವನ ಎದೆಯು ಬೆಯ್ಯಲಾರಂಭಿಸಿತು. ನಿಷ್ಕಲಂಕನಾಗಿ ಜನಸೇವೆಯಲ್ಲಿ ತನ್ನ ಜೀವನ ವನ್ನು ಅರ್ಪಿಸಿದ ಆ ಗೆಳೆಯನಲ್ಲಿ ಒಂದು ಕಪಟಪತ್ರದ ಮೂಲಕ ಸಂದೇಹಪೀಡಿತ ನಾದುದು ತನ್ನದೊಂದು ಮಹತ್ತಾದ ಅಪರಾಧವೆಂಬುದು ಸುಧಾಂಶುವಿಗೆ ಹೊಳೆ ಯಿತು. ಅವನ ವದನದಿಂದ ನುಡಿಗಳು ಹೊರಬೀಳಲಿಲ್ಲ. ವಿಚಾರತರಂಗಗಳಿಂದ ಅವನ ಚಿತ್ತವೆಂಬ ಕಡಲು ಪ್ರಕ್ಷುಬ್ಧವಾಗಿದ್ದಿತು.

ವೆಂಕಟರಾಮನು ಮೌನವನ್ನು ಭಂಜಿಸಿ ಶೋಕಪರಿಪೂರ್ಣವಾದ ಸ್ವರದಲ್ಲಿ ಹೇಳತೊಡಗಿದನು:—"ಠಂಗರಾಯರೇ, ನಾನು ಪಾಪಿಯು; ಅಧಃಪತನದ ದಾರಿ ಯನ್ನು ಹಿಡಿದವನು. ಕ್ಷಮಾಯಾಚನೆಯನ್ನು ಮಾಡುತ್ತಿರುವೆನು, ನನ್ನನ್ನು ಮನ್ನಿಸಿ!" ಎಂದು ತನ್ನ ಕೈಗಳೆರಡನ್ನೂ ಚಾಚಿ ಸುಧಾಂಶುವಿನ ಚರಣಗಳನ್ನು ಹಿಡಿದುಕೊಂಡನು. ಆಗ ಅವನ ನೇತ್ರಗಳಿಂದ ಕಂಬನಿಯು ಹರಿಯುತ್ತಿದ್ದಿತು. ತಾನು ಗೈದ ಪಾಪಗಳನ್ನು ನೆನೆದು ಅವನ ಹೃದಯವು ಪಶ್ಚಾತ್ತಾಪಭರಿತವಾಗಿದ್ದಿತು.

"ವೆಂಕಟರಾಮ, ಅಳಬೇಡ; ನೀನು ಈಗಲಾದರೂ ಅಧಃಪತನದ ದಾರಿಯಿಂದ ಪರಿವರ್ತನೆಯನ್ನು ಹೊಂದಿರುವದನ್ನು ಕಂಡು ಹರ್ಷಚಿತ್ತನಾದೆನು. ದಾರುಣವಾದ ರೀತಿಯಲ್ಲಿ ನಿನ್ನನ್ನು ಬಂಧಿಸಿದ್ದ ಪಾಪದ ಸಂಕೋಲೆಯಿಂದ ನೀನುಬಿಡುಗಡೆ ಹೊಂದಿ ರುವದನ್ನು ನೋಡಿ ನನಗೆ ಅತ್ಯಾಹ್ಲಾದವಾಗಿದೆ."

"ಆದರೆ ನಾನು ಗೈದ ಪಾಪಗಳಿಗೆ ಮೇರೆಯಿಲ್ಲವು; ತಮ್ಮ ಮಡದಿಯಿಂದ ತಮ್ಮನ್ನು ಅಗಲಿಸಿದುದು ಮಾತ್ರವಲ್ಲ, ನನ್ನ ಒಡಹುಟ್ಟಿದ ಅಕ್ಕನಂತಿರುವ ಸರಳ ಮನಸ್ಕಳಾದ ಪದ್ಮಳಿಗೆ ವಿಷಪ್ರಯೋಗವನ್ನು ಮಾಡಲು ನಾನು ಹಿಂಜರಿಯಲಿಲ್ಲ. ನನ್ನ ದುರ್ವರ್ತನೆಗಳ ಮೂಲಕ ನಾನು ದರಿದ್ರನಾದೆನು. ಕನಿಕರದಿಂದ ಅವಳೇ ನಮ್ಮ ಉಪಜೀವನಕ್ಕೆ ಆವಶ್ಯವಿರುವ ದ್ರವ್ಯವನ್ನು ಸಹಾಯ ಮಾಡುತ್ತಿದ್ದಳು, ಆದರೆ ಆ ಉಪಕಾರವನ್ನು ನೆನೆದು ಕೃತಜ್ಞನಾಗುವ ಪ್ರಾಣಿಯು ನಾನಾಗಿರಲಿಲ್ಲ. ಸಂಪತ್ತಿನ ಮೇಲೆ ನನಗಿರುವ ಮೋಹದಿಂದ ಹುಚ್ಚುಹಿಡಿಯಲಿರುವ ಒಂದು ವಿಷವನ್ನು ಪಾನೀಯದಲ್ಲಿ ಬೆರೆಸಿ, ನನ್ನ ಹುಟ್ಟಿದ ಹಬ್ಬಕ್ಕೆ ಅತಿಥಿಯಾಗಿ ಬಂದಿದ್ದ ಅವಳಿಗೆ ಪ್ರಯೋಗಿಸಿದೆನು. ನನ್ನ ಅಕ್ಕನಿಗೆ-ಮನೆಗೆ ಬಂದಿದ್ದ ಅತಿಥಿಗೆ-ವಿಷಪ್ರಯೋಗವನ್ನು ಮಾಡಿದೆನು; ಆದರೆ ದೇವರು ದೊಡ್ಡವನು; ಆ ಶಕ್ತಿಯು ಸತ್ಯನಿಷ್ಠರನ್ನು ಸದಾ ಕಾಯುತ್ತಲಿರುವುದು. ಯಾವ ಮಾಯೆಯಿಂದ ಎಂಬುದನ್ನು ನಾನು ಬಲ್ಲವನಲ್ಲ; ಅವಳಿಗೆ ಕುಡಿಯಲು ಕೊಟ್ಟಿದ್ದ ವಿಷಮಿಶ್ರಿತ ಪಾನೀಯವು ಅವಳ ಉದರದಲ್ಲಿ ಪ್ರವೇಶಿ ಸದೆ, ಅದು ನನ್ನ ಹೊಟ್ಟೆಯಲ್ಲೇ ಪ್ರವೇಶಿಸಿತು! ಆ ಔಷಧದ ತೀವ್ರ ಶಕ್ತಿಯಿಂದ ನಾನು ಚಿತ್ತಸ್ವಾಸ್ಥ್ಯವನ್ನು ಕಳೆದುಕೊಂಡು ಹುಚ್ಚನಾದೆನು. ನಾನು ಮಾಡಿದ

ಅಡಿಗೆಯನ್ನು ನಾನೇ ಉಣಬೇಕಾಗಿ ಬಂದಿತು. ಕರ್ಮದ ಫಲವು ನನ್ನನ್ನು ಭಿಕಾರಿಯನ್ನಾಗಿ ಮಾಡಿತು. ರಾಯರೇ, ಕ್ಷಮಿಸಿರಿ ಈ ಅಧಮನನ್ನು!''

"ವೆಂಕಟರಾಮ, ಏಳು. ನನ್ನ ಕಾಲುಗಳನ್ನು ಹಿಡಿಯದಿರು! ನಿನ್ನಲ್ಲಿ ಪಶ್ಚಾತ್ತಾಪದ ಬೆಂಕಿಯು ಪ್ರಜ್ವಲಿಸುತ್ತಿರುವದರಿಂದ ನಿನ್ನ ಪಾಪರಾಶಿಯು ದಹಿಸಿಹೋಗಿದೆ. ತಪ್ತಕಾಂಚನದಂತೆ ನೀನು ಪರಿಶುದ್ಧನಾಗಿರುತ್ತೀಯೇ; ಏಳು! ಹೊಸ ಬದುಕು ನಿನಗೆ ಲಭಿಸಿರುವದು ಹಿಂದಿನ ದುರಾಚಾರಪೂರ್ಣನಾದ ವೆಂಕಟರಾಮನು ನೀನಲ್ಲ.''

"ತಮ್ಮ ಉದಾರಹೃದಯವನ್ನು ಹೇಗೆ ಮರೆಯಲಿ? ಪಾಪಿಯಾದ ನಾನು ತಮಗೆ ಕೇಡನ್ನೇ ಬಗೆದೆನು, ಆದರೆ ಅದಕ್ಕೆ ಪ್ರತಿಯಾಗಿ ತಾವು ನನಗೆ ಪ್ರೇಮವನ್ನು ತೋರಿಸುತ್ತಿರುವಿರಿ! ಇನ್ನು ತಮ್ಮ ಸೇವೆಯಲ್ಲಿ ಈ ಜನ್ಮವನ್ನು ಕಳೆಯಬೇಕೆಂದಿರುವೆನು."

"ದುಃಖದಲ್ಲಿ ಬಿದ್ದಿರುವ ಮುದದಿಯನ್ನು ಸಂತಯಿಸುವದು ನಿನ್ನ ಮೊದಲಿನ ಕರ್ತವ್ಯವು. ಪಾಪವಿಮುಕ್ತನಾದ ನೀನು ದಾಸ್ಯದಲ್ಲಿ ಬಳಲುತ್ತಿರುವ ನಾಡದೇವಿಯ ಬಿಡುಗಡೆಗಾಗಿ ಪ್ರಯತ್ನಿಸು!''

ಪಾಪಿಯು ಪುನೀತನಾದನು. ಪ್ರೇಮಮಂತ್ರವು ಎಷ್ಟು ಮಹತ್ತರವಾದುದು ಎಂಬುದನ್ನು ಸುಧಾಂಶುವು ಜಗತ್ತಿಗೆ ತೋರಿಸಿಕೊಟ್ಟನು!

---

## ೨೨ ಮಧುರ-ಮಿಲನ.

ಅನೇಕ ಸಂವತ್ಸರಗಳ ನಂತರ ರಂಗನು (ಸುಧಾಂಶುವು) ತನ್ನ ಹುಟ್ಟಿದೂರನ್ನು ಸಂದರ್ಶಿಸಿದನು. ಸುಂದರವಾದ ಹೊಸೂರು ಗ್ರಾಮವು ತನ್ನ ತಂಗಾಳಿಯ ಚಾಮರವನ್ನು ಬೀಸಿ, ತನ್ನ ಕಂದನಿಗೆ ಸುಸ್ವಾಗತವನ್ನು ಬಯಸಿತು. ರಂಗನು ಮೆಲ್ಲನೆ ನದಿಯ ತೀರದಲ್ಲಿ ನಿಂತಿರುವ ಒಂದು ಕುಟೀರದ ಬಳಿಗೆ ಹೋದನು. ಗುಡಸಿಲಿನ ಮುಂದೆ ನಿಂತಿರುವ ಹೂದೋಟದಲ್ಲಿ ಅರಳಿ ನಿಂತಿರುವ ಸೊಬಗಿನ ಗುಲಾಬೀಹೂಗಳು ಅವನಿಗೆ ಮೌನದಲ್ಲಿ ಸುಸ್ವಾಗತವನ್ನು ಬಯಸಿದುವು.

ಸಮಯವು ಮಧ್ಯಾಹ್ನ ಹನ್ನೊಂದು ತಾಸಾಗಿದ್ದಿತು, ದಿವಾಕರನು ಗಗನಮಂಡಲದಲ್ಲಿ ಹೊಳೆಯುತ್ತಿದ್ದನು. ವಿಭಾವಸುವನ್ನು ನೋಡಿ ಸುಮಗಳು ಎಳೆನಗೆಯನ್ನು ಚೆಲ್ಲುತ್ತಿದ್ದುವು. ಕುಟೀರದ ನಡುಮನೆಯಲ್ಲಿ ೩೦-೩೨ ವರ್ಷ ಪ್ರಾಯದ ಮಹಿಳೆಯೊಬ್ಬಳು ಕುಳಿತು ಹತ್ತು-ಹನ್ನೆರಡು ವರ್ಷ ಪ್ರಾಯದ ಬಾಲಕನೊಬ್ಬನಿಗೆ ಪಾಠಗಳನ್ನು ಹೇಳಿಕೊಡುತ್ತಿದ್ದಳು. ಸುಂದರನಾದ ಬಾಲಕನು ಆ ಹೆಂಗಸು ಹೇಳಿಕೊಡುತ್ತಿರುವ ಪಾಠಗಳನ್ನು ಹರ್ಷದಿಂದ ಕಲಿಯುತ್ತಿದ್ದನು. ರಂಗನು ಮನೆಯ ಅಂಗಣದಲ್ಲಿ ನಿಂತು ನೋಡಿದನು ಆ ಚಿತ್ರದಲ್ಲಿ ಕಂಗೊಳಿಸುತ್ತಿರುವ ಶಾಂತತೆಯನ್ನು

ಭಂಗಪಡಿಸಲು ಅವನು ಇಚ್ಛಿಸಲಿಲ್ಲ. ಅವನು ಕುಟೀರದ ಜಗುಲಿಯ ಮೇಲೆ ಕುಳಿತು ಹೂದೋಟದ ಸೊಬಗನ್ನು ಸವಿಯುವದರಲ್ಲಿ ನಿರತನಾದನು.

ಸಮಯವು ಅರ್ಧತಾಸು ಕಳೆಯಿತು, ಮನೆಯೊಳಗೆ ಕಂದನಿಗೆ ಪಾಠಗಳನ್ನು ಹೇಳಿಕೊಡುತ್ತಿರುವ ಕೆಲಸವನ್ನು ಆ ಮಹಿಳೆಯು ನಿಲ್ಲಿಸಿದಳು. ಬಾಲಕನು ಮನೆಯ ಹೊರಗೆ ಬಂದನು. ಅವನು ಓರ್ವ ಅಪರಿಚಿತ ವ್ಯಕ್ತಿಯು ಜಗುಲಿಯ ಮೇಲೆ ಆಸೀನನಾಗಿರುವದನ್ನು ಅವಲೋಕಿಸಿ ಸಂಭ್ರಮದಿಂದ ಗುಡಿಸಿಲಿನೊಳಗೆ ಓಡಿ ಹೋದನು.

"ಅಮ್ಮಾ! ಯಾರೋ ಹೊರಗೆ ಬಂದಿರುತ್ತಾರೆ" ಎಂಬ ನುಡಿಗಳು ಹೊರಗಿರುವ ರಂಗನ ಶ್ರವಣೇಂದ್ರಿಯಗಳಲ್ಲಿ ಪತಿಸಿದುವು.

"ಯಾರೋ ರಾಮು?"

"ನನಗೆ ತಿಳಿಯದು."

ಮನೆಗೆ ಬಂದ ಅಪರಿಚಿತ ವ್ಯಕ್ತಿಯು ಯಾರೆಂಬುದನ್ನು ತಿಳಿಯಲು ಉತ್ಸುಕಳಾಗಿ ಆ ವನಿತೆಯು ಹೊರಗೆ ಬಂದಳು. ರಂಗನು ಅವಳ ದೃಷ್ಟಿಯಲ್ಲಿ ಪತಿಸಿದನು; ಅವಳನ್ನು ಕಾಣುತ್ತಲೆ ಅವನು ಎದ್ದು ನಿಂತನು. ಇಬ್ಬರ ಕಣ್ಣುಗಳೂ ಒಂದುಗೂಡಿದುವು. ಇಬ್ಬರ ತುಟಿಗಳಿಂದಲೂ ನುಡಿಗಳು ಹೊರಬೀಳಲಿಲ್ಲ. ಶಿಲಾಬಿಂಬಗಳಂತೆ ಅವರಿಬ್ಬರೂ ಸ್ತಬ್ಧರಾಗಿ ನಿಂತರು.

ಅಂತ್ಯದಲ್ಲಿ ರಂಗನೇ ಮೌನವನ್ನು ಭಂಜಿಸಿದನು. ಅವನ ತುಟಿಗಳಿಂದ "ಪದ್ಮಾ!" ಎಂಬ ನುಡಿಯು ಹೊರಬಿದ್ದಿತು.

ಆ ಮಹಿಳೆಯ ಹೆಸರು ಪದ್ಮಳೆಂದು; ಪದ್ಮಳು ಯಾರೆಂಬುದನ್ನು ನಾನು ವಾಚಕರಿಗೆ ತಿಳಿಸಬೇಕಾದುದಿಲ್ಲವಷ್ಟೆ? ರಂಗನಾಡಿದ ಮಾತಿಗೆ ಅವಳು ಜವಾಬನ್ನು ಕೊಡಲಿಲ್ಲ.

"ಪದ್ಮಾ, ನೀನು ನನ್ನನ್ನು ಮರೆತೆಯಾ?"

ಹನ್ನೆರಡು ವರ್ಷಗಳ ಅನಂತರ ಪತಿಯ ದರ್ಶನವನ್ನು ಹೊಂದಿದ ಆ ಹರ್ಷದಿಂದ ಮೈಮರೆತ ಆ ಹೆಂಗಸು ರಂಗನಿಗೆ ಯಾವ ಪ್ರತ್ಯುತ್ತರವನ್ನು ಕೊಟ್ಟಾಳು?

"ಪದ್ಮಾ! ಅಪರಾಧಿಯು ನಾನು! ನಿಷ್ಕರುಣಿಯಾದ ನಾನು ನಿನ್ನನ್ನು ಬಹುವಿಧವಾದ ತೊಂದರೆಗಳಿಗೆ ಈಡುಮಾಡಿದೆನು: ಆದರೆ ಈಗ ನಾನು ನನ್ನ ತಪ್ಪನ್ನು ತಿಳಿದು ನಿನ್ನಲ್ಲಿಗೆ ಬಂದಿರುತ್ತೇನೆ. ಮನ್ನಿಸು!"

ತನ್ನ ನಲ್ಲನು ಈ ರೀತಿ ದೈನ್ಯಸ್ವರದಲ್ಲಿ ನುಡಿಯುತ್ತಿರುವವನ್ನು ದರ್ಶಿಸಿ ಮೌನವನ್ನವಲಂಬಿಸಲು ಅವಳು ಶಕ್ತಳಾಗಲಿಲ್ಲ. ಇನಿಯನ ಎದೆಯಿಂದ ಹೊರಬಿದ್ದ ಈ ಪಶ್ಚಾತ್ತಾಪಪೂರ್ಣ ನುಡಿಗಳು ಅವಳ ಕೋಮಲ ಹೃದಯವನ್ನು ಕರಗುವಂತೆ ಮಾಡಿದುವು.

"ತಮ್ಮ ದಾಸಿಯು ನಾನು; ತಾವು ನನ್ನನ್ನು ಮನ್ನಿಸಬೇಕೆಂದು ಬೇಡು

ವುದು ಅನುಚಿತವು!'' ಪದ್ಮಳು ಹರ್ಷಬಾಷ್ಪವನ್ನು ಒರಿಸುತ್ತ ಎಂದಳು

''ಪದ್ಮಾ! – ನನ್ನ ಪದ್ಮಾ, ಅಪರಾಧವನ್ನು ಗೈದ ಪತಿಯನ್ನು ಕ್ಷಮಿಸು. ನಾನು ಬೇಡುವದಕ್ಕಿಂತ ಮೊದಲೇ ನನ್ನನ್ನು ಮನ್ನಿಸಲು ನೀನು ಸಿದ್ಧಳಾಗಿರುವೆ ಯೆಂಬುದನ್ನು ನಾನು ಬಲ್ಲೆನು ಪರಿಶುದ್ಧಳಾದ ನಿನ್ನಲ್ಲಿ ನಾನು ವಿಕಲ್ಪವನ್ನು ತಾಳಿದ್ದೆನು.''

ರಂಗನು ತೆರಳಿ ಪದ್ಮಳ ಕರಾಗ್ರವನ್ನು ಹಿಡಿದುಕೊಂಡನು, ಅವನು ಮೆಲ್ಲನೆ ಅವಳ ಬೆನ್ನಿನ ಮೇಲೆ ತನ್ನ ಕರವನ್ನಿಟ್ಟು ಹೇಳಿದನು – ''ನಾವಿಬ್ಬರೂ ಅಗಲಿ ಹನ್ನೆರಡು ವರ್ಷಗಳಾದುವಲ್ಲವೇ?''

''ಅಹುದು.''

''ಈ ಹನ್ನೆರಡು ವರ್ಷಗಳು ಶೋಕಪರಿಪೂರ್ಣವಾದ ಒಂದು ಯಾಮಿನಿಯಾಗಿ ನಿನಗೆ ತೋರಿರಬಹುದು.''

''ಆದರೆ ಆ ರಜನಿಯು ಬಹು ಕಾಲ ನನ್ನನ್ನು ಆವರಿಸಲಿಲ್ಲ. ಆ ಗಾಢ ತಿಮಿರ ವನ್ನು ಹೊಡೆದೋಡಿಸಲಿರುವ ಒಂದು ಬೆಳಕನ್ನು ನಾನು ಪಡೆದೆನು.''

''ಯಾವುದಾ ಬೆಳಕು?''

''ನನ್ನಲ್ಲಿರುವ ಚೈತನ್ಯವನ್ನು ತಿಳಿದುಕೊಂಡೆನು. ಹನ್ನೆರಡು ವರ್ಷಗಳ ತಪಸ್ಸನ್ನಾಚರಿಸಿದೆನು.''

''ನೀನೀಗ ಆಧ್ಯಾತ್ಮಿಕ ಚಿಂತನೆಗಳ ವಲಯದಲ್ಲಿ ಪ್ರವೇಶಿಸಿದಂತೆ ತೋರುತ್ತದೆ. ಅದೂ ಒಳ್ಳೆಯದೇ ಆಗಿದೆ.''

''ಆ ತಳಹದಿಯಿಲ್ಲದೆ ಹೋದರೆ ಜೀವನಕ್ಕೆ ಆಧಾರವಾದುದು ಯಾವುದು?''

''ಈ ನುಡಿಗಳಿಂದ ನೀನು ನನ್ನ ಮಾರ್ಗದರ್ಶಕಳಾಗಿರಲು ಯೋಗ್ಯಳಿರುವೆ ಎಂಬುದು ವ್ಯಕ್ತವಾಗುತ್ತದೆ.''

ನಲ್ಲನ ಈ ಪ್ರಶಂಸೆಯಿಂದ ಪದ್ಮಳ ವದನಮಲ್ಲಿಗೆಯು ಅರಳಿತು. ನಾಚಿಕೆ ಯಿಂದ ಆ ಚೆಲುಮೊಗವು ಬಿಳುಪೇರಿತು. ರಂಗನಾದರೂ ತನ್ನ ಮಡದಿಯ ಸಮಾ ಗಮದಿಂದ ಹರ್ಷವಾರಿಧಿಯಲ್ಲಿ ಮುಳುಗಿದ್ದನು. ಅವನು ಮೆಲ್ಲನೆ ಚುಂಬನ ಮುದ್ರೆ ಯನ್ನು ಅವಳ ಮೃದುಕಪೋಲಗಳ ಮೇಲೆ ಒತ್ತಿದನು.

''ಪದ್ಮಾ, ಮಾಧವನು ಎಲ್ಲಿರುವನು?'' ತನ್ನ ಗೆಳೆಯನನ್ನು ಸ್ಮರಿಸುತ್ತ ರಂಗನು ನುಡಿದನು.

''ರಾಮನಗರದಲ್ಲಿ!''

''ಏನು ಮಾಡುತ್ತಲಿರುವನು?''

''ನಾಡದೇವಿಯ ಮಹಾಸೇವೆ!''

''ಅಯ್ಯೋ! ನಿಷ್ಕಲಂಕ ಮೂರ್ತಿಯಾಗಿ ತಾಯ್ನಾಡಿನ ಸೇವೆಯಲ್ಲಿ ತನ್ನ ಜೀವನವನ್ನೇ ಅರ್ಪಿಸಿರುವ ಆ ಗೆಳೆಯನನ್ನು ಕುರಿತು ನಾನು ವಿಕಲ್ಪವನ್ನು ತಾಳಿ

ದೆನು. ಕಾರಾಗೃಹದಲ್ಲಿ ಅವನು ಎಷ್ಟು ಬಗೆಯಿಂದ ಪ್ರಾರ್ಥಿಸಿದರೂ ನಾನು ಆ ನುಡಿಗಳಿಗೆ ಗಮನಕೊಡಲಿಲ್ಲ. ನನಗಿಂತ ನಿರ್ದಯನು ಬೇರೊಬ್ಬನಿಲ್ಲ!''

''ಆಗಬೇಕಾದುದು ಆಗಿಹೋಯಿತು, ಈ ವಿಯೋಗವು ಸಂಕಟದಾಯಕವಾಗಿದ್ದರೂ ಅದರ ಫಲವು ಶುಭವಾಗಿಯೇ ಪರಿಣಮಿಸಿತು. ನಮ್ಮ ಬಾಳುವೆಯ ರಹಸ್ಯವನ್ನು ತಿಳಿಯಲು ಅದು ನಮ್ಮನ್ನು ಪ್ರೇರಿಸಿತು. ನಾಡಸೇವೆಗಾಗಿ ನಾವು ಮಾಡಿದ ಪ್ರತಿಜ್ಞೆಯನ್ನು ಅದು ಒರೆಗಲ್ಲಿಗೆ ಹಚ್ಚಿತು.''

''ನಾಡಸೇವೆಯಲ್ಲಿ ನಿನಗಿರುವ ಆಸಕ್ತಿಯನ್ನು ಕಂಡು ನಾನು ಹರ್ಷಿತನಾದೆನು. ಪದ್ಮಾ, ನೀನು ನಿಜವಾಗಿಯೂ ಓರ್ವ ದೇವಿಯು! ನಾನು ನಿರ್ದಯನಾಗಿ ವರ್ತಿಸಿದ್ದರೂ ನೀನು ನನ್ನನ್ನು ಮನ್ನಿಸಿರುವೆ.''

ಒಳಮನೆಯಿಂದ ಹೊರಕ್ಕೆ ಬಾಲಕನು ಓಡಿ ಬಂದನು ಅವನು ತನ್ನ ಜನನಿಯ ಮೋರೆಯನ್ನೂ ರಂಗನ ಮೋರೆಯನ್ನೂ ವೀಕ್ಷಿಸುತ್ತ ವಿಸ್ಮಯದಿಂದ ಕೂಡಿದವನಾಗಿ ಆ ನಲ್ಲ-ನಲ್ಲೆಯರ ಮಧ್ಯದಲ್ಲಿ ಬಂದು ನಿಂತನು.

''ರಾಮೂ, ನಾನು ಯಾರೆಂಬುದನ್ನು ನೀನು ಬಲ್ಲೆಯಾ?'' ಎನ್ನುತ್ತ ರಂಗನು ತನ್ನ ಕುಮಾರನನ್ನು ತೋಳುಗಳಿಂದ ಬಾಚಿ ತಬ್ಬಿಕೊಂಡನು. ಪುತ್ರಪ್ರೇಮವು ರಂಗನಲ್ಲಿ ನದಿಯಾಗಿ ಹರಿಯಿತು.

''ಇಲ್ಲ, ನೀನು ಯಾರೆಂಬುದು ನನಗೆ ತಿಳಿಯದು.''

''ಬದ ವಾಯಿ! ಅವನಿಗೆ ಒಂದು ವರ್ಷ ಪ್ರಾಯವಿದ್ದಾಗ ಅವನನ್ನು ತ್ಯಜಿಸಿದ ತಂದೆಯನ್ನು ಅವನು ಹೇಗೆ ತಿಳಿಯುವನು? ರಂಗಾ, ನೀನು ಇಷ್ಟು ನಿರ್ದಯನಾಗಿ ಹೋದೆಯಲ್ಲ! ರಾಮೂ, ನಾನೇ ನಿನ್ನ ಅಪ್ಪನು!''

''ನನ್ನ ಅಪ್ಪನೇ!'' ಎಂಬುದಾಗಿ ನುಡಿದು, ಬಾಲಕನು ತನ್ನ ಕಣ್ಣುಗಳನ್ನು ಅಗಲಿಸಿದನು.

''ಮಗೂ, ತಂದೆಯವರ ಪಾದಗಳಿಗೆ ನಮಸ್ಕರಿಸು'' ಎಂದಳು ಜನನಿ.

''ಇವನ ಕಾಲಿಗೆ ನಮಸ್ಕರಿಸಬೇಕೇನಮ್ಮಾ?''

''ಏಕವಚನದಲ್ಲಿ ನುಡಿಯಬಾರದು, ನಮಸ್ಕರಿಸು.''

ತಾಯಿಯ ಆಜ್ಞೆಯಂತೆ ಬಾಲಕನು ತನ್ನ ತಂದೆಯ ಚರಣಗಳಿಗೆ ನಮಸ್ಕರಿಸಿದನು. ರಂಗನು ಕಂದನನ್ನು ಎತ್ತಿಕೊಂಡು ಮುದ್ದಾಡಿದನು.

ಇನ್ನು ಇಲ್ಲಿ ಆ ಪತಿ-ಪತ್ನಿಯರ ಸಂವಾದವನ್ನಾಗಲೀ ಅವರ ಕೃತ್ಯಗಳನ್ನಾಗಲೀ ವಿವರಿಸಲು ನಾನು ಬಯಸುವುದಿಲ್ಲ. ಅವು ಹೆಚ್ಚು ಪ್ರಧಾನವಾದ ಸಂಗತಿಯಾಗಿರುವದಿಲ್ಲ. ಈ ಹನ್ನೆರಡು ವರ್ಷಗಳ ದೀರ್ಘಕಾಲದಲ್ಲಿ ಜರುಗಿದ ಸಂಗತಿಗಳನ್ನು ಮಾತಾಡುತ್ತ ಅವರು ಹೊತ್ತನ್ನು ಕಳೆದರು

ಆ ದಿನವು ಶನಿವಾರವಾಗಿದ್ದುದರಿಂದ ತನ್ನ ಪದ್ಧತಿಯಂತೆ ಪದ್ಮಳ ದರ್ಶನವನ್ನು ಪಡೆಯುವದಕ್ಕಾಗಿ ಮಾಧವನು ನಗರದಿಂದ ಹೊಸೂರಿಗೆ ಬಂದನು. ಪದ್ಮಳ ಕುಟೀರ

ಡಲ್ಲಿ ರಂಗನನ್ನು ಕಾಣುತ್ತಲೆ ಮಾಧವನು ಆಶ್ಚರ್ಯದಿಂದ ಸ್ತಂಭೀಭೂತನಾಗಿ ಹೋದನು! ರಂಗನು ಕಾರಾಗಾರದಲ್ಲಿ ತನ್ನೊಡನೆ ಆಡಿದ ಮಾತುಗಳು ಅವನ ನೆನಪಿಗೆ ಬಂದುವು. ಕುಟುಂಬಜೀವನದಲ್ಲಿ ಜಿಗುಪ್ಸೆಯನ್ನು ಪ್ರದರ್ಶಿಸಿದ ರಂಗನು ತನ್ನ ಮಡದಿಯ ದರ್ಶನಕ್ಕಾಗಿ ಆಗಮಿಸಲು ಕಾರಣವೇನಿರಬಹುದೆಂದು ಮಾಧವನು ಆಲೋಚಿಸಿದನು. ರಂಗನಲ್ಲಿ ಮಹತ್ತಾದ ಒಂದು ಪರಿವರ್ತನೆಯುಂಟಾಗಿದೆ ಎಂಬುದನ್ನು ಮಾಧವನು ಗ್ರಹಿಸಿದನು.

"ಮಾಧೂ, ಕ್ಷಮಿಸು ಈ ನಿನ್ನ ರಂಗನನ್ನು!" ಎಂದು ತನ್ನ ಗೆಳೆಯನನ್ನು ಕಾಣುತ್ತಲೆ ರಂಗನು ಅಂಗಣಕ್ಕೆ ನೆಗೆದು, ಮಾಧವನನ್ನು ಬಿಗಿದಪ್ಪಿಕೊಂಡನು. ತುರಂಗದಲ್ಲಿ ಯಾವ ಮಾಧವನ ಸ್ಪರ್ಶನಕ್ಕೆ ಹೇಸಿ ಹಿಂಜರಿದನೋ, ಆ ಮಾಧವನನ್ನು ರಂಗನು ಬಿಗಿದಪ್ಪಿಕೊಂಡು ಕ್ಷಮಾಯಾಚನೆಯನ್ನು ಗೈದನು.

'ರಂಗಾ, ಇದೇನು ಈ ವಿಚಿತ್ರ ವರ್ತನೆ?'

'ಮಾಧೂ, ಒಡಹುಟ್ಟಿದ ತಮ್ಮನಂತಿರುವ ನನ್ನ ಮಾಧೂ, ನಿನ್ನನ್ನು ಕುರಿತು ನಾನು ವಿಕಲ್ಪವನ್ನು ತಾಳಿದೆ. ನೀನು ನಿನ್ನ ನಿರಪರಾಧಿತ್ವವನ್ನು ಪ್ರತ್ಯಕ್ಷಗೊಳಿಸಿದರೂ ಕಟು ಮಾತುಗಳಿಂದ ನಿನ್ನ ಮನಸ್ಸನ್ನು ನೋಯಿಸಿದೆನು. ಈಗ ನಿನ್ನ ನಿರಪರಾಧಿತ್ವವು ನನಗೆ ಹೊಳೆಯಿತು. ನನ್ನ ಅಪರಾಧವು ಮನದಟ್ಟಾಯಿತು. ನೀನು ಒಬ್ಬ ಸಹೋದರನಂತೆ ಉದಾರಹೃದಯದಿಂದ ಕೂಡಿದವನಾಗಿ ನನ್ನನ್ನು ಕ್ಷಮಿಸು!'

'ಸತ್ಯಸಂಗತಿಯನ್ನು ನೀನು ತಿಳಿದುಕೊಂಡದ್ದು ಹೇಗೆ?'

'ವೆಂಕಟರಾಮನಿಂದ'

'ವೆಂಕಟರಾಮನಿಂದಲೇ!' ಎಂದು ಮಾಧವನೂ ಪದ್ಮಳೂ ಏಕಕಾಲದಲ್ಲಿ ಪ್ರಶ್ನಿಸಿದರು.

'ಅಹುದು.'

'ಈಗ ಅವನೆಲ್ಲಿರುವನು?'

'ಶಿವಪುರದಲ್ಲಿರುವ ಸಾಧನಕುಟೀರದಲ್ಲಿ ಅವನು ಚಿಕಿತ್ಸೆಯನ್ನು ಪಡೆಯುತ್ತಲಿರುವನು.'

ರಂಗನು ಶಿವಪುರದಲ್ಲಿ ಜರುಗಿದ ಮತಕಲಹವನ್ನೂ, ಆ ಕಲಹವನ್ನು ಶಾಂತಗೊಳಿಸಲು ತಾನು ಉದ್ಯುಕ್ತನಾಗಿರಲು, ಒಬ್ಬ ಮುಸ್ಲೀಂ ಗಲಭೆಗಾರನು ತನ್ನನ್ನು ಕೊಲ್ಲಲು ಉದ್ಯುಕ್ತನಾಗಿದ್ದಾಗ ವೆಂಕಟರಾಮನು ತನ್ನ ಪ್ರಾಣವನ್ನು ಕಾಪಾಡಿದುದು ಹೇಗೆಂಬುದನ್ನೂ ಅವರಿಬ್ಬರಿಗೂ ವಿವರಿಸಿ ಹೇಳಿದನು.

'ವೆಂಕಟರಾಮನು ಈಗಲೂ ಹುಚ್ಚನಾಗಿರುವನೆ?'

"ಇಲ್ಲ. ಗಲಭೆಗಾರನ ಆಘಾತಕ್ಕೆ ಸಿಲುಕುವ ವರೆಗೆ ಅವನು ಹುಚ್ಚನಾಗಿಯೇ ಇದ್ದನು. ಅವನು ಆಘಾತದಿಂದ ಮೂರ್ಛೆಯನ್ನು ಹೊಂದಿ ಪುನಃ ಎಚ್ಚರಗೊಳ್ಳುವಾಗ, ಅವನನ್ನು ಬಾಧಿಸಿದ್ದ ಉನ್ಮಾದವು ಅವನನ್ನು ತ್ಯಜಿಸಿ ಹೊರಟುಹೋಗಿದ್ದಿತು."

''ದೇವರು ಅವನಿಗೆ ಒಳ್ಳೆಯದನ್ನು ಮಾಡಲಿ!'' ಎಂದು ಪದ್ಮಳು ಅನುಕಂಪನೆಯನ್ನು ಸೂಸಿದಳು.

"ಅವನು ಪೂರ್ಣ ಪರಿವರ್ತನೆಯನ್ನು ಹೊಂದಿರುವನು. ಅವನಲ್ಲಿರುವ ದುರಾಚಾರಗಳೆಲ್ಲವೂ ಸಂಪೂರ್ಣವಾಗಿ ಮಾಯವಾಗಿರುವುವು."

ಮಾಧವನು ತನ್ನ ಗೆಳೆಯನಿಗೆ ತಾನು ವೆಂಕಟರಾಮನ ವಿಷಪ್ರಯೋಗದಿಂದ ಪದ್ಮಳನ್ನು ಯಾವ ರೀತಿಯಲ್ಲಿ ರಕ್ಷಿಸಿದೆನೆಂಬುದನ್ನು ತಿಳಿಸಿದನು. ಈ ಸಂದರ್ಭದಲ್ಲಿ ಊರ ಹೆಂಗಸರೊಡನೆ ಬೀದಿಯನ್ನು ಶುಚಿಪಡಿಸಲು ಸರೋಜಳು ತನ್ನ ಕೆಲಸಗಳನ್ನು ಪೂರೈಸಿ ಹಿಂದಿರುಗಿದಳು.

ಇದುವರೆಗೆ ಅವಳ ಜೀವನದಲ್ಲಿ ಸಂಭವಿಸಿದ್ದ ದಾರುಣ ಪ್ರಸಂಗಗಳಿಂದ ಸರೋಜಳ ಹೃದಯವು ಬೆಂದು ಬೆಂಡಾಗಿಹೋಗಿದ್ದಿತು. ಹಿಂದೆ ಹೇಳಿದಂತೆ ಬದುಕೇ ದುಃಖಕರವೆಂಬ ಒಂದು ಮನಃಸ್ಥಿತಿಯನ್ನು ಹೊಂದಿದ್ದಳು ಅವಳು. ಜನಸೇವೆಯಿಂದ ಬೆಂದು ಬೆಂಡಾಗಿರುವ ಹೃದಯಕ್ಕೆ ಅವಳು ಶಾಂತಿಯನ್ನು ಹುಡುಕುತ್ತಲಿದ್ದಳು. ಪದ್ಮಳು ಗ್ರಾಮವನಿತೆಯರ ಅಭ್ಯುದಯಕ್ಕಾಗಿ ಯತ್ನಿಸುತ್ತಲಿದ್ದ ಉದ್ಯಮಗಳಲ್ಲಿ ಆಕೆಯ ಬಲಗೈಯಂತೆ ನಿಂತು ಅವಳಿಗೆ ಸಹಾಯವನ್ನು ನೀಡುತ್ತಿದ್ದಳು. ಗ್ರಾಮನೈರ್ಮಲ್ಯ, ಬಾಲಕರ ವಿದ್ಯಾಭ್ಯಾಸ ಇವುಗಳಲ್ಲಿ ಸರೋಜಳು ಪ್ರಯತ್ನಿಸುತ್ತಲಿದ್ದಳು.

ರಂಗನ ಆಗಮನದಿಂದ ಅವಳು ಹರ್ಷಿತಳಾದಳು. ತನ್ನ ಗೆಳತಿಯ ದುಃಖವಾದರೂ ಉಪಶಮನವನ್ನು ಹೊಂದಿತಲ್ಲ! ಎಂಬುದೇ ಅವಳ ಹರ್ಷಕ್ಕಿರುವ ಕಾರಣವು. ರಂಗನ ಮುಖದಿಂದ ಅವಳು ತನ್ನ ಪತಿಯ ವಾರ್ತೆಯನ್ನು ತಿಳಿದಳು. ಅದರಿಂದ ಅವಳು ಆನಂದಭರಿತಳಾದಳು. ಇದುವರೆಗೆ ಅವಳ ಬದುಕನ್ನು ಆವರಿಸಿದ್ದ ಯಾಮಿನಿಯು ದೂರಕ್ಕೆ ಸರಿದುದರಿಂದ, ಪ್ರಕಾಶವು ಅವಳ ಜೀವನದಲ್ಲಿ ಕಾಣಿಸಹತ್ತಿತು.

ಆನಂದವು ಎಲ್ಲರಲ್ಲಿಯೂ ನರ್ತಿಸಿತು; ಇದುವರೆಗೆ ಬೆಂದಿದ್ದ ಹೃದಯಗಳಿಗೆ ಪೀಯೂಷವು ಲಭಿಸಿತು! ಪತಿ-ಪತ್ನಿಯರ ಸಮಾಗಮವಾಯಿತು; ಗೆಳೆಯರಿಬ್ಬರ ಸಮಾಗಮವಾಯಿತು; ತಂದೆ-ಮಕ್ಕಳ ಸಮಾಗಮವಾಯಿತು!

ಇದುವರೆಗೆ ಕಹಿಯಾಗಿದ್ದ ಬಾಳಿನಲ್ಲಿ ನವಮಧುವು ಜಿನುಗತೊಡಗಿತು.

---

## ೨೩. ಸಾಧನ-ಕುಟೀರ.

ತನ್ನ ಇನಿಯಳ ದರ್ಶನಕ್ಕಾಗಿ ಹೊಸೂರಿಗೆ ಗಮಿಸಿದ್ದ ರಂಗನು ತನ್ನ ಮಡದಿ-ಮಕ್ಕಳೊಡನೆ ಶಿವಪುರಕ್ಕೆ ಹಿಂದಿರುಗಿ ಬಂದನು. ಮಾಧವನಾದರೂ ತನ್ನ ಗೆಳೆಯನೊಡನೆ ಸಾಧನಕುಟೀರಕ್ಕೆ ಬಂದಿದ್ದನು. ಕುಟೀರನಿವಾಸಿಗಳು ಹನ್ನೆರಡು ವರ್ಷಗಳ ಮಡದಿವಿಯೋಗವನ್ನು ಅನುಭವಿಸಿ, ಅನಂತರ ಮಡದಿಯ ದರ್ಶನವನ್ನು ಪಡೆದು,

ಅವಳೊಡನೆ ಹಿಂದಿರುಗಿ ಬರುತ್ತಿರುವ ತಮ್ಮ ಸಹ ಉದ್ಯಮಿಗೆ ಸುಸ್ವಾಗತವನ್ನು ಬಯಸಿದರು. ಆಚಾರ್ಯ ನಳಿನೀರಂಜನ ಮಹಾಶಯನು ತನ್ನ ಶಿಷ್ಯನು ಕುಟುಂಬ ದೊಡನೆ ಹಿಂದಿರುಗಿ ಬಂದುದನ್ನು ಅವಲೋಕಿಸಿ ಆಹ್ಲಾದಭರಿತನಾದನು!

'ಸಾಧನ ಕುಟೀರ'ದಲ್ಲಿ ಹರಡಿರುವ ಪರಿಪಾವನತೆಯನ್ನೂ ನಾಡಬಿಡುಗಡೆ ಗಾಗಿ ಅಲ್ಲಿ ನಡೆಯುತ್ತಿರುವ ತಪಸ್ಸನ್ನೂ ವೀಕ್ಷಿಸಿ ಪದ್ಮಳು ಹರ್ಷಿತಳಾದಳು. ಆ ಗುಡಸಿಲು ಭಾವೀ ಜನಾಂಗವನ್ನು ರಚಿಸಲಿರುವ ಒಂದು ಮಹಾ ವಿದ್ಯಾಲಯವಾಗಿದ್ದಿತು. ತಮ್ಮ ಸಾಧನೆಗಳಿಂದ ಆತ್ಮೋದ್ಧಾರವನ್ನು ಮಾಡಿಕೊಳ್ಳುವುದೇ ಆಶ್ರಮ ವಾಸಿಗಳ ಧ್ಯೇಯವಾಗಿದ್ದರೂ ಜನತೆಯ ಜೀವನದಿಂದ ಅವರು ದೂರ ನಿಂತಿರಲಿಲ್ಲ. ಜನತೆಯ ಸೇವೆಯೇ ಈಶಸೇವೆಯ ಒಂದು ರೂಪು! ಆ ವಿಶ್ವನಿಯಾಮಕನ ಕಿಡಿ ಗಳು ಎಲ್ಲರಲ್ಲಿಯೂ ಬೆಳಗುತ್ತಿರುವದರಿಂದ ಜನತೆಯ ಸೇವೆಯನ್ನು ಗೈದರೆ ಈಶ್ವರಾ ರಾಧನೆಯನ್ನು ಮಾಡಿದಂತಾಗುತ್ತದೆ, ಎಂಬುದನ್ನು ಆಚಾರ್ಯ ನಳಿನೀರಂಜನನು ತನ್ನ ಅನುಯಾಯಿಗಳಿಗೆ ಉದ್ಬೋಧಿಸಿ, ಅವರನ್ನು ಜನಸೇವೆಗೆ ಪ್ರೇರೇಪಿಸಿದ್ದನು. ಆದುದರಿಂದ ಸಾಧನಕುಟೀರವು ಕೇವಲ ತತ್ವಚಿಂತನೆಗಳಿಗಿರುವ ಒಂದು ಗುಡಸಿಲಾ ಗಿರಲಿಲ್ಲ. ಅದು ಜನತೆಯನ್ನು ಎಚ್ಚರಿಸಿ, ರಾಷ್ಟ್ರಬೋಧವನ್ನೂ ನಾಡದೇವಿಯ ಸೇವೆಯ ಮಹಾಮಂತ್ರವನ್ನೂ ಬೋಧಿಸಲಿರುವ ಒಂದು ವಿದ್ಯಾಮಂದಿರವಾಗಿದ್ದಿತು. ಆಚಾರ್ಯ ನಳಿನೀರಂಜನನ ನೇತೃತ್ವದಲ್ಲಿ ಶ್ಲಾಘನೀಯವಾದ ರೀತಿಯಲ್ಲಿ ಅದು ಜನತೆಯನ್ನು ಉದ್ಧರಿಸುವ ಕೆಲಸವನ್ನು ಕೈಕೊಂಡಿತು. ಆಚಾರ್ಯನು ಆ ಪವಿತ್ರ ಭೂಮಿಯ ಸ್ಥಾಪಕನೆಂಬ ಕೀರ್ತಿಯನ್ನು ಸಂಪಾದಿಸಿದನು.

ಈ ರೀತಿಯ ಒಂದು ಆಶ್ರಮದ ಮೂಲಕ ಜನತೆಯನ್ನು ಉದ್ಧರಿಸಬಹುದೆಂಬ ವಿಶ್ವಾಸವು ಹಲವರಿಗೆ ಇಲ್ಲದಿರಬಹುದು, ಆದರೆ ಭಾರತವರ್ಷವು ಏಳಿಗೆಯನ್ನು ಹೊಂದಬೇಕಾದರೆ ಈ ರೀತಿಯ ಆಶ್ರಮಗಳು ಅತ್ಯಾವಶ್ಯಕವಾಗಿವೆ. ನಾಡದೇವಿಯ ಬಿಡುಗಡೆಗಾಗಿ ಯತ್ನಿಸಬೇಕಾದರೆ, ನಾವು ಮೊದಲು ಚೈತನ್ಯವನ್ನು ಸಂಪಾದಿಸ ಬೇಕಾಗಿದೆ; ನಮ್ಮ ಮನಸ್ಸುಗಳನ್ನು ದೃಢನಡಿಸಬೇಕಾಗಿದೆ! ನಮ್ಮ ಆತ್ಮಗಳನ್ನು ತಿಳಿದುಕೊಳ್ಳುವದಕ್ಕೂ ಕರ್ಮಯೋಗವನ್ನು ಪ್ರಯೋಗರೂಪದಲ್ಲಿ ಕೊಂಡಬರಲೂ ಸಾಧನಕುಟೀರದಂಥ ಆಶ್ರಮಗಳು ಅತ್ಯಾವಶ್ಯಕವು. ಅಲ್ಲಿ ತಾಯಸೇವೆಯನ್ನು ಮಾಡಲು ಹೊರಟ ಧೀರರು ನಾಡಸೇವೆಯ ಪ್ರಥಮ ಪಾಠಗಳನ್ನು ಕಲಿಯಬೇಕಾಗಿದೆ. ಯಾವ ಸಿದ್ಧಾಂತಗಳನ್ನಾದರೂ ಸರಿ, ಅವುಗಳನ್ನು ಜನತೆಗೆ ಬೋಧಿಸುವ ಮುನ್ನ ಆ ತತ್ವಗಳನ್ನು ಆಚರಣೆಗೆ ತರುವದುಅಗತ್ಯವಾಗಿದೆ. ಹಾಗಾದರೆ ಮಾತ್ರ ಬೋಧಕರ ನುಡಿಗಳಿಗೆ ಬೆಲೆಯಿದೆ. ಆಚರಣೆಗೆ ತರದೆ ಉಪನ್ಯಾಸಗಳ ಮುಖೇನ ತತ್ವಗಳನ್ನು ಜನ ರಿಗೆ ಹೇಳುವದರಿಂದ ಜನರಿಗಾಗಲೀ ನಾಡಿಗಾಗಲೀ ಯಾವ ಶ್ರೇಯಸ್ಸೂ ಉಂಟಾಗ ಲಾರದು. ಆದುದರಿಂದ ತತ್ವಗಳನ್ನು ಆಚರಣೆಗೆ ತರುವದಕ್ಕೂ ಜೀವನದ ನೈರ್ಮಲ್ಯ ವನ್ನು ಕಾಪಾಡುವದಕ್ಕೂ ಸಾಧನಕುಟೀರದಂಥ ಆಶ್ರಮಗಳು ಅಗತ್ಯವಾಗಿವೆ.

ಪಾಶ್ಚಾತ್ಯರೀತಿಯಲ್ಲಿ ವಿದ್ಯಾಭ್ಯಾಸವನ್ನು ಹೊಂದಿದವರಿಗೆ ಆಶ್ರಮಜೀವನದ ಮಹತ್ವವು ತಿಳಿಯದು; ಆದರೆ ಹಿಂದಿನ ಕಾಲದ ನಮ್ಮ ಹಿರಿಯರು ಈ ಆಶ್ರಮಗಳಲ್ಲಿ ಜ್ಞಾನಾರ್ಜನೆಯನ್ನು ಮಾಡಿದವರಾಗಿದ್ದರು. ಸತ್ಯಶೋಧಕರಾದ ಮುನಿವರ್ಯರ ಆಶ್ರಮಗಳಲ್ಲಿ ಜೀವಿಸಿ ಗುರುಗಳಿಂದ ವಿದ್ಯೆಯನ್ನು ಸಂಪಾದಿಸುತ್ತಿದ್ದರು-ಪ್ರಾಚೀನ ಕಾಲದ ನಮ್ಮ ಹಿರಿಯರು. ಹಿಂದಣ ಕಾಲದಲ್ಲಿ ಶಾಂತತೆಯ ವಾತಾವರಣದಿಂದಲೂ ನೈಸರ್ಗಿಕ ಸೊಬಗಿನಿಂದಲೂ ಕೂಡಿದ ಹಳ್ಳಿಗಳು ವಿದ್ಯೆಯ ಕೇಂದ್ರಗಳಾಗಿದ್ದವು; ಈಗಿನಂತೆ ನಗರಗಳಾಗಿರಲಿಲ್ಲ. ನಿರ್ಮಲವಾದ ಗ್ರಾಮಜೀವನವು ವಿದ್ಯಾರ್ಥಿಗಳನ್ನು ಪವಿತ್ರಗೊಳಿಸುತ್ತಲಿದ್ದಿತು. ಸೃಷ್ಟಿಯಲ್ಲಿ ಸ್ವಾಭಾವಿಕವಾಗಿ ಅಡಗಿರುವ ರಮ್ಯತೆ ಯನ್ನು ಮನುಷ್ಯನು ತಿಳಿಯುತ್ತಿದ್ದನು; ಆದರ ಈ ಕಾಲದಲ್ಲಿ ಆ ಹಳೆಯ ಪದ್ಧತಿ ಗಳೆಲ್ಲವೂ ಬದಲಾಯಿಸಿವೆ. ಈಗ ನಗರಗಳು ವಿದ್ಯೆಯ ಕೇಂದ್ರಗಳಾಗಿ ಪರಿಣಮಿಸಿವೆ. ಆದರ ಪರಿಣಾಮವಾಗಿ ಗ್ರಾಮಗಳು ಅಜ್ಞಾತೆಯಿಂದ ಸಿಬಿಡವಾದುವು. ಇಂದಿನ ವಿದ್ಯಾಭ್ಯಾಸವು ನಮ್ಮ ನಾಡಿನ ಉಸುರಿನಂತಿರುವ "ಸ್ವಾವಲಂಬನೆ"ಯನ್ನು ತಡೆದಿದೆ. ಪರಾಧೀನತೆಯಲ್ಲಿ ನಮಗಿರುವ ವ್ಯಾಮೋಹವು ಇದರ ಫಲವಾಗಿ ಹೆಚ್ಚುತ್ತಲಿದೆ.

ಈ ಪದ್ದತಿಯಲ್ಲಿ ಒಂದು ಪರಿವರ್ತನೆಯಾಗಬೇಕೆಂದೂ ಭಾರತ ವರ್ಷವು ಅಭ್ಯುನ್ನತೆಯನ್ನು ಪಡೆಯಬೇಕಾದರೆ ಇಂದಿನ ವಿದ್ಯಾಭ್ಯಾಸ ಪದ್ಧತಿಯಲ್ಲಿಯೇ ಒಂದು ಕ್ರಾಂತಿಯುಂಟಾಗಬೇಕೆಂದೂ ನಮ್ಮ ನಾಡಿನ ಮುಂದಾಳುಗಳು ನುಡಿಯುತ್ತ ಲಿದ್ದಾರೆ. ಅವರ ಮಾತುಗಳಲ್ಲಿ ಅರ್ಥವಿಲ್ಲದೆಯಿಲ್ಲ. ನಮ್ಮ ನಾಡಿನ ಜೀವನ ನಾಡಿಯನ್ನು ಅರಿತಿರುವ ಆ ಮಹನೀಯರು, ಇಂದಿನ ವಿದ್ಯಾಲಯಗಳು ಕೇವಲ ಗುಮಾಸ್ತರನ್ನೂ ಪರದಾಸ್ಯ ಭಾವನೆಯಿಂದ ಕೂಡಿದವರನ್ನೂ ರಚಿಸುತ್ತಲಿರುವ ಯಂತ್ರಶಾಲೆಗಳಾಗಿರುತ್ತವೆ, ಎಂದು ನುಡಿಯುತ್ತಿದ್ದಾರೆ ವಿದ್ಯಾರ್ಜನೆಯ ನಂತರ ಉಪಜೀವನಕ್ಕಿರುವ ದಾರಿಯನ್ನು ಇಂದಿನ ವಿದ್ಯಾಭ್ಯಾಸವು ತೋರಿಸಿಕೊಡುತ್ತಿರುವ ದಿಲ್ಲ. ಜೀವನದ ತತ್ವವನ್ನೂ ನಾಡದೇವಿಯ ಸೇವೆಯ ಮಂತ್ರವನ್ನೂ ಕಲಿ ಸುವದಿಲ್ಲ. ಇಂದಿನ ವಿದ್ಯಾಭ್ಯಾನ ಪದ್ಧತಿಗೆ ಕಳೆಯಿಲ್ಲ!

ಈ ಮಲಿನತೆಯನ್ನು ಹೋಗಲಾಡಿಸಲು ನಮ್ಮ ನಾಡಿನ ಮುಂದಾಳುಗಳು ಪ್ರಯತ್ನಿಸದೆ ಇರಲಿಲ್ಲ. ಇಂದಿನ ವಿದ್ಯಾಭ್ಯಾನದಿಂದ ಜನತೆಗೆ ಒದಗುತ್ತಲಿರುವ ಬಲ ಹೀನತೆಯನ್ನು ತಿಳಿದು ಕವಿಸಮ್ರಾಟ ರವೀಂದ್ರರು "ಶಾಂತಿನಿಕೇತನ"ವನ್ನು ಸ್ಥಾಪಿಸಿ ಗ್ರಾಮಗಳಲ್ಲಿ ವಿದ್ಯಾಭ್ಯಾಸ ಕೇಂದ್ರಗಳನ್ನು ಸ್ಥಾಪಿಸುವ ಉದ್ಯಮಕ್ಕೆ ಮುನ್ನುಡಿಯನ್ನು ಹಾಕಿದರು. ಆದರಂತೆಯೇ ಮಹಾತ್ಮಾಜಿಯವರು ಜನತೆಗೆ ನಿರ್ಮಲ ಜೀವನವನ್ನು ಕಲಿಸುವದಕ್ಕಾಗಿಯೂ ತರುಣರನ್ನು ನಾಡಸೇವೆಗೆ ಹಚ್ಚುವ ದಕ್ಕಾಗಿಯೂ ಸಾಬರಮತಿಯಲ್ಲಿ ತಮ್ಮ ಸತ್ಯಾಗ್ರಹ ಆಶ್ರಮವನ್ನು ಸ್ಥಾಪಿಸಿದರು. ಅಂತು ನಾಡಿನ ವಿವಿಧ ಭಾಗಗಳಲ್ಲಿ ಜನತೆಯ ಅಭ್ಯುದಯವನ್ನು ಕಾಂಕ್ಷಿಸಿ ಹಲವು ಆಶ್ರಮಗಳು ಉದಯವನ್ನು ಹೊಂದಿದುವು.

ಈ ರೀತಿ ಉದಯವನ್ನು ಹೊಂದಿದ ಆಶ್ರಮಗಳಲ್ಲಿ "ಸಾಧನಕುಟೀರ"ವು ಒಂದಾಗಿದ್ದಿತು. ಈ ಕುಟೀರವು ನಳಿನೀರಂಜನನ ನೇತೃತ್ವದಲ್ಲಿ ತನ್ನ ತಾಯ್ನಾಡಿಗೆ ಅಪಾರವಾದ ಸೇವೆಯನ್ನು ಸಲ್ಲಿಸಿತು. ಹದಿನೆಂಟು ಸಂವತ್ಸರಗಳ ದೀರ್ಘಕಾಲವನ್ನು ಆ ಮಹನೀಯನು ಅವಿಶ್ರಾಂತವಾಗಿ ಜನಸೇವೆಗೆ ವಿನಿಯೋಗಿಸಿದನು. ಜನರ ಮಧ್ಯದಲ್ಲಿ ಹರಡಿರುವ ಅಜ್ಞಾನವನ್ನೂ ಅಂಧವಿಶ್ವಾಸಗಳನ್ನೂ ಹೊಡೆದೋಡಿಸುವ ಭಗೀರಥ ಪ್ರಯತ್ನದಲ್ಲಿ ಅವನು ಕಲಿತನದಿಂದ ಕಾದಿದನು. ಗ್ರಾಮಕೈಗಾರಿಕೆಗಳಿಗೆ ಬೆಂಬಲವನ್ನು ನೀಡಿ, ಸ್ವಾವಲಂಬನೆಯೇ ಶ್ರೇಯಸ್ಕರವೆಂಬ ದಾರಿಯನ್ನು ಆಚಾರ್ಯನು ನಾಡಿಗೆ ತೋರಿಸಿಕೊಟ್ಟನು. ವಿಶಾಲವಾದ ಒಂದು ದೃಷ್ಟಿಕೋನದಲ್ಲಿ ಜಗತ್ತನ್ನು ಅವಲೋಕಿಸಬೇಕೆಂಬುದೇ ಅವನ ತತ್ವವು. ತ್ಯಾಗವೇ ಬಾಳಿನಲ್ಲಿರುವ ಸುಗಂಧವೆಂಬುದಾಗಿ ಅವನು ತನ್ನ ಪ್ರಯತ್ನಗಳ ಮೂಲಕ ಪ್ರದರ್ಶಿಸಿದನು. ಬರಿಯ ಬಾಯಿಯಿಂದ ತತ್ವವನ್ನು ಉಸುರಿ ಸುಮ್ಮನಿರುವ ವ್ಯಕ್ತಿಯು ಅವನಾಗಿರಲಿಲ್ಲ. ತನ್ನ ಸ್ಥಿರಪ್ರಯತ್ನಗಳಿಂದ ತತ್ವಗಳನ್ನು ಆಚರಣೆಯ ರೂಪಕ್ಕೆ ತಂದನು. ಈ ಪುಣ್ಯಪುರುಷನ ಶಿಷ್ಯನಾಗಿ ರಂಗನು ತನ್ನ ಜೀವನದಲ್ಲಿ ಹನ್ನೆರಡು ಸಂವತ್ಸರಗಳನ್ನು ವ್ಯಯಗೊಳಿಸಿದನು. ಈ ಆಚಾರ್ಯನಿಂದ ರಂಗನ ಜೀವನವು ಪ್ರಕಾಶಮಾನವಾಯಿತು. ಆಚಾರ್ಯನಿಂದ ನಾಡಸೇವೆಯ ಪಾಠಗಳನ್ನು ಅವನು ಕಲಿತುಕೊಂಡನು. ತನ್ನ ತಾಯ್ನಾಡ ಸೇವೆಗೆ ಅವಶ್ಯವಿರುವ ಚೈತನ್ಯವನ್ನೂ ಸ್ಫೂರ್ತಿಯನ್ನೂ ರಂಗನು ಗಂಗಾಪ್ರವಾಹದಂತೆ ಪರಿಪೂರ್ಣನಾಗಿರುವ ತನ್ನ ಆಚಾರ್ಯನಿಂದ ಹೀರಿದನು.

ಮಡದಿ-ಮಕ್ಕಳೊಡನೆ ಹಿಂದಿರುಗಿ ಬಂದ ತನ್ನ ಪ್ರಿಯಶಿಷ್ಯನಿಗೆ ತನ್ನ ಬಾಹುಗಳೆರಡನ್ನೂ ಚಾಚಿ ಆಚಾರ್ಯನು ಸುಸ್ವಾಗತವನ್ನು ಬಯಸಿದನು. ಆಶ್ರಮವಾಸಿಗಳು ರಂಗನ ವಾಸಕ್ಕಾಗಿ ತಮ್ಮ ಕುಟೀರದ ಬಳಿ ಹೊಸದೊಂದು ಗುಡಿಸಿಲನ್ನು ನಿರ್ಮಿಸಿದ್ದರು. ಅತ್ಯಂತ ಸರಳವಾದ ರೀತಿಯಲ್ಲಾಗಿತ್ತು ಆ ಗುಡಿಸಿಲಿನ ರಚನೆಯು; ಆದರೆ ಚೆಲುವು ಹರಿಯುತ್ತಿದ್ದಿತು ಆ ರಚನೆಯಲ್ಲಿ.

ಆಚಾರ್ಯನು ರಂಗನ ಮಡದಿಯನ್ನು ನೋಡಿ ಹೇಳಿದನು:—"ತಂಗೀ, ನೀನು ಅಪಾರವಾದ ದುಃಖವನ್ನು ಅನುಭವಿಸಿದ ಮೇಲೆ ಇಲ್ಲಿಗೆ ಬಂದಿರುತ್ತೀಯೆ! ಇಲ್ಲಿ ನಿನ್ನ ಜೀವನವು ಸುಖಪ್ರದವಾಗಲಿ! ಎಂದು ಹಾರೈಸುತ್ತೇನೆ."

"ತಮ್ಮಗಳ ಅನುಗ್ರಹ!"

"ಮಗೂ, ಇತ್ತ ಬಾ!" ಎಂದು ನಳಿನೀರಂಜನನು ರಾಮಚಂದ್ರನ ಕೈ ಹಿಡಿದು ಎತ್ತಿಕೊಂಡನು. ಬಾಲಕನ ಮುದ್ದುಮೋರೆಯನ್ನು ನೋಡುವಾಗ ಆಚಾರ್ಯನ ಹೃದಯದಲ್ಲಿ ಅಳಿದು ಹೋದ ಅವನ ಕಂದನ ನೆನಪು ಬಂದಿತು. ಆ ಲೋಚನಗಳಲ್ಲಿ ಬಾಷ್ಪಕಣಗಳು ತುಂಬಿದವು. ಅವನು ಇದುವರೆಗೆ ನಾಡಸೇವೆಯ ಕಠೋರತಪಸ್ಸಿನಲ್ಲಿ ನಿರತನಾಗಿದ್ದರೂ ದುಃಖವೆಂಬ ದೌರ್ಬಲ್ಯವು ಅವನ ಹೃದಯವನ್ನು ಬಿಟ್ಟು ತೊಲಗಿರಲಿಲ್ಲ. ಆಗಾಗ ಹಿಂದಿನ ನೆನಪುಗಳು ಬಂದು ಮನುಷ್ಯನ ಹೃದಯ

ತನ್ನು ಪೀಡಿಸುತ್ತಲಿರುವುದು. ಲೋಕದಲ್ಲಿರುವ ಸಮಸ್ತ ವಸ್ತುಗಳೂ ನಶಿಸುತ್ತವೆ ಎಂಬುದನ್ನು ನಾವು ಬಲ್ಲೆವು. ಜಗತ್ತು ನಶ್ವರವಾದರೂ ಜಗತ್ತಿನ ಮೇಲೆ ನಮಗಿರುವ ಮಮತೆಯು ಅಳಿಸಿಹೋಗುವದಿಲ್ಲ. ವಸ್ತುಸ್ಥಿತಿ ಹೀಗಿರಲು, ನಳಿನೀರಂಜನನಿಗೆ ತನ್ನ ಕಂದನ ನೆನಪು ಬರಲು ಶೋಕವು ಹುಟ್ಟಿದುದರಲ್ಲಿ ಅತಿಶಯವೇನೂ ಇಲ್ಲ.

"ಮಗೂ, ನಿನ್ನ ಹೆಸರೇನು?"

"ರಾಮಚಂದ್ರ" ಎಂದು ಬಾಲಕನು ಉತ್ತರವನ್ನು ನೀಡಿದನು.

ಅನಿರ್ವ್ಯಾಜವಾದ ಪ್ರೇಮವು ನಳಿನೀರಂಜನನ ಎದೆಯಲ್ಲಿ ತುಂಬಿದ್ದಿತು. ಅವನು ಕಂದನನ್ನು ಎತ್ತಿ ಮುದ್ದಾಡಿದನು.

ಆ ದಿನ ಸಂಜೆಯಾಯಿತು; ಎಲ್ಲರೂ ನಿತ್ಯಪದ್ಧತಿಯಂತೆ ಪ್ರಾರ್ಥನಾಲಯದಲ್ಲಿ ನೆರೆದಿದ್ದರು. ನಿತ್ಯ ಪರಂಜ್ಯೋತಿಯನ್ನು ಪ್ರಾರ್ಥಿಸುವದರಲ್ಲಿ ಅವರು ನಿರತರಾಗಿದ್ದರು. ಆ ಸಂದರ್ಭದಲ್ಲಿ ಒಂದು ಪ್ರಭೆಯು ಕುಟೀರದೊಳಗೆ ಪ್ರವೇಶಿಸಿತು. ನಳಿನೀರಂಜನನು ಮೊಗವೆತ್ತಿ ನೋಡಿದನು. ಸಂನ್ಯಾಸಿಯೊಬ್ಬನು ಕುಟೀರದೊಳಗೆ ಪ್ರವೇಶಿಸುತ್ತಿರುವ ಚಿತ್ರವು ದೃಗ್ಗೋಚರವಾಯಿತು. ಸಂನ್ಯಾಸಿಯನ್ನು ಕಾಣಲು, ನಳಿನೀರಂಜನನು ಆತನಿಗೆ ಪ್ರಣಾಮಗಳನ್ನು ಗೆಯ್ದನು.

"ಮಗೂ, ಇದುವರೆಗೆ ಕರ್ಮಬಾಹುಲ್ಯವಾದ ಬದುಕಿನಿಂದ ಬಳಲಿದೆಯಾ?"

"ಜ್ಞಾನಪೀಯೂಷವೇ ತಮ್ಮಿಂದ ನನಗೆ ಆ ದಿನ ಸಿದ್ಧಿಸಿರಲು, ಇನ್ನೆಲ್ಲಿಯ ಬಳಲಿಕೆಯು?"

"ಕಂದಾ, ನೀನು ಉತ್ತೀರ್ಣನಾದೆ, ಒಬ್ಬ ಧೀರನಂತೆ ಕುಲಾಲ ಚಕ್ರದಂತೆ ಚಲಿಸುತ್ತಿರುವ ಈ ಪ್ರಪಂಚದಲ್ಲಿ ಕರ್ಮನಿರತನಾಗಿ ನೀನು ವಿಜಯುವನ್ನು ಸಂಪಾದಿಸಿದೆ. ಬದುಕೆಂಬುದು ಸುಲಭವಾದ ಕೆಲಸವಲ್ಲ. ಬಾಳುವುದೇಕೆಂಬುದನ್ನು ಅಳಿದು, ಒಬ್ಬ ಮನುಷ್ಯನಂತೆ ಬಾಳುವುದು ಪ್ರಯಾಸವಾದ ಕಾರ್ಯವು. ಸ್ವಾರ್ಥತೆಯಿಲ್ಲದ ಪಾವನಪಥವನ್ನು ಹಿಡಿದು, ನಾಡಿನ ಹಿತವನ್ನು ಬಯಿಸಿ ಪ್ರಯತ್ನಿಸುವುದೆಂದರೆ, ಅದೊಂದು ಮಹತ್ತಾದ ಯಜ್ಞವಾಗಿರುತ್ತದೆ. ಇಂದಿನ ಭಾರತವರ್ಷದ ಅಭ್ಯುದಯಕ್ಕಾಗಿ ಪ್ರಯತ್ನಿಸಲು ಆ ದಿನ ಹೃಷೀಕೇಶದಲ್ಲಿ ನಾನು ನಿನಗೆ ಉಪದೇಶಿಸಿದೆನು. ಅದರಂತೆಯೇ ಈ ಹದಿನೆಂಟು ಸಂವತ್ಸರಗಳ ಕಾಲ ನೀನು ಹೆಣಗಿರುತ್ತೀಯೆ. ನೀನು ಹತ್ತಿಸಿದ್ದ ಪಂಜನ್ನು ಕಾಯಲು ಬೇರೊಬ್ಬನು ಲಭಿಸಿರುತ್ತಾನೆ. ಭಾರತವರ್ಷಕ್ಕೆ ದಾರಿಯನ್ನು ತೋರಿಸಲು ಯೋಗಿರಾಜರಾದ ಮಹಾತ್ಮಜೀಯವರಿದ್ದಾರೆ. ನೀನು ತೀವ್ರವಾದ ಕರ್ಮರಂಗದಿಂದ ವಿಶ್ರಾಂತಿಯನ್ನು ಹೊಂದುವು."

"ಆ ದಿನವೇ ಈ ಕರ್ಮವಲಯದಿಂದ ವಿಮೋಚನೆಯನ್ನು ಹೊಂದಲು ನನಗೆ ಬಯಕೆಯಿದ್ದಿತು; ಆದರೆ ತಮ್ಮ ನುಡಿಗಳಂತೆ ಈ ಹದೆನೆಂಟು ಸಂವತ್ಸರಗಳ ಕಾಲ ಅವಿಶ್ರಾಂತವಾಗಿ ಈ ಕರ್ಮರಂಗದಲ್ಲಿ ಪ್ರವೃತ್ತಿಸಿದೆನು."

'ವಿಶ್ರಾಂತಿಯನ್ನು ಹೊಂದುವ ವೇಳೆಯು ಬಂದಿದೆ; ನೀನು ನನ್ನೊಡನೆ ಬಾ!'

ಅನಂತರ ಸಂನ್ಯಾಸಿಯು ಆಶ್ರಮವಾಸಿಗಳನ್ನು ನೋಡುತ್ತ ಹೀಗೆ ನುಡಿದನು: "ಗೆಳೆಯರೇ, ನಾಡಸೇವೆಗೆ ದಾರಿಯನ್ನು ನಳಿನೀರಂಜನನು ತೋರಿಸಿಕೊಟ್ಟಿರುತ್ತಾನೆ ಆ ಪಥವನ್ನು ಅನುಸರಿಸಿ ಭಾರತವರ್ಷವನ್ನು ನೀವು ಉದ್ಧರಿಸಿರಿ! ಪ್ರಾಚೀನ ಭಾರತೀಯರ ಸಿದ್ಧಾಂತಗಳನ್ನೂ ಸಂಸ್ಕೃತಿಯನ್ನೂ ಕಾಯುವ ಕೆಲಸವು ನಿಮ್ಮದು. ಭಾರತವರ್ಷವು ಭೌತಿಕವಾದದ ಬಂಧನಕ್ಕೆ ಸಿಲುಕಿ ನರಳುತ್ತಿರುವ ವಿಶ್ವಕ್ಕೆ ಒಂದು ನವೀನ ಸಂದೇಶವನ್ನು ನೀಡಬೇಕಾಗಿದೆ ಆ ದಿವ್ಯ ಸಂದೇಶವನ್ನು ನೀಡಲು ನೀವು ಆಕೆಯನ್ನು ಶಕ್ತಿಸಂಪನ್ನಳನ್ನಾಗಿ ಮಾಡಬೇಕು ಹೆಚ್ಚಿನ ಉಪದೇಶಗಳನ್ನು ನಾನು ನಿಮಗೆ ನೀಡಬೇಕಾದ ಅವಶ್ಯವಿಲ್ಲ; ಏಕೆಂದರೆ, ನೀವು ನಳಿನೀರಂಜನನ ಮುಖದಿಂದ ಕಲಿಯಬೇಕಾದ ವಾತಗಳನ್ನು ಕಲಿತುಕೊಂಡಿರುವಿರಿ. ತರುಣರಾದ ನೀವು ಉರಿಯುತ್ತಿರುವ ಆ ಸ್ವಾತಂತ್ರ್ಯದ ಪಂಜನ್ನು ಕಾಯಬೇಕಾಗಿದೆ. ನಿಮ್ಮ ಉದ್ಯಮಗಳು ಶುಭದಲ್ಲಿ ಪರಿಣಮಿಸಲಿ!'

ಪದ್ಮಳ ವದನಮಂಡವನ್ನು ನೋಡುತ್ತ ತಪಸ್ವಿಯು, "ತಂಗೀ, ನೀನಿಂದು ಪತಿಯ ಸಮಾಗಮವನ್ನು ಹೊಂದಿರುತ್ತೀಯೆ. ನಿನ್ನ ಪತಿಯೊಡನೆ ಅಭಿನವಭಾರತವನ್ನು ಸೃಷ್ಟಿಸುವ ಕೃತ್ಯಗಳಲ್ಲಿ ಉದ್ಯುಕ್ತಳಾಗು! ಅಜ್ಞತೆಯಲ್ಲಿ ಬಿದ್ದಿರುವ ನಮ್ಮ ನಾಡವನಿತೆಯರನ್ನು ಉದ್ಧರಿಸುವ ಕೆಲಸಗಳಲ್ಲಿ ಬದ್ಧಕಂಕಣವನ್ನು ಧರಿಸು! ಇಂದಿನ ವನಿತೆಯರೇ ನಾಳಿನ ಜನಾಂಗದ ತಾಯಂದಿರು; ಆದುದರಿಂದ ಭವಿಷ್ಯಜ್ಜನಾಂಗವು ಅಭಿವೃದ್ಧಿಯನ್ನು ಹೊಂದಬೇಕಾದರೆ, ತಾಯಂದಿರೂ ವಿದ್ಯಾವತಿಯರೂ ದೇಶಾಭಿಮಾನಪರಿಪೂರ್ಣರೂ ಆಗಬೇಕಾಗಿದೆ. ಆ ಬೆಳಕನ್ನು ಅವರಿಗೆ ನೀನು ನೀಡು!"

## ಕೊನೆಯ ಮಾತು

ಬಹು ದೀರ್ಘವಾದ ಈ ಕತೆಯಿಂದ ವಾಚಕರು ಬೇಸತ್ತಿರಬಹುದು. ಹೆಚ್ಚಾಗಿ ಅವರ ಸಮಯವನ್ನು ವ್ಯಯಗೊಳಿಸಲು ನಾನು ಬಯಸುವುದಿಲ್ಲ.

ಆಧ್ಯಾತ್ಮಿಕಸ್ವಾತಂತ್ರ್ಯವನ್ನು ಸಂಪಾದಿಸುವದಕ್ಕಾಗಿ ನಳಿನೀರಂಜನನು ತಪಸ್ವಿಯೊಡನೆ ತೆರಳಿದನು. ರಂಗನಾಥನು "ಸಾಧನ ಕುಟೀರ"ದ ಸಂಚಾಲಕನಾದನು. ಅವನು ತನ್ನ ಗೆಳೆಯರೊಡನೆ ನಾಡಿನಲ್ಲಿ ಸ್ವಾತಂತ್ರ್ಯಬೋಧವು ಜನಿಸುವಂತೆ ಮಾಡಿದನು. ಅವನ ಬಲಗೈಯಂತೆ ನಿಂತು ಪದ್ಮಳು ಹಳ್ಳಿಯ ಹೆಂಗಸರ ವಿದ್ಯಾಭಿವೃದ್ಧಿಗಾಗಿ ತನ್ನ ಸಮಯವನ್ನು ವಿನಿಯೋಗಿಸಿದಳು. ತ್ಯಾಗಪರಿಪೂರ್ಣವಾಗಿದ್ದಿತು. ಆ ದಂಪತಿಗಳ ಬದುಕು.

ಮಾಧವನು ರಾಮನಗರದಲ್ಲಿಯೇ ನಿಂತು ತನ್ನ ಪತ್ರಿಕೆಯ ಮೂಲಕ ಜನಜಾಗ್ರತಿಗಾಗಿ ಪ್ರಯತ್ನಿಸುತ್ತಿದ್ದನು ಎಂದು ಮಾತ್ರವಲ್ಲ. ಜನತೆಯ ಮಧ್ಯದಲ್ಲಿ

ವಿದ್ಯೆಯನ್ನು ಹರಡುವದಕ್ಕಾಗಿ ಅವನು ಬಹು ಸ್ಫೂರ್ತಿಯಿಂದ ವರ್ತಿಸುತ್ತಲಿದ್ದನು. ಜನತೆಯ ಮಧ್ಯದಲ್ಲಿ ಹರಡಿರುವ ಬಡತನವನ್ನು ಹೋಗಲಾಡಿಸುವದಕ್ಕಾಗಿ ಖಾದೀ ಪ್ರಸಾರಕ್ಕೂ ಗ್ರಾಮಕೈಗಾರಿಕೆಗಳಿಗೂ ಪ್ರೋತ್ಸಾಹವನ್ನು ನೀಡುತ್ತಿದ್ದನು.

ಸರೋಜಳು ಪತಿಯ ಸಂಗಮವನ್ನು ಪಡೆದಳು. ವೆಂಕಟರಾಮನು ಮೊದಲಿನ ವೆಂಕಟರಾಮನಲ್ಲ; ಅವನು ಪೂರ್ಣಪರಿವರ್ತನೆಯನ್ನು ಹೊಂದಿರುತ್ತಾನೆ; ತನ್ನ ಹಿಂದಿನ ದುರಾಚಾರಗಳನ್ನು ಪರಿತ್ಯಜಿಸಿದ್ದಾನೆ. ಅವನು ತನ್ನ ಮಡದಿಯನ್ನು ಬಹು ಪ್ರೇಮದೃಷ್ಟಿಯಲ್ಲಿ ವೀಕ್ಷಿಸುತ್ತಲಿದ್ದಾನೆ. ಅವನು ರಂಗನ ನಿರ್ದೇಶದಂತೆ ಸಾಧನಕುಟೀರದಲ್ಲಿ ನಾಡಸೇವೆಯ ವ್ರತವನ್ನು ಕೈಕೊಂಡಿರುವನು. ಸರೋಜಳು ಗ್ರಾಮೀಣ ವನಿತೆಯರ ವಿದ್ಯಾಭ್ಯಾಸದ ಉದ್ಯಮಗಳಲ್ಲಿ ಪದ್ಮಳ ಬಲಗೈಯಂತೆ ನಿಂತು ದುಡಿಯುತ್ತಲಿದ್ದಾಳೆ.

ನನ್ನ ಲೇಖನಿಗೆ ಸ್ವಲ್ಪ ವಿಶ್ರಾಂತಿಯನ್ನು ನೀಡಲು ಬಯಸುತ್ತಲಿದ್ದೇನೆ. ರಂಗನ ಜೀವನದ ಕತೆಯು ಇಲ್ಲಿಗೆ ಸಮಾಪ್ತಿಯನ್ನು ಹೊಂದಿರುವದಿಲ್ಲ. ಇದು ಆ ಮಹಾಶಯನ ನಾಡಸೇವೆಯ ಕೆಲಸಗಳ ಮುನ್ನುಡಿಯು ಮಾತ್ರವಾಗಿದೆ. ಉಳಿದುದನ್ನು ಸಮಯ ದೊರೆತಾಗ ಇನ್ನೊಮ್ಮೆ ಹೇಳುವೆನು.

ನಮ್ಮ ನಾಡು ಜಾಗೃತವಾಗಿದೆ; ನಾಡದೇವಿಯು ತನ್ನ ಶೃಂಖಲೆಗಳನ್ನು ಹರಿದೊಗೆಯಲು ಪ್ರಯತ್ನಿಸುತ್ತಲಿದ್ದಾಳೆ. ಭಾರತೀಯರಲ್ಲಿ ನವಚೈತನ್ಯವು ಹರಿದಾಡುತ್ತಿದೆ. ಭಾರತದ ಭಾಗ್ಯಾಕಾಶದಲ್ಲಿ ಸ್ವಾತಂತ್ರ್ಯದ ಉದಯಭಾನುವು ಗೋಚರಿಸುತ್ತಲಿದ್ದಾನೆ. ಆ ಭಾಸ್ಕರನ ಆಗಮನದೊಡನೆ ದಾಸ್ಯಯಾಮಿನಿಯು ಹಿಂದಕ್ಕೆ ಸರಿಯುತ್ತಲಿದೆ. ಈ ಮಂಗಳ ಮುಹೂರ್ತದಲ್ಲಿ ನಾಡದೇವಿಯನ್ನು ಪ್ರಾರ್ಥಿಸಿ, ಅಳಿಲಿಸೇವೆಯಂತೆ ನಮ್ಮಿಂದ ಸಾಧ್ಯವಾಗಬಹುದಾದ ತಾಯಸೇವೆಯನ್ನು ಸಲ್ಲಿಸೋಣ:—

ವಂದೇ ಮಾತರಂ ।
ಸುಜಲಾಂ ಸುಫಲಾಂ ।
ಮಲಯಜ ಶೀತಲಾಂ ।
ಸಸ್ಯ ಶ್ಯಾಮಲಾಂ ಮಾತರಂ ॥
ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಂ ।
ಫುಲ್ಲಕುಸುಮಿತ ಧ್ರುಮದಲಶೋಭಿನೀಂ ।
ಸುಹಾಸಿನೀಂ, ಸುಮಧುರಭಾಷಿಣೀಂ ।
ಸುಖದಾಂ ವರದಾಂ ಮಾತರಂ ॥

ವಂದೇ ಮಾತರಂ.

ಸರ್ವೇ ಜನಾಃ ಸುಖಿನೋ ಭವಂತು ।

— ಸಂಪೂರ್ಣ. —

## ೨ ಸಾಮಾಜಿಕ ಕಾದಂಬರಿ

೧ ಅಪರಾಜಿತ ೪ಆ
೨ ಎರಡನೇ ಹೆಂಡತಿ (೨ನೇ ಆ.) ೮ಆ
೩ ಕರಿನೀರು ೨ ರೂ
೪ ಕಮಲಾಕಾಂತ ಸಾಧು ೧೦ಆ
೫ ಗ್ರಹಲೀಲೆ [೨ನೇ ಆ.] ೧೨ಆ
೬ ಚಂದ್ರಕಾಂತ ೧೦ಆ
೭ ನೀಚ ಇನಾಮದಾರ (೩ನೇಆ) ೧೨ಆ
,, ರಫ್ ೧೦ಆ
೮ ನನ್ನ ಗೃಹಿಣಿ ೧೦ಆ
೯ ನನ್ನ ಅತ್ತಿಗೆ ೬ಆ
೧೦ ಪರಿವರ್ತನ. ೪ಆ
೧೧ ಬಂಧುಪ್ರೇಮ (೨ನೇ ಆ) ೮ಆ
೧೨ ಭಾಮಿನಿ ,, ೮ಆ
೧೩ ಭಾವಭಿನ್ನತೆ (೨ನೇ ಆ) ೨ಆ
೧೪ ಮಣಿ ೬ಆ
೧೫ ಮಹಾತ್ಮಾ ೩ಆ
೧೬ ರಾಜನಂದಿನಿ (೨ನೇ ಆ) ೮ಆ
೧೭ ರಾಕಾಚಂದ್ರ ೮ಆ
೧೮ ವಿಚಿತ್ರ ಸಂಸಾರ ೩ಆ
೧೯ ವಿಲಕ್ಷಣ ಪತಿಸೇವೆ ೪ಆ
೨೦ ಸುಮತಿ ೬ಆ
೨೧ ಸೌಭಾಗ್ಯ ತಿಲಕ [೨ನೇ ಆ] ೧ರೂ
,, ರಫ್ ೧೪ಆ
೨೨ ಸದ್ಗುಣಿಕಮಲಾ [೨ನೇಆ.] ೧ರೂ
೨೩ ಸತಿಸಾಹಸ [೫ನೇ ಆ.] ೪ಆ
೨೪ ಸ್ಕೂಲ ಮಿಸ್ಟ್ರೆಸ್ ೧|ರೂ
೨೫ ಸಾಧನ-ಕುಬೇರ ಗ್ಲೇಜ ೧ರೂ. ೪ಆ.
,, ರಫ್ ೧ರೂ. ೨ಆ

## ೩ ಡಿಟೆಕ್ಟಿವ್ಹ ಕಾದಂಬರಿ

೧ ಅಂಬಿಕೆ (೨ನೇ ಆ) ೧ರೂ. ೪ಆ
೨ ಇಂದುಮುಖಿ (೩ನೇ ಆ.) ೮ಆ
೩ ಕಳವೊ-ಕೊಲೆಯೊ? ೬ ಆ
೪ ಕಳ್ಳಸಿಗೆ ಗಾಟಿಕೆ [೨ನೇ ಆ] ೮ಆ
೫ ಕೃತಕ ಕೈಬೆರಳು ೧ರೂ
೬ ಘಾತುಕ ಶಿತಿಕಂಠ [೨ನೇ ಆ] ೧೦ಆ
೭ ತುಬ್ಬುಗಾರ ಸುಬ್ಬಣ್ಣ ೧|ರೂ
೮ ನಿಗೂಢ ಕೊಲೆ! [೨ನೇ ಆ.] ೮ಆ
೯ ಪತ್ತೇದಾರ ನರಸಿಂಗರಾಯ ೪ಆ
೧೦ ಫಿರಂಗಿಯ ಪ್ರತಿಹಿಂಸೆ ೧|ರೂ
,, ರಫ್ ೧ರೂ.
೧೧ ಭಗವಾನ್‌ದಾಸ (೨ನೇ ಆ) ೧ರೂ.
೧೨ ಭಯಂಕರ ಕೊಲೆ [೨ನೇ ಆ] ೧೨ಆ
೧೩ ಮಗನೇ ಅಲ್ಲ ೨ಆ
೧೪ ಮೋಹಿನಿ ಗ್ಲೇಜ ೧||ರೂ
,, ರಫ್ ೧|ರೂ
೧೫ ಮೋಜಿನ ಜೀವನ ಗ್ಲೇಜ ೧|ರೂ
,, ರಫ್ ೧ರೂ.
೧೬ ಮಾಯಾವತಿ ಗ್ಲೇಜ ೧|ರೂ.
,, ರಫ್ ೧ರೂ. ೨ಆ
೧೭ ರಾಜಕೀಯ ಗುಪ್ತರಹಸ್ಯ ೧||ರೂ.
,, ರಫ್ ೧|ರೂ
೧೮ ಲಲಿತೆ ೧೦ಆ
೧೯ ವಿಚಿತ್ರ ಚಟ [೩ನೇ ಆ] ೮ಆ
೨೦ ವಿಲಕ್ಷಣ ಸಾಹಸ ೮ಆ
೨೧ ಶ್ವೇತಾಂಬರಿ ೩ಆ

## ೪ ಪೌರಾಣಿಕ ಕಾದಂಬರಿ

೧ ದ್ರೋಣಾಚಾರ್ಯ ೩ಆ
೨ ಸತೀ-ಸುಕನ್ಯೆ ೮ಆ
೩ ವೀರ ವಿದುಲೆ ೩ಆ
೪ ಸತೀ-ಸೀಮಂತಿನಿ ೨ಆ

## ೫ ಚರಿತ್ರೆಗಳು

೧ ಆನಂದಮೂರ್ತಿ ೩ಆ
೨ ಶ್ರೀ ಏಕನಾಥ ಚರಿತ್ರೆ ೧ರೂ

೩ ಶ್ರೀ ಕೇಶವ ಸ್ವಾಮಿಗಳು ೨ಆ
೪ ಕನಕಮಹಿಮಾದರ್ಶ(೨ನೇ ಆ.) ೮ಆ
೫ ಶ್ರೀ ಗಿರಿಯಮ್ಮನ ಚರಿತ್ರೆ ೮ಆ
೬ ಗುಜರಾಥದ ಇತಿಹಾಸ ೬ಆ
೭ ಶ್ರೀ ಚಿದಂಬರ ವಿಜಯ ೧|||ರೂ
೮ ಶ್ರೀ ಜಯರಾಮ ಸ್ವಾಮಿಗಳು ೩ಆ
೯ ಶ್ರೀ ಟೆಂಬೇಮಹಾರಾಜರು ೧೦ಆ
೧೦ ಶ್ರೀ ನಾರಾಯಣ ಭಗವಾನರು ೮ಆ
೧೧ ಶ್ರೀ ನಾರಾಯಣ ಮಹಾರಾಜ ೪ಆ
೧೨ ಶ್ರೀನಾಗಲಿಂಗಪ್ಪನವರು ೨ನೇಆ ೨ಆ
೧೩ ಸಂತ-ತುಕಾರಾಮ (೨ನೇ ಆ) ೧ರೂ
೧೪ ಬೆಳದಡಿ ಶ್ರೀಬ್ರಹ್ಮಾನಂದರು ೨ಆ
೧೫ ಶ್ರೀ ಬ್ರಹ್ಮೇಂದ್ರ ಸ್ವಾಮಿಗಳು ೪ಆ
೧೬ ಮರಾಟರೂ-ಇಂಗ್ಲಿಷರೂ ೧|ರೂ
೧೭ ಶ್ರೀ ಸ ರಾಮದಾಸರು ೧ರೂ ೨ಆ
೧೮ ಶ್ರೀ ರಾಘವೇಂದ್ರವಿಜಯ ೧|ರೂ
೧೯ ಶ್ರೀರಂಗನಾಥ ಸ್ವಾಮಿಗಳು ೩ಆ
೨೦ ಶ್ರೀ ಸ್ವಾಮಿ ಶ್ರದ್ಧಾನಂದ ೧೨ಆ
೨೧ ಶ್ರೀಪಾದರಾಜ ಕಥಾಮೃತ ೧೨ಆ
೨೨ ಶ್ರೀಶೇಷಾಚಲ ಚರಿತ್ರೆ (ಪದ್ಯ) ೧೦ಆ
,, ರಫ್ ೮ಆ
೨೩ ಸಾಧು ಸದಾಶಿವಲೀಲೆ ೪ಆ
೨೪ ಸಮರ್ಥ ಪಂಚಾಯತನ ೨ರೂ
೨೫ ಸೌರಾಷ್ಟ್ರ ೩ಆ
೨೬ ಶ್ರೀ ಜ ಸು ... ೧೨ಆ
೨೭ ಶ್ರೀ ಜ್ಞಾನೇಶ್ವರರು ೮ಆ

೬ ನಾಟಕಗಳು

೧ ಜಲಂಧರ (೨ನೇ ಆವೃತ್ತಿ) ೮ಆ
೨ ದೇವ-ದಾನವರು ಗ್ಲೇಜ ೧೨ಆ
,, ರಫ್ ೧೦ಆ
೩ ನಿರ್ಭಾಗ್ಯ ಭಾರತಿ (೨ನೇ ಆ.) ೬ಆ
೪ ನಾರದಲೀಲಾ (೨ನೇ ಆ.) ೮ಆ
೫ ಪನ್ನೆ ೬ಆ
೬ ಪ್ರೇಮಲೀಲಾ ಸಂಗೀತ ೧೦ಆ
೭ ಮೋಜಿನ ಮರಣ (೨ನೇ ಆ) ೧೦ಆ
,, ರಫ್ ೮ ಆ

೩ ಪೌರಾಣಿಕ-ಪಾರಮಾರ್ಥಿಕ

೧ ಈಶಾವಾಸ್ಯೋಪನಿಷತ್ತು ೧೦ಆ
೨ ಏಕನಾಥ ಅವಧೂತಗೀತೆ ೧ರೂ
೩ ಶ್ರೀದಿನಕರರಾಮದಾಸ-ಏಲಗೀತೆ ೮ಆ
೪ ಕರ್ನಾಟಕ ಕಥಾಸರಿತ್ಸಾಗರ ೨||ರೂ
೫ ಶ್ರೀ ದಾಸಬೋಧ ಸಂಪೂರ್ಣ ೬ರೂ
೬ ಮಡಿ-ಮೈಲಿಗೆಗಳ ಗುಟ್ಟು ೪ಆ
೭ ನಂಜುಂಡ ಮಹಾತ್ಮ್ಯ [೪ನೇ ಆ]೮ಆ
೮ ಶ್ರೀ ... ಮಾಹಾತ್ಮ್ಯ ೪ಆ
೯ ವೆಂಕಟೇಶ ಮಾಹಾತ್ಮ್ಯ ೧ರೂ
೧೦ ಶ್ರೀಶೇಷಾಚಲ ಬೋಧಾಮೃತ ೧ರೂ
೧೧ ಹಂಸಗೀತೆ ೬ಆ

೮ ಧಾರ್ಮಿಕ ಹಾಗು ಇತರ

೧ ಕಾಣ್ವತ್ರಿಕಾಲ ಸಂಧ್ಯಾ ೨ಆ
೨ ಕಾಣ್ವ ನಿತ್ಯವಿಧಿ [೨ನೇ ಆ] ೮ಆ
೩ ಕರ್ನಾಟಕಕ್ಕೆ ದೇವತೆಗಳು ೧೦ಆ
೪ ಜ್ವರ ಪ್ರಕರ್ಣ ೧ರೂ
೫ ಧರ್ಮಸಿಂಧು (೧ನೇ ಭಾಗ) ೧ರೂ
೬ ಸ್ತ್ರೀಗತಿ-ದಾಸ್ಯವಿಮೋಚನ ೬ಆ
೭ ಮಿತ್ರಲಾಭ (೨ನೇ ಆವೃತ್ತಿ) ೪ಆ
ಈ ಕೆಳಗಿನ ಪುಸ್ತಕಗಳು ದೇವನಾಗರಿ ಲಿಪಿಯುಳ್ಳವುಗಳು.
೮ ಋಗ್ವೇದ ತ್ರಿಕಾಲಸಂಧ್ಯಾ ೨ಆ
೯ ಮಾ. ಯ. ಕಾಣ್ವಸಂಹಿತೆ ೩ರೂ
೧೦ ಶಾಂತಿಮಾರ್ತಂಡ ಭಾ.೧-೨ ೨ರೂ
೧೧ ಶ್ರಾದ್ಧಮಾರ್ತಂಡ[೨ನೇ ಆ] ೧ರೂ
೧೨ ಸಂಸ್ಕಾರಮಾರ್ತಂಡ ೨ರೂ
೧೩ ನಿತ್ಯವಿಧಿ (ಆಚಾರಮಾರ್ತಂಡ) ೧ರೂ
೧೪ ಉತ್ಸರ್ಜನೋಪಾಕರಣ ೮ ಆ
೧೫ ಅಗ್ನಿಮುಖ ವಿಧಿಃ ೨ಆ

**ನಾರದಲೀಲಾ** ಈ ನಾಟಕ ಪುಸ್ತಕವು ಮೈಸೂರು ಸರಕಾರದ T.B.C. No. F. D s-opt 1198 of 1931-32 (ಅಪೆಂಡಿಕ್ಸ C.) ದಂತೆ ಗವರ್ನಮೆಂಟ ಹಾಯ್, ನಾರ್ಮಲ್, ಮಿಡ್ಲ ಮತ್ತು ಪ್ರಾಯ್ಮರೀ ಸ್ಕೂಲುಗಳ ಲಾಯಬ್ರರಿಗಳಿಗಾಗಿಯೂ, ಮುಂಬಯಿ ಸರಕಾರದ ಕರ್ನಾಟಕ T.B.C. No:47/ P. 6360 of Feb. 1932ದಂತೆ ಪ್ರೈಮರಿ, ಸೆಕೆಂಡರಿ ಸ್ಕೂಲು ಹಾಗು ವ್ಹರ್ನಾಕ್ಯೂಲರ ಟ್ರೇನಿಂಗ ಕಾಲೇಜ ಇವುಗಳಲ್ಲಿ ಇನಾಮು ಕೊಡುವ ಸಲುವಾಗಿಯೂ ಮಂಜೂರಾಗಿದೆ. ಬೆಲೆ ೮ ಆಣೆ

## ಪನ್ನೆ

ಮನೋಹರವಾದ ಐತಿಹಾಸಿಕ ನಾಟಕ. ೮೦ ಪುಟ.

ಬೆಲೆ ೬ ಆಣೆ

## ಎಚ್ಚಮ ನಾಯಕ

ಹಾಳಾಗಿ ಹೋದ ವಿಜಯನಗರ ರಾಜ್ಯದ ಅರಸರುಗಳ ನಂತರ ಎಸಿದ ಯಾದವಿಗಳಲ್ಲಿ ಎಚ್ಚಮನಾಯ[illegible]ಕ್ಕೆ ನಡೆದ ಒಂದು ಘೋರ ಪ್ರಸಂಗದ ಚಿತ್ರವು ಈ ಕಾದಂಬರಿಯಲ್ಲಿ ಚಿತ್ರಿ[illegible] ಡೆಮ್ಮಿ ಪುಟ [illegible]. ಬೆಲೆ ೮ ಆಣೆ.

ಲೇಖಕ ಭಿ. ಪ. ಕಾಳೆ ] ನೇತಾಜಿ [ ಅನೇಕ ಆವೃತ್ತಿ ಬೆಲೆ ೮ ಆಣೆ

ಶ್ರೀ ಶಿವಾಜಿ ಮಹಾರಾಜರ ಬಲಗೈಯಂತಿದ್ದ ಈ ಶೂರನ ಶೌರ್ಯ-ಸಾಹಸಗಳೂ ಈತನ ತಂಗಿಯಾದ ಗಂಗೂ ಸುಂದರಿಯ ಅಚಲವಾದ ಹಿಂದುಧರ್ಮಶ್ರದ್ಧೆಯೂ ವಾಚಕರನ್ನು ತಲ್ಲಣಗೊಳಿಸುವಂತೆ ಈ ಕಾದಂಬರಿಯಲ್ಲಿ ವರ್ಣಿಸಲ್ಪಟ್ಟಿವೆ; ಅಲ್ಲದೆ ವೆಂಕಾಜಿವಾಘ, ಶ್ರೀ ಮೋರಯಾ ಗೋಸಾವಿ ಮುಂತಾದ ಪ್ರಸಿದ್ಧ ವ್ಯಕ್ತಿಗಳ ಐತಿಹಾಸಿಕ ಸಂಗತಿಗಳು ಇದರಲ್ಲಿ ಬಂದಿವೆ. ಅಲ್ಪಾವಧಿಯಲ್ಲೇ ನಾಲ್ಕು ಆವೃತ್ತಿಗಳನ್ನು ಹೊಂದಿದ ಈ ಕಾದಂಬರಿಯ ಲೋಕಾದರದ ಬಗ್ಗೆ ವಿಶೇಷ ಬರೆಯುವ ಕಾರಣವಿಲ್ಲ. ಕ್ರೌನ ಪುಟ ೧೨೮

ಲೇಖಕ ] ಭಯಂಕರ ಸೇಡು! [ ನಾಗೇಶ.

ಕಾಲಾ ಚಾಂದಸಂಬೋರ್ವ ತಪಸ್ವಿಯಾದ ಹಿಂದೂ ತರುಣನು ಧರ್ಮಾಂಧ [illegible] ಧರ್ಮಶ್ರದ್ಧೆಯ (ಸನಾತನಿಗಳಾದ) ಹಿಂದುಗಳಿಂದ ಅವಮಾನಿತನಾಗಿ ಯವನ ಧರ್ಮವನ್ನು ಸ್ವೀಕರಿಸಿ, ತನಗಾದ ಅವಮಾನದ ಸೇಡು ಎಷ್ಟು ಭಯಂಕರ ರೀತಿಯಿಂದ ತೀರಿಸಿಕೊಂಡನೆಂಬುದರ ಅದ್ಭುತವಾದ ದೃಶ್ಯವು ಈ ಐತಿಹಾಸಿಕ ಕಾದಂಬರಿಯಲ್ಲಿದೆ. ಕ್ರೌನ ಪುಟ ೬೭೦ ಗ್ಲೇಜ ಬೆಲೆ [illegible] ರೂ [illegible] ಆಣೆ ರಫ್ ಬೆಲೆ ೧ ರೂ ೪ ಆಣೆ.

ಪ್ರಕಾಶಕ—ಭಿ. ಪ. ಕಾಳೆ ಪ್ರೋ ಆನಂದವನ, ಧಾರವಾಡ